# ವೇದ ಸಂಸ್ಕೃತಿಯ ಪರಿಚಯ

( ಸಂಪುಟ : ೩ )

ದ್ವಿತೀಯ ಮುದ್ರಣ

"ಅನಭ್ಯಾಸೇನ ವೇದಾನಾಂ...ಮೃತ್ಯುರ್ವಿಪ್ರಾನ್ ಜಿಘಾಂಸತಿ"

—ಮನು.

('ಗೋವು', 'ಸೂರ್ಯ', 'ಇಂದ್ರ' ಸ್ವರೂಪ ಪರಿಚಯ)

ಗ್ರಂಥಕಾರರು :

ಪ್ರೊ. ಕೆ. ಎಸ್. ನಾರಾಯಣಾಚಾರ್ಯ



✻

ವೇದವಿದ್ಯಾ ಪ್ರಕಾಶನ

"ಮಾಲೋಲ", ಕಲ್ಯಾಣನಗರ

ಗೋವಿಂದ ನಿವಾಸ, ಧಾರವಾಡ—೭

ಧಾರವಾಡ—೭

ಪ್ರಕಾಶಕರು :

ಪ್ರೊ. ಕೆ. ಎಸ್. ನಾರಾಯಣಾಚಾರ್ಯ,
ವೇದವಿದ್ಯಾ ಪ್ರಕಾಶನ,
ಗೋವಿಂದ ನಿವಾಸ, ಧಾರವಾಡ-೭



ಪ್ರಥಮ ಮುದ್ರಣ :
೧೦೦೦ ಪ್ರತಿಗಳು

ದ್ವಿತೀಯ ಮುದ್ರಣ :
೧೦೦೦ ಪ್ರತಿಗಳು





ಕ್ರಯ : ರೂ. ೧೨/—

ಮುದ್ರಕರು :

ಶ್ರೀ ಆ. ರಾ. ಪಂಚಮುಖಿ
ಪವಮಾನ ಮುದ್ರಣಾಲಯ
ಕಾಲೇಜ ರೋಡ, ಧಾರವಾಡ

|| ಶ್ರೀಃ ||

# ಪ್ರಕಾಶಕರ ವಿಜ್ಞಾಪನೆ

ಆಸ್ತಿಕ ಮಹನೀಯರೇ,

ನಮ್ಮ ಪ್ರಕಾಶನವು ಆರಂಭವಾಗಿ ಕೇವಲ ಒಂದು ವರ್ಷದ ಈ ಅಂತರದಲ್ಲಿ ಮೂರನೆಯ ಈ ಕುಸುಮವನ್ನು ತಮ್ಮ ಕೈಯ್ಯಲ್ಲಿರಿಸುವಂತೆ ಸಾಧ್ಯವಾಗಿರುವುದು, ವೇದೋದ್ಧಾರಕನಾದ ಶ್ರೀ ಹಯಗ್ರೀವನ ಕೃಪೆಯೊಂದರಿಂದಲೇ ಎಂಬುದು ನಮ್ಮ ದೃಢವಾದ ನಂಬಿಕೆ. ನಿತ್ಯ ಜನಜೀವನದಲ್ಲಿ ನೀತಿಯಮಟ್ಟ, ನಡತೆ, ಗುಣಗಳು ಕೆಳ ಕೆಳಕ್ಕೆ ಹೋದಂತೆಲ್ಲಾ ಬೆಲೆಗಳು ಮೇಲೇರಿ ದಿನೇ ದಿನೇ "ಪ್ರಗತಿ"ಪರವಾಗುತ್ತಾ, ಸಾಂಸ್ಕೃತಿಕ ಜೀವನ ದುಸ್ಸಾಧ್ಯವಾಗುತ್ತಿರುವ ಈ ಸಂಕಟಕಾಲದದಲ್ಲಿಯೂ, ಇಂಥ ನಮ್ಮ ಅಲ್ಪ ಪ್ರಯತ್ನವು ಈ ವರೆಗೆ ನಿರ್ವಿಘ್ನವಾಗಿ ಸಾಗುತ್ತಾ ಬಂದಿರುವುದು ಬಹು ಸಮಾಧಾನದ ಸಂಗತಿ.

ಮುದ್ರಣಕಾಗದದ ಅಭಾವ. ದುಬಾರಿ ಬೆಲೆ, ವಿದ್ಯುತ್ತಿನ ಕಡಿತ, ಮುದ್ರಣವೆಚ್ಚದ ಏರಿಕೆ, ಇತ್ಯಾದಿ ಅನಿವಾರ್ಯ ಅಡಚಣೆಗಳಿಂದ ಮುಂದೆ ನಮ್ಮ ಗ್ರಂಥಮಾಲೆಯ ಕುಸುಮಗಳಿಗೆ ಎಷ್ಟು ತಯಾರಿಕೆಯ ಖರ್ಚು ಆಗಬಹುದೆಂಬ ಅಂದಾಜು, ನಿರೀಕ್ಷೆಗೇ ಸಿಲುಕದಂತಾಗಿರುವುದರಿಂದ, ಇನ್ನು ಮುಂದೆ ೪೦ ರೂ. ಸದಸ್ಯತ್ತ್ವಕ್ಕೆ ವಿರಾಮಹಾಕಬೇಕಾಗಿದೆ. ಈಗಾಗಲೇ ಸದಸ್ಯತ್ತ್ವದ ಹಣವನ್ನು ಸಲ್ಲಿಸಿರುವವರಿಗೆ ನಮ್ಮ ಗ್ರಂಥಮಾಲೆಯ ಹತ್ತು ಸಂಪುಟಗಳನ್ನು (ಎಷ್ಟೇ ಬೆಲೆ ಏರಿದರೂ) ಒದಗಿಸುವುದು ನಮ್ಮ ಕರ್ತವ್ಯವಾಗಿದೆ. ಇನ್ನು ಮುಂದೆ ಈ ಸೌಲಭ್ಯ ಅನೇಕರಿಗೆ ದೊರಕದಂತಾಗಿರುವುದಕ್ಕೆ ಬಹುವಾಗಿ ವಿಷಾದಿಸುತ್ತೇವೆ. ೧೦೦ ರೂ. ಗಳನ್ನು ಸಲ್ಲಿಸಿ, ನಮಗೂ ಸಹಾಯಮಾಡಿ. ತಾವೂ ನಮ್ಮ ಪ್ರಕಟನೆಗಳನ್ನು ಪಡೆದುಕೊಳ್ಳುವ ಒಂದು ಅವಕಾಶವನ್ನು ಮಾತ್ರ ವಾಚಕರಿಗೆ ತೆರೆದಿಡಲಾಗಿದೆ. ಆಸ್ತಿಕರು ಇದರ ಸದುಪಯೋಗವನ್ನು ಪಡೆದುಕೊಳ್ಳಬೇಕು. ಈಗಾಗಲೇ ಒಪ್ಪಿಕೊಂಡ ಸದಸ್ಯತ್ತ್ವಕ್ಕೆ ಪೂರ್ಣವಾಗಿ ಇನ್ನೂ ಹಣ ಸಲ್ಲಿಸದವರು ಈ ಕೂಡಲೇ

ಸಲ್ಲಿಸಬೇಕಾಗಿ ವಿನಂತಿ. ದೇಣಿಗೆಯ ರೂಪದಲ್ಲಿ ಉದಾರವಾಗಿ ವಾಚಕರು ಸಹಾಯಮಾಡಿ, ತಮ್ಮ ಆಪ್ತ, ಮಿತ್ರ, ಬಂಧುಗಳನ್ನೂ ಪ್ರೇರಿಸಿ ನಮಗೆ ನೆರವಾದಲ್ಲಿ ಕೃತಜ್ಞರಾಗಿರುವೆವು. ತಮ್ಮ ಸಹಕಾರವೊಂದರಿಂದಲೇ ನಡೆಯುತ್ತಿರುವ ಈ ಕಾರ್ಯ, ಲಾಭೋದ್ದೇಶದಿಂದ ದೂರವಾಗಿದೆಯೆಂಬುದನ್ನು ಈಗಾಗಲೇ ಪ್ರಕಟಿಸಿದ್ದೇವೆ.

ಈ ಹಿಂದೆ ಪ್ರಕಟಿಸಿದ್ದಂತೆ, ಇಂಗ್ಲೀಷಿನಲ್ಲಿ ಎರಡು ಸಂಪುಟಗಳಲ್ಲಿ ನಮ್ಮ ಗ್ರಂಥಮಾಲೆಯ ಸಮಗ್ರ ವಿಷಯ ಸಾರಾಂಶವನ್ನು ಪ್ರಕಟಿಸುವ ವಿಷಯವನ್ನು ಈಗ ಕೈಗೆತ್ತಿಕೊಳ್ಳಬೇಕಾಗಿದೆ. ಅನೇಕ ಆಸ್ತಿಕರ ಪ್ರಬಲ ವಾದ ಒತ್ತಾಯವು ನಮ್ಮ ಮೇಲೆ ಬರುತ್ತಿರುವುದರಿಂದ, ಮುಂದಿನ ನಮ್ಮ ಪ್ರಕಟಣೆಯು ಈ ಇಂಗ್ಲೀಷು ಗ್ರಂಥಮಾಲೆಯ ಪ್ರಥಮ ಸಂಪುಟವೇ ಆಗುವುದು. ಬೆಂಗಳೂರಿನ ಸುಪ್ರಸಿದ್ಧ ವಕೀಲರಾದ, ಶ್ರೀಮಾನ್ ಎಸ್. ವಿ. ರಾಘವಾಚಾರ್ಯರು ಬಹು ಉದಾರ ಭಾವದಿಂದ, ಸ್ವಯಂಪ್ರೇರಿತರಾಗಿ ೫೦೦ ರೂ. ಗಳನ್ನು ಸಲ್ಲಿಸಿ ಪೋಷಕರಾಗಿರುತ್ತಾರೆ. (ಈಗಾಗಲೇ ಕನ್ನಡ ಸಂಪುಟಗಳಿಗೂ ಈ ಮಹನೀಯರು ೫೦ ರೂ. ಗಳ ಕೊಡುಗೆಯಿತ್ತಿದ್ದಾರೆ.) ಇದಲ್ಲದೆ ಬೆಂಗಳೂರಿನ ಇನ್ನೊಬ್ಬ ಪ್ರಸಿದ್ಧ ವಕೀಲರಾದ ಶ್ರೀಮಾನ್ ಟಿ. ವಿ. ಗೋವಿಂದರಾಜ ಅಯ್ಯಂಗಾರ್ಯರೂ, ವೇದಪುರುಷನ ಈ ಶ್ರಮ ಸಾಧ್ಯವಾದ ಕೈಂಕರ್ಯದಲ್ಲಿ ನಮಗೆ ಬಹಳ ನೆರವಾಗಿ ಅನೇಕ ಸದಸ್ಯರನ್ನು ಸಂಗ್ರಹಿಸಿಕೊಟ್ಟು ಉಪಕರಿಸಿದ್ದಾರೆ. ಆದರೂ ಈಗಾಗಲೇ ಸಂಗೃಹೀತವಾಗಿರುವ ದ್ರವ್ಯವು ಅಗಾಧವಾದ ಈ ಕೆಲಸಕ್ಕೆ ಸಾಲದಾಗಿದೆ. ಪ್ರತಿಯೊಬ್ಬ ಆಸ್ತಿಕವಾಚಕ ಮಹನೀಯರೂ ಸ್ವಹಸ್ತ ಪರಹಸ್ತಗಳ ಮೂಲಕ ಉದಾರವಾಗಿ ಸಹಾಯ ಮಾಡುವರೆಂಬ ಆಸೆಯಿಂದ, ಧೈರ್ಯವಾಗಿ ಪ್ರವರ್ತಿಸುತ್ತಿದ್ದೇವೆ.

ಮದುವೆ, ಉಪನಯನ ಇತ್ಯಾದಿ ಆರ್ಯಸಂಸ್ಕಾರ ಸಂಭ್ರಮ ಕಾಲಗಳಲ್ಲಿ, ವಧೂ, ವರ, ವಟುಗಳಿಗೆ, ನಮ್ಮ ಗ್ರಂಥಗಳನ್ನು ಕೊಂಡು ಉಡುಗೊರೆಯಾಗಿ ಕೊಡುವ ಪರಿಪಾಠವನ್ನು ಆಸ್ತಿಕರು ಹಾಕಿಕೊಳ್ಳುವುದು, ನಮಗೂ ಸಹಾಯಕವಾಗಿ, ವೇದವಿದ್ಯಾ ಪ್ರಕಾಶನದ ಪ್ರಧಾನ ಉದ್ದೇಶವನ್ನು ನೆರವೇರಿಸುವಲ್ಲಿ ಸಹಾಯಕವಾಗುವುದು. ಶಾಲೆ, ಕಾಲೇಜುಗಳ

ಲ್ಲಿಯೂ ಬಹುಮಾನ ವಿತರಣ ಕಾಲಗಳಲ್ಲಿ ಈ ಗ್ರಂಥಗಳನ್ನು ಆಸ್ತಿಕರು ವಿದ್ಯಾರ್ಥಿಗಳಿಗೆ ಸಿಗುವಂತೆ ಮಾಡುವುದು ಇನ್ನೊಂದು ರೀತಿಯ ಸಹಾಯ.

ಗ್ರಂಥವನ್ನೋದಿದವರು, ಬೇರೆಯವರನ್ನು ಕೊಂಡು ಓದುವಂತೆ ಮಾಡುವುದರ ಮೂಲಕ, ವೇದಮೌಲ್ಯಗಳ ಪ್ರಚಾರಕ್ಕೆ ನೆರವಾಗಬೇಕು. ಅಧಿಕಾರಿಗಳಾದವರು ನಾಲ್ಕು ವೇದಾಕ್ಷರಗಳನ್ನಾದರೂ ಸ್ವರವತ್ತಾಗಿ, ಸ್ವಶಾಖೆಗಳಲ್ಲಿ ಅಧ್ಯಯನ ಮಾಡುವಂತಾದರೆ, ನಮ್ಮ ಶ್ರಮ ಸಾರ್ಥಕ. ಹಸಿದವನಿಗೆ ವ್ಯಾಕರಣವು ಆಹಾರವಲ್ಲವೆಂಬುದನ್ನೊಪ್ಪಿದರೂ, ಜ್ಞಾನವು ವಿಲಾಸ ವಸ್ತುವೆನಿಸದೆ, ಜೀವನಾವಶ್ಯಕ ಸಾಮಗ್ರಿಗಳಲ್ಲಿ ಅತಿ ಮುಖ್ಯ ವಾದುದೆಂಬುದನ್ನು ಬಾಯಿಬಿಟ್ಟು ಪದೇಪದೇ ಹೇಳಬೇಕಾಗಿದೆ. ಇಂದಿನ ನಮ್ಮ ಅನೇಕ ಸಂಕಟಗಳಿಗೆ ಜ್ಞಾನದಾರಿದ್ರ್ಯವೇ ಕಾರಣವೆಂಬು ದನ್ನು ತಿಳಿದವರು ಬಲ್ಲರು. ಆದುದರಿಂದ, ಹೊಟ್ಟೆಗಿಲ್ಲದ ಕಾಲವೆಂದು ಕುಖ್ಯಾತಿ ಪಡೆದ ಈ ಕಾಲದಲ್ಲಿಯೂ ಈ ನಮ್ಮ ಪ್ರಯತ್ನ ಮುಂದುವರಿ ಯಲೇ ಬೇಕಾಗಿದೆಯಾದ್ದರಿಂದ ಆಸ್ತಿಕರಾದ ನಮ್ಮ ವಾಚಕರು ನಮ್ಮಿಂದ ಹೇಳಿಸಿಕೊಳ್ಳದೇ ತಾವಾಗಿಯೇ ನಮಗೆ, ತಮಗೆ ಸಾಧ್ಯವಾದ ಎಲ್ಲ ರೀತಿ ಗಳಲ್ಲಿಯೂ ನೆರವಾಗುವರೆಂದು ಆಶಿಸುತ್ತೇವೆ. ಶಕ್ತರಾದವರು ಮುದ್ರಣ ಕಾಗದವನ್ನೇ ಕೊಂಡು ಕೊಡಬಹುದು; ಒಂದು ಗ್ರಂಥದ ಮುದ್ರಣ ಖರ್ಚನ್ನು ಒಬ್ಬರೋ ನಾಲ್ಕಾರು ಜನರೋ ವಹಿಸಿಕೊಂಡು ಸಹಾಯಕರಾಗ ಬಹುದು; ಬಹು ಜನರ ಸಂಪರ್ಕವಿರುವವರು ತಮ್ಮ ವೈಯಕ್ತಿಕ ಪ್ರಭಾವದಿಂದ ನಮ್ಮ ಗ್ರಂಥಗಳ ಮಾರಾಟದಲ್ಲಿ ನೆರವಾಗಬಹುದು. ಇಂಥ ಸಹಾಯ ದೊರ ಕಿದರೆ, ಹತ್ತು ಸಂಪುಟಗಳೇನು, ಹಲವು ಇನ್ನೂ ಸಂಪುಟಗಳನ್ನು ಪ್ರಕಟಿಸುವ ಬಯಕೆ ಇದೆ; ವೈದಿಕ ಮೌಲ್ಯಗಳ ಪ್ರಚಾರಕ್ಕಾಗಿಯೇ ಮಾಸಪತ್ರಿಕೆ ಯೊಂದನ್ನು ಉತ್ತರೋತ್ತರ ಕಾಲದಲ್ಲಿ ಏರ್ಪಡಿಸುವ ಆಸೆಯೂ ಇದೆ. ಭಗವಂತನು ನೆರವೇರಿಸಲಿ. ಕೇವಲ ವ್ಯಾಪಾರ ದೃಷ್ಟಿಯನ್ನು ಹೊರಗಿಟ್ಟು ನಡೆಸಲ್ಪಡುತ್ತಿರುವ ಈ ಕಾರ್ಯದಲ್ಲಿ ಪ್ರಕಾಶಕರು ವ್ಯಾಪಾರಸ್ಥರಿಗಿಂತಲೂ ಸದ್ಗೃಹಸ್ಥರನ್ನೇ ನಂಬಿಕೊಂಡಿರುವುದರಿಂದ, ರಾಷ್ಟ್ರದ ವೈಚಾರಿಕ ಅಭ್ಯು ದಯಕ್ಕೆ ಮೂಲವಾದ ಇಂತಹ ಧಾರ್ಮಿಕ ಗ್ರಂಥಗಳ ಬಗೆಗೆ ಪ್ರಚಾರ ನಡೆಸಿ

ಇವುಗಳ ಪ್ರಯೋಜನವು ಎಲ್ಲರಿಗೂ ಸಿಗುವಂತೆ ಮಾಡುವುದು ಎಲ್ಲ ಆಸ್ತಿಕರ ಆದ್ಯಕರ್ತವ್ಯ.

ಎಂದಿನಂತೆ ಸನ್ಮಾನ್ಯರಾದ ಶ್ರೀ ಉಡುಪಿರಾವ್ ಬೀಡಿಯವರೂ, ಶ್ರೀ ಪಿ. ಎಸ್. ಸವಣೂರ ಅವರೂ ಈ ಗ್ರಂಥದ ಮುದ್ರಣ ಉಸ್ತುವಾರಿ, ವಿತರಣೆ ಮುಂತಾದ ಸಕಲವಿಧ ಕೆಲಸಗಳಲ್ಲಿಯೂ ಶಕ್ತಿಮೀರಿ ದುಡಿದು ಸೇವೆ ಸಲ್ಲಿಸಿದ್ದಾರೆ. ಹುಬ್ಬಳ್ಳಿಯ ಶ್ರೀ ಕೆ. ಎನ್. ಶ್ರೀನಿವಾಸಾಚಾರ್ಯರೂ ಪುಸ್ತಕ ಪ್ರಚಾರ ಕಾರ್ಯದಲ್ಲಿ ನೆರವಾಗಿದ್ದಾರೆ. ಸಾಧನಾ ಮುದ್ರಣಾಲಯದ ಶ್ರೀ ಆರ್. ಬಿ. ವೈದ್ಯ ಅವರು ಸುಂದರವಾಗಿ ಮುದ್ರಿಸಿ ಕೊಟ್ಟಿದ್ದಾರೆ. ಇವರಿಗೆಲ್ಲ ಕೃತಜ್ಞತೆಗಳು. ಪರೋಕ್ಷವಾಗಿ ನೆರವಾದ ಎಲ್ಲರಿಗೂ ಭಗವಂತನು ಶ್ರೇಯಸ್ಸನ್ನುಂಟು ಮಾಡಲೆಂದು ಶ್ರೀ ನಾರಾಯಣಸ್ಮೃತಿ ಪೂರ್ವಕವಾಗಿ ಪ್ರಾರ್ಥಿಸಿ, ವಿರಮಿಸುವ,

ಸಜ್ಜನ ವಿಧೇಯ,
ಕೆ. ಎಸ್. ನಾರಾಯಣಾಚಾರ್ಯ

## ಎರಡನೆಯ ಮುದ್ರಣದ ಬಿನ್ನಹ

ನಮ್ಮ ಮಾಲೆಯ ಮೊದಲೆರಡು ಸಂಪುಟಗಳಂತೆಯೇ ಈ ಮೂರನೆಯ ಸಂಪುಟವೂ ಶೀಘ್ರದಲ್ಲಿಯೇ ಮರುಮುದ್ರಣಕ್ಕೆ ಬಂದಿರುವುದು ಈ ಮಾಲೆಯ ಜನಪ್ರಿಯತೆಯನ್ನು ತೋರಿಸುವುದೆಂದು ನಂಬಿದ್ದೇನೆ. ವೇದಾಭಿಮಾನಿಗಳ ಆದರವೇ ಇದಕ್ಕೆ ಕಾರಣ. ಇಡೀ ಗ್ರಂಥಮಾಲೆಯ ಸದಸ್ಯತ್ವ ಶುಲ್ಕವನ್ನು, ವಿಧಿಯಿಲ್ಲದೆ, ೧೨೫/- ರೂ. ಗಳಿಗೆ ಏರಿಸಬೇಕಾಗಿದೆ. ಮುಂದಿನ ಗ್ರಾಹಕರು ಇದನ್ನು ಗಮನಿಸಬೇಕು. ವೇದಪುರುಷನ ಈ ಸೇವೆ ನಿರಂತರವಾಗಿ ನಡೆಯಲೆಂಬುದೇ ನಮ್ಮ ಪ್ರಾರ್ಥನೆ.

ಬಹು ಶೀಘ್ರದಲ್ಲಿ, ಸುಂದರವಾಗಿ, ಈ ಮರುಮುದ್ರಣವನ್ನು ಮಾಡಿ ಕೊಟ್ಟ ಶ್ರೀ ಆ. ರಾ. ಪಂಚಮುಖಿ, ಪವಮಾನ ಮುದ್ರಣಾಲಯ, ಇವರಿಗೆ ನಮ್ಮ ಕೃತಜ್ಞತೆಗಳು.

ಶ್ರೀ ಕೃಷ್ಣಾಷ್ಟಮೀ, (ರುಧಿರೋದ್ಗಾರಿ) ಕೆ. ಎಸ್. ಎನ್.

# ವಿಷಯಾನುಕ್ರಮಣಿಕೆ

——

॥ ಶ್ರೀ ಕೃಷ್ಣಾಯ ಪರಬ್ರಹ್ಮಣೇನಮಃ ॥

ಪ್ರಾಚೀ ಸಂಧ್ಯಾ ಕಾಚಿದಂತರ್ನಿಶಾಯಾಃ ಪ್ರಜ್ಞಾದೃಷ್ಟೇರಂಜನಶ್ರೀರಪೂರ್ವಾ
ವಕ್ತ್ರೀ ವೇದಾ‌ ಭಾತು ಮೇ ವಾಜಿವಕ್ತ್ರಾ ವಾಗೀಶಾಖ್ಯಾ ವಾಸುದೇವಸ್ಯ
ಮೂರ್ತಿಃ ॥ ೧ ॥

ಗುರುಭ್ಯಸ್ತದ್ಗುರುಭ್ಯಶ್ಚ ನಮೋವಾಕಮಧೀಮಹೇ ।
ವೃಣೀಮಹೇ ಚ ತತ್ರಾದ್ಯೌ ದಂಪತೀ ಜಗತಾಂ ಪತೀ ॥ ೨ ॥



# ಪ್ರಸ್ತಾವನೆ

ಮಾನವ ಜೀವನದ ಎಲ್ಲ ಅನುಭವಗಳನ್ನೂ ಭಾಷೆಯಲ್ಲಿ ವ್ಯಕ್ತಪಡಿಸಲು ಸಾಧ್ಯವೇ ? ಭಾಷೆಯಲ್ಲಿ ಬಂದದ್ದೆಲ್ಲ ಇತರರಿಗೆ ಯಥಾವತ್ತಾಗಿ 'ತಿಳಿ' ಯುವುದೇ ? –ಎಂಬ ಈ ಎರಡು ಪ್ರಶ್ನೆಗಳಿಗೆ ಸಮಂಜಸವಾಗಿ ಉತ್ತರಿಸಿ ಕೊಂಡ ಹೊರತು ಅಮೂಲ್ಯವಾದ ಸಾಹಿತ್ಯರಾಶಿಯನ್ನು ಕೈಯ್ಯಲ್ಲಿ ಹೊಂದಿ ದ್ದರೂ ಅದರಿಂದ ಏನೂ ಪ್ರಯೋಜನ ಪಡೆಯದೇ, ಆ ಸಾಹಿತ್ಯಕ್ಕೇ ಆಳತೆ ಆಳವಿಲ್ಲದಷ್ಟು ದ್ರೋಹ ಆಗುವ ಸಂಭವವಿದೆ, ವೇದಭಾಷಾ ಸ್ವರೂಪ ವನ್ನು ಸರಿಯಾಗಿ ಗ್ರಹಿಸದೇ, ಅನೇಕ 'ಮಹನೀಯರು' ಒಂದು ವಿಚಿತ್ರ ಪರಂಪರೆಯಲ್ಲಿ ಇಂದಿಗೂ ವೇದಪುರುಷನಿಗೆ ದ್ರೋಹವನ್ನು ಮಾಡುತ್ತಲೇ ಬಂದಿದ್ದಾರೆ, ಇನ್ನೂ ಮಾಡುತ್ತಿದ್ದಾರೆ. ಈ ಸಂಬಂಧದಲ್ಲಿ ಈಗ ನಾಲ್ಕು ಮಾತುಗಳ ವಿವರ ಅವಶ್ಯವಾಗಿದೆ.

ಎಲ್ಲ ಅನುಭವಗಳನ್ನೂ ಭಾಷೆಯಲ್ಲಿ ಹೇಳುವುದು ಸಾಧ್ಯವೆಂಬ. 'ಭಾಷೆ=ಅನುಭವ,' ಎಂಬ ಸಮೀಕರಣವನ್ನು ಪಾಶ್ಚಾತ್ಯರಲ್ಲಿ ಇತ್ತೀಚೆಗೆ ಮಾಡಿ ಅವಿವೇಕಿಯಾದವನು ಹೆಗೆಲ್ ಎಂಬ ತತ್ತ್ವಶಾಸ್ತ್ರಜ್ಞನು. ಇದು ನಿಜವಾಗಿದ್ದ ಪಕ್ಷಕ್ಕೆ ಭಾಷಾ ಶಾಸ್ತ್ರಕ್ಕೆ ಸಂಬಂಧಿಸಿದ ಯಾವುದೇ ಪ್ರಶ್ನೆ ಉಳಿ ಯುವಂತೆಯೇ ಇಲ್ಲ ! ಒಬ್ಬನ ಭಾಷೆಯು ಸರಳವೂ ಮತ್ತೊಬ್ಬನದು

ಕಷ್ಟವೂ ಹೀಗೆ ವೈಪರೀತ್ಯಗಳನ್ನು ಇಲ್ಲಿ ವಿವರಿಸುವುದು ಸಾಧ್ಯವಿಲ್ಲ; ಭಾಷೆಯು ತಿಳಿಯಾಗಿರಲೇ ಬೇಕಾಗುತ್ತದೆ; ಆದರೆ ವಸ್ತುಸ್ಥಿತಿ ಜೀವನದಲ್ಲಿ ಹೀಗಿದೆಯೇ?

ಇದರಿಂದ ಮುಂದೆ ಹುಟ್ಟಿಕೊಂಡ ಅನೇಕ ದುರ್ವಾದಗಳಲ್ಲಿ ಮುಖ್ಯವಾದುದೊಂದು ಹೀಗಿದೆ: "ಭಾಷೆಯು ತಿಳಿಯಾಗಿದ್ದು, ಕೇಳುವವನಿಗೆ ಅರ್ಥವಾದಾಗ ಮಾತ್ರ ಭಾಷೆಯಲ್ಲಿ ಅನುಭವದ ಸತ್ಯಾಂಶವಿದೆ; ಅರ್ಥವಾಗದಿದ್ದಾಗ, ಭಾಷೆಯೇ ಮೋಸದಿಂದ ಉಂಟಾಗಿದ್ದು, ಅದರಲ್ಲಿ ಅನುಭವ ಅಡಕವೇ ಆಗಿರುವುದಿಲ್ಲ" ಎಂದು. ಇದರಿಂದ ಆಗುವ ಅನರ್ಥಕಾರೀ ಪರಿಣಾಮವನ್ನು ವಿವರಿಸುವುದು ಅವಶ್ಯವಾಗಲಾರದಷ್ಟೆ? ಪ್ರಾಣಮಟ್ಟದ ಜೀವನಕ್ಕೆ ಮೇಲ್ಪಟ್ಟ ಮಟ್ಟದಲ್ಲಿರುವ, ಮಾನವನ ಸಾಂಸ್ಕೃತಿಕ ಜೀವನದ ನಿಧಿಯಾಗಿರುವ, ಸಾಹಿತ್ಯ, ಸಂಗೀತ, ಧರ್ಮ, ನೀತಿ, ತತ್ತ್ವಶಾಸ್ತ್ರಗಳ ಎಲ್ಲ ಭಾಷೆಯೂ ಎಲ್ಲರಿಗೂ ಏಕ ಕಾಲದಲ್ಲಿ ತಿಳಿಯಲಾರದುದಾದರಿಂದ ಇವೆಲ್ಲವನ್ನೂ "ಮೋಸದ ಕಂತೆ"ಗಳೆಂದು ಎಸೆಯಬೇಕೆಂಬ ಇತ್ತೀಚಿನ ದುರ್ವಾದಗಳಿಗೆಲ್ಲ ಮೇಲಿನ ಅಜ್ಞಾನವೇ ಮೂಲ ಕಾರಣ.

ಈ ದುರ್ವಾದವನ್ನು ನಿರಾಕರಿಸಿದಂತೆ ನಾಟಕವಾಡಿ, ಇದಕ್ಕಿಂತ ಭಯಂಕರವಾದ 'ಸಿದ್ಧಾಂತ'ವನ್ನು ಮಂಡಿಸಿದವರಲ್ಲಿ ಬರ್ಟ್ರೆಂಟ್ ರಸ್ಸೆಲ್ ಮತ್ತು ವ್ಹಿಟ್‌ಗೀನ್‌ಸ್ಟಿನ್ ಎಂಬುವರು ಮುಖ್ಯರು. ಇವರ ಪ್ರಕಾರ ನಮಗೆ 'ಅರ್ಥ'ವಾಗದ ಭಾಷೆಯೆಲ್ಲವನ್ನೂ 'ಮೋಸ'ವೆಂದು ಕರೆಯಬೇಕಾದುದಿಲ್ಲ; ಆದರೆ ಈ ಭಾಷೆಯು ಬೇರೆ ವಿಧದ್ದಾಗಿರುತ್ತದೆ; ನೇರವಾಗಿ ಅರ್ಥಕೊಡುವ ಭಾಷೆಗೆ ಸೇರಿರುವುದಿಲ್ಲ; ಉದಾಹರಣೆಗೆ "ಇಲ್ಲಿ ಗುಲಾಬಿ ಇದೆ" ಎಂಬ ವಾಕ್ಯದಲ್ಲಿ ಯಾವ ಸಂದಿಗ್ಧತೆಯೂ ಇಲ್ಲ: ತಿಳಿಯುತ್ತದೆ. ಹಾಗಲ್ಲದೆ : "ದೇವರು ಸುಂದರನಾಗಿದ್ದಾನೆ" ಎಂಬ ವಾಕ್ಯದಲ್ಲಿ 'ದೇವರು' ಎಂದರೆ 'ಯಾವನೋ ಒಬ್ಬನು" ಎಂದಿಷ್ಟು ಮಾತ್ರ ತಿಳಿಯುತ್ತದೆ. ಈ ವಾಕ್ಯದ ಇತರ ಶಬ್ದಗಳು, ಮೊದಲೇ ಅನಿರ್ದಿಷ್ಟವಾದ ಈ ಕರ್ತೃಪದದ ಬಗೆಗೆ ಏನೋ ಕೆಲವು ವಿವರಗಳನ್ನು ನೀಡುತ್ತವೆ; ಆದರೆ, ಪೂರ್ಣವಾಗಿ ತಿಳಿಸುವುದಿಲ್ಲ. ಹೀಗಾಗಿ ಈ ವಾಕ್ಯವು ನಿಜವಲ್ಲವಾದರೂ, ಅಸತ್ಯವಲ್ಲ! —ಎಂಬುದು ಈ ವಾದದ ಧೋರಣೆ ! ಸಾಂಸ್ಕೃತಿಕ ಭಾಷೆಯನ್ನು "ತ್ರಿಶಂಕು

ವನ್ನಾಗಿಸುವ ಯಶಸ್ವೀ ಪ್ರಯತ್ನ ಇದು ! ಭಾಷೆಯಲ್ಲಿನ ಈ 'ಜಾತೀಯತೆ' ಯಿಂದಾಗಿ, ತತ್ತ್ವಧರ್ಮ ಸಾಹಿತ್ಯಕ್ಕೆ 'ಹೊಲಗೇರಿ'ಯ ಸ್ಥಾನ ಈಗ ಲಭಿಸಿದೆ ! ಉತ್ತಮ ದರ್ಜೆಯ ಭಾಷೆಯು ಪ್ರತಿಮಾಯುಕ್ತವಾಗಿ (Pictorial) ಇರುವುದೆಂದೂ, ಭೂಪಟ (ನಕಾಶ)ವು ವಾಸ್ತವ ಭೂಭಾಗಗಳನ್ನು ಚಿತ್ರಿಸುವಂತೆ ವಸ್ತುಗಳನ್ನೂ ಸಂಗತಿಗಳನ್ನೂ ಬಿಂಬಿಸುವುದೆಂದೂ ಇಂಥ ಭಾಷೆಯು ಮಾತ್ರ ಪೂರ್ಣವಾಗಿ 'ಅರ್ಥ'ವನ್ನು ಹೊಂದಿ ಸತ್ಯವಾಗಿರಲು ಶಕ್ಯವೆಂದೂ ಈ 'ಸಿದ್ಧಾಂತ'ಕಾರರ ವಾದ. ಉಳಿದುವೆಲ್ಲ 'ಅಸತ್ಯ'; ಅಥವಾ 'ಬೇರೆ ಬಗೆಯ ಸತ್ಯ!'

'ಪ್ರತಿಮೆ' ಮತ್ತು 'ಸಂಕೇತ' ಇವುಗಳಿಗಿರುವ ವ್ಯತ್ಯಾಸವನ್ನೇ ಅನೇಕರು ಗಮನಿಸಿದಂತಿಲ್ಲ. ಈಗ ಕಣ್ಣಿಗೆ ಕಂಡ ಜಗತ್ತಿನ ಯಾವುದೋ ಅಂಶವನ್ನು, ಕಂಡವನ ಮನಸೆಳೆದ ರೀತಿಯಲ್ಲಿ ಚಿತ್ರೀಕರಿಸಿ ವರ್ಣಿಸುವ ಭಾಷೆಯು 'ಪ್ರತಿಮಾ'ಯುಕ್ತವಾಗುವುದು. ಉದಾ: "ಈ ಹೂವಿನ ಗಿಡವು ಹಸಿರು ಸೀರೆಯನ್ನುಟ್ಟು ಹೂ ಮುಡಿದುಕೊಂಡಿದೆ" ಎಂಬ ವಾಕ್ಯದಲ್ಲಿ ಗಿಡವು, ನೋಡಿದವನ ಕಣ್ಣಿಗೆ ಸ್ತ್ರೀಯೊಬ್ಬಳ ಪ್ರತಿಮೆಯಲ್ಲಿ ಭಾಸವಾಗಿದೆ. ಆದರೆ ಸದ್ಯಕ್ಕೆ ಈ ವಾಕ್ಯ 'ಅರ್ಥ'ವಾದರೂ, ಆತ್ಯಂತಿಕವಾದ ಅರ್ಥ, ಭೂತಭವಿಷ್ಯಗಳನ್ನೊಳಗೊಂಡ ನಿತ್ಯನೂತನ ಅರ್ಥ, ಯಾವುದೂ ಇದರಲ್ಲಿಲ್ಲ. ಈ ವಾಕ್ಯಗಳನ್ನು, ಇಂಥ ವಾಕ್ಯಗಳನ್ನು ಆಡುವವನಿಗೆ ಆಡಿದುದರಿಂದ ಬರುವ ಮನರಂಜನೆಯೊಂದೇ ಪ್ರಯೋಜನವಾಗಿರುವುದು ಸಾಮಾನ್ಯ. ಬಾಲಿಶಸ್ವಭಾವದ (ಹುಡುಗಾಟಿಕೆಯ ಮನೋಭಾವದ) ಜನರು ಈ ವಿಧವಾದ ರಂಜನೆಯಲ್ಲಿ ತೊಡಗಿಯಾರು. ಇದರಲ್ಲಿ ನೈತಿಕವಾಗಿ ಆಕ್ಷೇಪಾರ್ಹವಾದ ವಿಷಯ ಏನೂ ಇಲ್ಲವೆಂದರೂ, ಬೋಧಕಾಂಶ, ತಾತ್ತ್ವಿಕಾಂಶಗಳು ಇರುವ ಸಂಭವವಿಲ್ಲ.

ಬೇಲಿಯ ಮೇಲೆ, ಆಗ ತಾನೇ ಉದಯವಾಗುತ್ತಿರುವ ಚಂದ್ರನನ್ನು ಕಂಡು, ಕೆಂಪು ಮೂತಿಯ ರೈತನೊಬ್ಬನಿಗೆ ಹೋಲಿಸಿ, ನಕ್ಷತ್ರಗಳನ್ನು ಬಿಳೀ ಮುಖದ, ಊರ ಹುಡುಗರಿಗೆ, ಹೋಲಿಸಿ, ಇದೇ **Imagist School** 'ಪ್ರತಿಮಾ ವಿಧಾನ'ವೆಂಬ ನೂತನ ಪಂಥದ ಆಂಗ್ಲಕವಿಯೊಬ್ಬನು ಪದ್ಯ ಬರೆದಿದ್ದಾನೆ. ಇದರಲ್ಲಿ ಇವನು ಸಾಧಿಸಿರುವುದೇನನ್ನು ? ಎಂದು ಕೇಳಿದರೆ

ಈ ಪಂಥದವರಿಗೆ ಸಿಟ್ಟು ಬರುತ್ತದೆ ! ಕಾವ್ಯದಲ್ಲಿ ಸಂದೇಶ, ನೀತಿ, ತತ್ತ್ವ, ಧರ್ಮಗಳು ಇರತಕ್ಕದ್ದಲ್ಲವೆಂದೂ, ಇವು ಕಾವ್ಯವನ್ನು 'ಅಶುದ್ಧ'ವನ್ನಾಗಿಸುವುವೆಂದೂ, "ಶುದ್ಧ ಕಾವ್ಯದ" ಬಿಸಿಲುಗುದುರೆಯ ಬೆನ್ನೇರಿದ ಈ ಭೂಪರು ವಾದಿಸುತ್ತಾರೆ !

A touch of cold in the Autumn night—
I walked abroad,
And saw the ruddy moon lean over a hedge
Like a red-faced farmer.
I did not stop to speak, but nodded,
And round about were the wistful stars
With white faces like town children.

—(Autumn, by T. E Hulme)

ಇದು ಆ ಕಾವ್ಯದ ಒಂದು ಭಾಗವಲ್ಲ ! ಇಡೀ ಕವನವೇ ಇಷ್ಟು !! ಇದರಲ್ಲಿ ಮೇಲಿನ ರೀತಿಯಲ್ಲಿ ವರ್ಣಿತವಾದ ಕೇವಲ ಮನರಂಜನೆಯಲ್ಲದೆ ಮತ್ತೇನು ಇದೆ ?

ಈಗ ನಮ್ಮ ಮುಂದಿರುವ ಪ್ರಶ್ನೆ ಇದು: ವೇದರಾಶಿಯ ಭಾಷೆ ಇಂಥದ್ದಾಗಿದೆಯೇ ?. ಎಂಬುದು. ವೇದದಲ್ಲಿ ಬರುವ ಕಥೆಗಳೂ, ಚಿತ್ರಗಳೂ, ವರ್ಣನೆಗಳೂ, ಬಾಲಿಶ ಸ್ವಭಾವದ ಅನಾಗರಿಕ ಜನರ ಮನರಂಜನೆಯ ಭಾಷೆಯೇ ? ಅಥವಾ ಸಾಂಕೇತಿಕವಾದುದೇ ?

ಈಗ ಇದನ್ನುತ್ತರಿಸಲು ಸಾಂಕೇತಿಕ ಭಾಷೆಯ ಸ್ವರೂಪವನ್ನು ತಿಳಿಯುವುದು ಅತ್ಯಗತ್ಯ.

ಈ ಶತಮಾನದ ಬಹು ಮುಖ್ಯ ತತ್ತ್ವಶಾಸ್ತ್ರಜ್ಞನಾದ ವೈಟ್‌ಹೆಡ್ ಎಂಬ ಮಹಾಶಯನು ತತ್ತ್ವಶಾಸ್ತ್ರದ ಭಾಷೆಯ ವಿಷಯಕ್ಕೆ ಹೀಗೆ ಬರೆಯುತ್ತಾನೆ : "ತತ್ತ್ವಶಾಸ್ತ್ರಜ್ಞರು ಈ ಶಾಸ್ತ್ರದ ಮೂಲ ತತ್ತ್ವಗಳನ್ನು ಸಂಪೂರ್ಣವಾಗಿ ಸೂತ್ರರೂಪಕ್ಕಿಳಿಸಲು ಎಂದೆಂದೂ ಸಾಧ್ಯವಾದೀತೆಂಬ ಆಸೆಯನ್ನೇ ಬಿಡಬೇಕಾಗುತ್ತದೆ. 'ದೃಷ್ಟಿ' ಮಾಂದ್ಯ ('ದರ್ಶನ'ದ ದುರ್ಬಲತೆ)

ಮತ್ತು ಭಾಷೆಯ ಕೊರತೆಗಳು ಅನಿರ್ವಾಹವಾಗಿ ಅಡ್ಡಲಾಗಿವೆ. ಶಬ್ದಗಳನ್ನೂ, ಪದಸಮುಚ್ಚಯಗಳನ್ನೂ, ಅವುಗಳ ನಿತ್ಯ ಬಳಕೆಗೆ ವಿನೂತನವಾದ, ಹೊರತಾದ, ಒಂದು ವಿಶಾಲಾರ್ಥಕ್ಕೆ ಚಾಚಬೇಕಾಗುತ್ತದೆ. ಭಾಷೆಯ ಈ ಅಂಶಗಳನ್ನು, ತಾಂತ್ರಿಕವಾಗಿ ಎಷ್ಟು ಸ್ಥಿರಗೊಳಿಸಿದರೂ, ಅವು ರೂಪಕಗಳಾಗಿಯೇ ಉಳಿದು, ಪ್ರತಿಭೆಯ ನೆಗೆತ, ಚಿಮ್ಮುವಿಕೆಗಳಿಗೇ ಮಾತ್ರ ಸಂವಿದಿತವಾಗಿ, ಮೂಕವಾಗಿ ಉಳಿಯುತ್ತವೆ !" (Process and Reality, p. 6)

ವೇದದ ಭಾಷೆಯು ತತ್ತ್ವಭೇದಕವಾಗಿದ್ದು, ದರ್ಶನಪ್ರೇರಿತವಾಗಿ, ಭಾಷೆಯಲ್ಲಿ ಅನುಭವವನ್ನು ವಿಮಾನದಂತೆ ಗಗನಕ್ಕೇರಿಸಿರುವ, ಉತ್ತುಂಗ ಗೀರ್ವಾಣ ವಾಣಿಯಾಗಿರುವುದೆಂಬುದು ಸನಾತನಮತ. ಇದರ ಮರ್ಮವನ್ನೇ ವಿವರಿಸಿ ಬರೆದಿರುವಂತಿದೆ, ಮೇಲಿನ ವಿವರಣೆಯಲ್ಲಿ ! ಇದನ್ನು ವೇದದ್ರೋಹಿಗಳಿಗೆ ಹೇಗೆ ಮನವರಿಕೆಮಾಡಿಕೊಡಬೇಕೆಂಬುದೇ ನಮ್ಮ ಸದ್ಯದ ಸಮಸ್ಯೆ !

ಮಾನವ ಜನಾಂಗವು, ಅಥವಾ ಯಾವುದೇ ಪ್ರಾದೇಶಿಕ ನಾಗರೀಕತೆಯು, ತನ್ನ ಶೈಶವಾವಸ್ಥೆಯಲ್ಲಿರುವಾಗ, ಪ್ರತಿಮಾ ಪೂರ್ಣವಾದ ಭಾಷೆಯೂ, ಮತ್ತು ಪಕ್ವವಾಗಿ ಜ್ಞಾನಪೂರ್ಣಾವಸ್ಥೆಯಲ್ಲಿರುವಾಗ ಸಾಂಕೇತಿಕ ಭಾಷೆಯೂ ಬರುವುದು ಸಾಧ್ಯವೆಂಬುದನ್ನು ಭಾಷಾಶಾಸ್ತ್ರಜ್ಞರು ಒಪ್ಪುವರು. ("Thus the symbolic reference belongs to one of the later originative phases of experience." Ibid,p.255.) ಏಕೆಂದರೆ ಅನುಭವದ ಒಂದಂಶವನ್ನು, ಅದೇ ಅನುಭಾವಿಯ ಅನುಭವದ ಇನ್ನೊಂದಂಶಕ್ಕೆ ಸಮನ್ವಯಿಸಿಕೊಂಡು, ವಿನೂತನ ಅರ್ಥಪೂರ್ಣ ಪ್ರಜ್ಞೆಯೊಂದನ್ನು ಸೃಷ್ಟಿಸುವುದೇ ಸಾಂಕೇತಿಕ ಭಾಷೆಯ ಸೃಷ್ಟಿ ಮರ್ಮ.

ಉದಾಹರಣೆ: (ಇದೇ ಗ್ರಂಥ ಶರೀರದಲ್ಲಿ "ಇಂದ್ರ-ವೃತ್ರ" ಪ್ರವೇಶ, ಪು, ೧೩೩- ೬೦ನ್ನು ನೋಡಿರಿ,) ದಿನ ದಿನದ ಜೀವನವು ಹದಗೆಡುತ್ತಿರುವುದನ್ನು ಒಬ್ಬ ಸಂಸ್ಕಾರ ಸಂಪನ್ನನಾದ ಮಾನವನು ಕಂಡು ಚಿಂತಿಸುತ್ತಿರುತ್ತಾನೆ: ಅಂಗಡಿಯಲ್ಲಿ ಧಾನ್ಯಗಳ ಕಲಬೆರಕೆ: ಬ್ಯಾಂಕುಗಳಲ್ಲಿ ಸಾಚಾ

ನೋಟುಗಳೊಡನೆ ಖೊಟ್ಟಿ ನೋಟುಗಳ ಕಲಬೆರಕೆ; ಸಮಾಜದಲ್ಲಿ ಎಲ್ಲರ ತಲೆಯಲ್ಲಿ ಒಳ್ಳೆಯ ವಿಚಾರಗಳ ಜೊತೆಯಲ್ಲಿ ಹಾನಿಕರ ವಿಚಾರಗಳ ಕಲಬೆರಕೆ; ಅಧಿಕಾರ ಸ್ಥಾನಗಳಲ್ಲೂ ಒಳ್ಳೆಯ-ಕೆಟ್ಟ ನಡೆವಳಿಕೆಯ ಜನರ ಕಲಬೆರಕೆ-ಇತ್ಯಾದಿ, ಕಲಬೆರಕೆಗಳ ಅಸಂಖ್ಯೇಯ ಮಾದರಿಯನ್ನು ಕಂಡು ಕಂಡು ಕೊರಗುತ್ತಿರುತ್ತಾನೆನ್ನೋಣ. ಒಂದು ದಿನ ಅವನು ಗಂಗಾನದಿಯ ದಡದಲ್ಲಿ ಒಂದು ಪರ್ವಕಾಲದ ಪ್ರದೋಷದಲ್ಲಿ ಕುಳಿತು, ಅದರ ಮೇಲೆ ತೇಲಿಬರುತ್ತಿರುವ, ಭಕ್ತರು ಗಂಗೆಗೆಂದು ಅರ್ಪಿಸಿದ, ಹೂಗಳನ್ನೂ, ದೀಪಗಳನ್ನೂ ಸುಗಂಧ-ಅಕ್ಷತೆಗಳನ್ನೂ ನೋಡಿ ಆನಂದಭರಿತನಾಗಿರುವಾಗ, ಅವುಗಳ ಹಿಂದೆಯೇ ಕೆಲವು ಖಾಲಿ ಸಿಗರೇಟು ಪ್ಯಾಕುಗಳನ್ನೂ ಚಾಕಲೇಟು ಕಾಗದಗಳನ್ನೂ, ಮದ್ಯದ ಗಡಿಗೆಗಳನ್ನೂ ...ಇತ್ಯಾದಿ ಪದಾರ್ಥಗಳನ್ನೆಲ್ಲ "ಕಂಡ" ಗಳಿಗೆಯಲ್ಲೇ, ಅವನಿಗೆ ಆವರೆಗೆ ಚಿಂತಿಸುತ್ತಿದ್ದ ವಿಚಾರಗಳಿಗೆಲ್ಲ ಗಂಗೆಯ ಈ ಪರಿಸ್ಥಿತಿಯು ಸಂಕೇತವಾಗಿ ಕಂಡು, ಈ ಚಿತ್ರದಲ್ಲಿ ಬರಿಗಣ್ಣಿಗೆ ಕಾಣದ ಅರ್ಥಗಳೆಲ್ಲ ಅನುಭವದ ಹಿನ್ನೆಲೆಯಿಂದ ಆ ಕ್ಷಣದಲ್ಲಿ ಅಲ್ಲಿ ಆವಿರ್ಭವಿಸಿ, ಚಿತ್ರದಲ್ಲಿ ಬೆರೆತು, ಹೊಸ, ರೋಮಹರ್ಷಕವಾದ ಸೃಷ್ಟಿಯು ಈ ಸಂಕೇತ ದ್ವಾರಾ ಒಡಮೂಡುತ್ತದೆ. ಇಲ್ಲಿ ಗಂಗೆಯ ಶೋಚನೀಯ ಸ್ಥಿತಿ, ಸಂಕೇತ; ಅದರಲ್ಲಿ ಅವನು ಕಂಡ ಹಿನ್ನೆಲೆಯ ಅನುಭವ ಅದರ ಅರ್ಥ. ಇವೆರಡೂ ಇಲ್ಲದೆ ಸಂಕೇತ ಇರುವ ಶಕ್ಯವಿಲ್ಲ. ಇವೆರಡೂ ಮಾನವನ ಅನುಭವ ಮಾಧ್ಯಮವಿಲ್ಲದೆ ತಮಗೆ ತಾವೇ ಸಂಕೇತ+ಅರ್ಥಗಳ ಸಂಬಂಧವನ್ನು ಹೊಂದಲಾರವು. ಇನ್ನೊಬ್ಬ ಮಾನವನಿಗೆ ಈ ಸಂಕೇತವು ಇದೇ ಅರ್ಥವನ್ನು ಕೊಡಬೇಕಾದರೆ ಅವನಿಗೆ ಇವೆರಡರ ಸ್ಪಷ್ಟ ಅರಿವು ಇರಬೇಕು, ಇದಕ್ಕೆ ಸಹೃದಯತೆ ಬೇಕು. ಇದಿಲ್ಲದೇ ಹೋದರೆ ಅಪಾರ್ಥವೇ ಆಗುವುದು.

ಭೂಮಿಯಲ್ಲಿ ಹುದುಗಿರುವ ಖನಿಜ-ನಿಧಿಯಲ್ಲವನ್ನೂ ಇಂದಿನ ಔದ್ಯೋಗೀಕರಣ ಭರದಲ್ಲಿ ಅಗೆದಗೆದು ತೆಗೆದು ಮುಗಿಸುತ್ತಿರುವ ದೃಶ್ಯವು ಬರ್ಟ್ರೆಂಡ್ ರಸ್ಸೆಲ್ಲನಿಗೆ ಪರಸ್ತ್ರೀಯೊಬ್ಬಳ ಮೇಲೆ ನಡೆದ ಅತ್ಯಾಚಾರವಾಗಿ ಕಾಣಿಸಿದೆ: (Modern industry is a kind of rape on Nature.'') ಇಲ್ಲಿ ಪ್ರತಿಮಾಪೂರ್ಣ ಚಿತ್ರವಿದೆ ನಿಜ. ಆದರೆ ಇದು ಮನರಂಜನೆಗೆಂದ್ಬು ಬಂದ, ಬಾಯಿತೀಟೆಯನ್ನು ತೀರಿಸಿಕೊಳ್ಳಲು ಹುಟ್ಟಿಬಂದ, ಉದ್ಗಾರವಲ್ಲ!

ಇಲ್ಲಿಯ ಪ್ರತಿಮೆಯು, ರಂಜನೆಯ ಬಿಂಬವಾಗುವುದರ ಬದಲು ಬೋಧಪ್ರದವಾದ, ಪ್ರಜ್ಞಾವಿಸ್ತರಣ ಚೈತನ್ಯವುಳ್ಳ, ಭಾಷೆಯ ಉಪಕರಣವಾಗಿ ಸಂಕೇತವಾಗಿದೆ. ಹೀಗೆ ಸಾಂಕೇತಿಕ ಭಾಷೆಯು ಪ್ರತಿಮೆಯನ್ನು ಜೀರ್ಣಿಸಿಕೊಂಡು ಅದನ್ನೂ ಅರ್ಥಪೂರ್ಣ ಮಾಡುತ್ತದೆ. ಆದರೆ ಕೇವಲ ಪ್ರತಿಮೆಗಳನ್ನೊಳಗೊಂಡ ಭಾಷೆಯೆಲ್ಲವೂ ಸಾಂಕೇತಿಕವಾಗಿರಲೇಬೇಕೆಂಬ ನಿರ್ಬಂಧವಿಲ್ಲ.

ಈಗ, ವೇದದ ಭಾಷೆಯು ಅಮೂಲ್ಯವಾದ ಇಂಥ ಸಂಕೇತಗಳ ದಿವ್ಯ ಭಂಡಾರವಾಗಿದೆಯೆಂಬುದು, ವೇದವನ್ನು ಅರ್ಥಮಾಡಿಕೊಂಡವರಿಗೆಲ್ಲ ತಿಳಿದ ವಿಷಯ. ಬರಿಯ ಪ್ರತಿಮೆಗಳಿಗೆ ಇಲ್ಲಿ ಜಾಗವಿಲ್ಲ. "ರವಿ ಕಾಣದ್ದನ್ನು ಕವಿ ಕಂಡ"ನೆಂಬ ಮಾತು ವೇದದಲ್ಲಿ ಅನ್ವರ್ಥವಾಗಿ, "ಕವಿ"ಗಳಾದ ಋಷಿಗಳಿಗೆ ಪರಿಪೂರ್ಣವಾಗಿ ಹೊಂದುತ್ತದೆ. ಜೀವನದಲ್ಲಿ ಹೊರಗಿನ ಜಗತ್ತು, ಪರಿಸರ ರೂಪದಲ್ಲಿ ಎಲ್ಲರಿಗೂ ಒಂದೇ ಆಗಿದ್ದರೂ, ಎಲ್ಲರಿಗೂ ಒಂದೇ ಆಗಿ ಕಾಣುವುದಿಲ್ಲ. ಸೃಷ್ಟಿಯಲ್ಲಿರುವುದನ್ನೇ ಕಾವ್ಯದಲ್ಲಿ ಇದ್ದದ್ದಿದ್ದಂತೆ ಹೇಳಿದರೆ ಕಾವ್ಯವೆನಿಸುವುದಿಲ್ಲ. ಜೀವನ ಪ್ರವಾಹದಲ್ಲಿ ನೂತನತೆಯೂ ಪ್ರತಿಕ್ಷಣದಲ್ಲಿಯೂ ಆವಿರ್ಭವಿಸುತ್ತಿರುವಂತೆಯೇ ಈ ನೂತನತೆಯನ್ನು ಕಂಡು, ಭಾಷೆಯಲ್ಲಿ ವ್ಯಕ್ತಪಡಿಸಿ, ಜೀವನವನ್ನು ಸಮಗ್ರವಾಗಿ ಮತ್ತಷ್ಟು ಸುಂದರಗೊಳಿಸುವ ದಿವ್ಯ ಪ್ರಯತ್ನ ಕಲಾವಿದನಿಗೆ ಹಕ್ಕಾಗಿರುತ್ತದೆ. ಇದಕ್ಕಾಗಿಯೇ ನಮಗೆ ಜೀವನದಲ್ಲಿ ಕಾಣದ ಸೌಂದರ್ಯಾಂಶಗಳನ್ನು ಕಾಣಲೆಂದೇ ಮಹಾಕವಿಗಳ ಕಾವ್ಯಗಳನ್ನೋದುತ್ತೇವೆ. 'ನದಿ', 'ಮೋಡ', 'ಸೂರ್ಯ', 'ಉಷಸ್ಸು', 'ನಾಯಿ', 'ಗೋವು', –ಇವು ಎಲ್ಲರಿಗೂ ಕಾಣುವ ವಸ್ತುಗಳು; ವೇದದ ಋಷಿಗಳಿಗೆ ಮಾತ್ರವಲ್ಲ. ಆ ಕಾಲಕ್ಕೆ ಮಾತ್ರವಲ್ಲ. ಆದರೆ ಇವುಗಳನ್ನು ಹಿಂದೆಂದೂ ಕಾಣದೆ, ಅವು ಕಂಡ ಕ್ಷಣದಲ್ಲಿ "ಆಃ !" ಎಂದು ಬಾಯಿಬಿಟ್ಟು, "ಆಶ್ಚರ್ಯ"ಪೂರ್ವಕವಾಗಿ, ಅವುಗಳ ಬಾಹ್ಯವರ್ಣನೆಯ ಚಪಲ ಮಾತ್ರದಿಂದ ತೃಪ್ತರಾಗುವಷ್ಟು ಹುಚ್ಚರಾಗಿದ್ದರೇ, ನಮ್ಮ ಋಷಿಗಳು? ಅಥವಾ ಇದರ ಹಿಂದೆ, ತಾವು ಸಾಂಕೇತಿಕವಾಗಿ ಕಂಡ ಅರ್ಥಗಳನ್ನು, ಕಾಣದ ನಮಗೆ ತಿಳಿಸಲು, ಸಾಧನವಾಗಿ ಬಳಸಿದರೇ ?

ಈ ಪ್ರಶ್ನೆಯನ್ನುತ್ತರಿಸಲು ವೇದ ಸೂಕ್ತಗಳನ್ನು ಬಹು ಆಳವಾಗಿ ಅಭ್ಯಸಿಸಬೇಕಾಗುತ್ತದೆ. ವೇದದ ಋಷಿಗಳಿಗೆ ಕಂಡದ್ದು 'ಪ್ರಕೃತಿ'ಯೇ ? ಅಥವಾ 'ಪ್ರಕೃತಿ'ಯ ಅರ್ಥವೇ ? ಜೀವನ ಮಾತ್ರವೇ? ಅಥವಾ ಅದರ ವಿಶೇಷ ಸ್ವರೂಪಾರ್ಥವೇ ? ಚಿತ್ರವೇ ? ಸಂಕೇತವೇ ?— ಈ ಪ್ರಶ್ನೆಗೆ ಈಗ ಉತ್ತರಿಸಲೇಬೇಕು.

ಮೊದಲ ಉತ್ತರ ಸರಿಯಾದರೆ ವೇದವನ್ನು ನಿಷ್ಪ್ರಯೋಜಕವೆನ್ನ ಬೇಕು. ಹಾಗೆ ಹೇಳಿದರೆ, ಸಹಸ್ರಾರು ವರ್ಷಗಳಿಂದ ಇಲ್ಲಿಯವರೆಗೆ ಅತಿ ಕಷ್ಟಗಳನ್ನೆದುರಿಸಿ ಇದನ್ನು ಏತಕ್ಕಾಗಿ ಕಾಪಾಡಿಕೊಂಡರೆಂದೂ, ಪರಂಪರೆ ಯಿಂದ ಉಳಿಸುತ್ತಾ ಬಂದರೆಂದೂ, ತೃಪ್ತಿಕರವಾಗಿ ಉತ್ತರಿಸಬೇಕು. ಮೊದಲ ಉತ್ತರ ಸರಿಯಾದರೆ, ಇದು ಸಾಧ್ಯವಾಗುವುದಿಲ್ಲ. ಆಗ ಕುತರ್ಕ ಗಳನ್ನು ಮಾಡಬೇಕಾಗುವುದು! ಇದಕ್ಕೆ 'ಸಂಶೋಧನೆಯ' ಬಣ್ಣ ಬಳಿಯ ಬೇಕಾಗುವುದು ! ಇಂಥ 'ಸಂಶೋಧನೆಯ' ಫಲದ ಕೆಲವು ಈಚಿನ ನಮೂನೆಗಳು ಹೀಗಿವೆ :—

ವೇದದಲ್ಲಿ 'ಸಪ್ತರ್ಷಿ' ಗಳೆಂಬುವರು ವಂಚಕರಾದ ಮಾಯಾವೀ ನಾಗಾ ಜನಗಳಂತೆ ! ಇವರು ಮೃತ್ಯುಪೂಜಕರಾದ, 'ಮಾತೃ' ಪೂಜಕರಾದ, ದುರ್ವ್ಯಾಪಾರಗಳಲ್ಲಿ ತೊಡಗಿದ್ದ ಅನಾಗರೀಕರಂತೆ ! ಉದಾರಹಣೆಗೆ ವಸಿಷ್ಠರ ಆಶ್ರಮದಲ್ಲಿದ್ದ 'ಕಾಮಧೇನು'ವೆಂದರೆ, 'ಕಣಿ' ಹೇಳುವ ಒಬ್ಬ ಹೆಣ್ಣು ಹುಡುಗಿಯಂತೆ ! ಇವಳನ್ನು ಕೊಡಬೇಕೆಂದು ವಿಶ್ವಾಮಿತ್ರರು ಕೇಳಿದ್ದ ರಿಂದ ಜಗಳವಾಗಿ, ಹೀಗೆ ವಸಿಷ್ಠ ವಿಶ್ವಾಮಿತ್ರರ ಜಗಳವು ಒಬ್ಬ ಸೂಳೆಗಾಗಿ ಆಯಿತಂತೆ ! ವೇದದಲ್ಲಿ ಬರುವ 'ಗರ್ಭ', 'ಗುಹೆ', 'ಪ್ರಜಾಪತಿ', 'ಆಪ', 'ನಾರ', 'ನಾರಾಯಣ', ನಾರದ–ಇತ್ಯಾದಿ ಎಲ್ಲ ಶಬ್ದಗಳೂ ಲೈಂಗಿಕ ಅರ್ಥಗಳನ್ನೇ ಹೊಂದಿದ್ದು, 'ವೈದಿಕ' ಋಷಿಗಳ ವ್ಯಭಿಚಾರ ಜೀವನವನ್ನು ಮುಚ್ಚಿಟ್ಟು, ಧಾರ್ಮಿಕ ಸೋಗನ್ನು ಬಳಿಯುವ ಪ್ರಯತ್ನ ಈ ಭಾಷೆಯಲ್ಲಿದೆಯಂತೆ ! 'ಅದಿತಿ ಎಂದರೂ ಒಂದೇ, 'ಅಪ್ಸರಸ್ಸು' ಎಂದರೂ ಒಂದೇ, ಎಲ್ಲವೂ ಮೃತ್ಯುಸಂಕೇತವಂತೆ ! 'ಅಕ್ಷ', 'ಪುಷ್ಪ', 'ಪುಂಡರೀಕ', 'ಚಕ್ರ', 'ಪೂರ್ಣ', 'ವೃತ್ತ', 'ವೃತ್ರ'—ಎಲ್ಲವೂ ಸ್ತ್ರೀಲಿಂಗದ (ಸ್ತ್ರೀಜನನಾಂಗದ) ಸಂಕೇತವಾಗಿದ್ದು, ಪರಮ ವೈಷ್ಣವರೆನಿಸಿ

ರುವ ವಸಿಷ್ಠ, ವಾಮದೇವಾದಿ ಋಷಿಗಳು, 'ವೃತ್ರಾ'ಸುರನನ್ನು ದೈವನಾಗಿ ಉಪಾಸಿಸುತ್ತಿದ್ದ ವಾಮಚಾರದ ಧೂರ್ತ 'ಯಾತುಧಾನ' ('ಜಾದು' ಮಾಡುವ) ರಕ್ಕಸರಂತೆ! 'ತದೇಕಂ' ಎನ್ನುವವರೆಲ್ಲರೂ, 'ರಸ'ವೇ ದೇವರೆನ್ನುವವರೂ, ಕಾವ್ಯದಲ್ಲಿ ರಸವಿದೆಯೆನ್ನುವವರೂ, 'ಬ್ರಹ್ಮಾನಂದ' ವಾದಿಗಳೂ, ಒಳಗಿನ ಜಗತ್ತು ಒಂದಿದೆಯೆನ್ನುವವರೆಲ್ಲರೂ, "ಕಣ್ಣು ಮುಚ್ಚುವ" ಸಮಯಾಚಾರದ, 'ರಾತ್ರೀ' ಪೂಜಕರಾಗಿ, ವಾಮಾಚಾರಿ ಗಳಂತೆ! "ಸತ್ಯಂ" ಎಂದರೆ "ಸ–ತೀ–ಯಂ" (ಎಂಬ ಉಪನಿಷತ್ತಿನ ನಿರ್ವ ಚನವನ್ನು ವ್ಯಭಿಚರಿಸಿ) "ಸತೀ ಇಯಂ"— ("ಬಂದಿರುವವಳು ಹೆಂಗಸು, ಒಳಗೆ ಕರೆದುಕೊಂಡು ಹೋಗು") ಎನ್ನುವ ರಹಸ್ಯಾದೇಶದ ವ್ಯಭಿಚಾರದ ಸಂಕೇತವಂತೆ!...ಇತ್ಯಾದಿ...ಇತ್ಯಾದಿ ನೂರಾರು, ಅವಿಚಾರಿತ, ಅಸಂಬದ್ಧ, ಅವಿವೇಕಪೂರ್ಣ ಮಿಥ್ಯಾರೋಪಣೆಗಳ ಕಂತೆಯೇ ಒಂದು 'ಗ್ರಂಥ'ವಾಗಿ ಅವ ತರಿಸಿದೆ. (ಋಗ್ವೇದಸಾರ: ನಾಗಪ್ರತಿಮಾವಿಚಾರ, ಶಂ. ಭಾ. ಜೋಷಿ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ೧೯೭೧). ಮನಸ್ವಿಯಾಗಿ ಬರೆ ದದ್ದೆಲ್ಲ ಗ್ರಂಥವೆನಿಸಬಹುದೆನ್ನುವುದಕ್ಕೆ ಇದು ನಿದರ್ಶನ.

ಈ ದುರ್ವಾದಗಳ ಕಂತೆಯನ್ನೆಲ್ಲ ಉತ್ತರಿಸುವುದಕ್ಕೆ ಇಲ್ಲಿ ಸ್ಥಳವಿಲ್ಲ. ಪ್ರಾಯಶಃ ಅದನ್ನು ಅಷ್ಟೊಂದು ಗಂಭೀರವಾಗಿ ಪರಿಗಣಿಸುವ ಅವಶ್ಯವೂ ಇಲ್ಲ. ಆದರೂ ಇಂಥವರು ಇನ್ನೂ ಇದ್ದಾರೆಂಬುದನ್ನೂ, ಇದಕ್ಕೂ ಪುರ ಸ್ಕಾರ ಕೊಡುವವರು ಇದ್ದಾರೆಂಬುದನ್ನೂ ತೋರಿಸುವುದಕ್ಕಾಗಿ ಮಾತ್ರ ಇಲ್ಲಿ ಹೆಸರಿಸಬೇಕಾಯಿತು, ಅಷ್ಟೆ. ಆದರೂ ಇದರ ಹಿಂದಿನ ಕೆಲವು ಅಪ್ರ ಕಟಿತ ಅಭಿಪ್ರಾಯಗಳು ದುರಾಗ್ರಹ ಪೂರ್ಣವಾಗಿರುವುದರಿಂದ ಅವುಗಳ ಬಗೆಗೆ ಎರಡು ಮಾತು ಈಗ ಅವಶ್ಯವಾಗುತ್ತದೆ.

೧. ಅನಾದಿ ಕಾಲದಲ್ಲಿ 'ಋಷಿ' 'ಮುನಿ' ಗಳೆಂಬುವವರು ಉತ್ತಮ ವಾದ, ಉದಾರವಾದ ಧ್ಯೇಯ, ವಿಚಾರಗಳನ್ನು ಹೊಂದಿರ ಬಹುದಾದ ಶಕ್ಯತೆಯಿಲ್ಲ.

೨. ಭಾಷೆಯ ಪ್ರತಿ ಶಬ್ದವೂ 'ಚಿತ್ರ'ಮಯವಾಗಿದ್ದು, ಅವುಗಳ ಮೂಲ(?)ಅರ್ಥ ಎಂದೆಂದೂ ಬದಲಾಗುವ ಸಂಭವವೇ ಇಲ್ಲ; ಬದಲು ಮಾಡಿದರೆ ಭಾಷೆಯಲ್ಲಿ ಮೋಸವಾಗುವುದು; ಅಥವಾ

ಭಾಷೆಯು ಅರ್ಥ ಶೂನ್ಯವೂ, ಭ್ರಮೆ ಉಂಟು ಮಾಡತಕ್ಕದ್ದೂ ಆಗುವುದು.

೩. ವೇದದಲ್ಲಿ ಬಂದಿರತಕ್ಕ ರೂಪಕಗಳಿಗೆಲ್ಲ, ಋಷಿಗಳ ದರ್ಶನದಲ್ಲಿ ಏನೇ ಅರ್ಥವಿರಲಿ, ಇಂಥದೇ ರೂಪಕಗಳಿಗೆ ಬೇರೆ ದೇಶ, ಕಾಲ ಗಳಲ್ಲಿ ಬೇರೆ ಜನ ಜನಾಂಗಗಳಲ್ಲಿ ಏನೇನು ಅರ್ಥಗಳಿವೆಯೋ, ಇವುಗಳಲ್ಲಿ 'ಸಂಶೋಧಕ'ನಿಗೆ ಯಾವುದು ಸೌಕರ್ಯವೋ ಅದನ್ನು ವೇದದ ಮೇಲೆ ಬಲಾತ್ಕಾರವಾಗಿ ಹೇರಿ, ಅಪಾರ್ಥ ಮಾಡಿ, ಇಷ್ಟ ಬಂದ ಸಿದ್ಧಾಂತ ಮಾಡಿ Ph.Dಪದವಿ ಪಡೆಯ ತಕ್ಕದ್ದು ! ಇಂದಿನ ಜಾತಿ–ಜಾತಿಗಳಲ್ಲಿ ಎಬ್ಬಿಸಲಾಗಿರುವ ದ್ವೇಷಕ್ಕೆ, ಹೀಗೆ ವೇದದ ಹೆಸರಿನಲ್ಲಿ ನಡೆಯುವ 'ಸಂಶೋಧನೆ'ಯು ಆಜ್ಯವಾಗತಕ್ಕದ್ದು !...ಇತ್ಯಾದಿ;

(ಇದು ಯಾವ ವಿಚಿತ್ರ ಶಾಸ್ತ್ರ ಸಿದ್ಧಾಂತವೋ ತಿಳಿಯದು; ಹೀಗೆ ಭಾಷಾ ಶಾಸ್ತ್ರವಲ್ಲ; ಹಾಗೆ ಸಮಾಜಶಾಸ್ತ್ರವಲ್ಲ; ಇತ್ತ ಭಾರತೀಯ ಪರಂಪರೆಯ ಯಾವುದೇ ವಿಚಾರಧಾರೆಯಲ್ಲ; ಅತ್ತ, ಪಾಶ್ಚಾತ್ಯಧಾರೆಯೂ ಅಲ್ಲ. ಹರಕು ಮುರುಕಾಗಿ ಅಲ್ಲಲ್ಲಿ ಅಷ್ಟಷ್ಟನ್ನು ಕಿತ್ತು ಕಿತ್ತು ತೇಪೆ ಹಾಕಿ ಸೃಷ್ಟಿಸಿ ಕೊಂಡ ಚಿಂದೀಬಟ್ಟೆಯು ಸಕಲ ಬಣ್ಣಗಳನ್ನು ಹೊಂದಿ ವಿನೋದಕರವಾ ಗಿರುವಂತೆ, ವಿನೂತನ ಶಾಸ್ತ್ರವೇ ಸರಿ ! ಇದು ಸ್ವಲ್ಪಮಟ್ಟಿಗೆ ಈ ಹಿಂದೆ ಉಲ್ಲೇಖಿಸಲ್ಪಟ್ಟ ವ್ಹಿಟ್‌ಗೇನ್‌ಸ್ಟೀನ್, ರಸ್ಸೆಲ್ ಇವರನ್ನು ಹೋಲುತ್ತದೆ ಯೆಂಬುದು ನಿಜ. ಆದರೆ ಎಷ್ಟು ಮಟ್ಟಿಗೆ ಎಂದು ಹೇಳುವುದು ಕಷ್ಟ! ಆದರೆ ಕ್ರೈಸ್ತ ಮಿಷನರಿಗಳು ಬರೆದದ್ದು ಪ್ರಧಾನ ಪ್ರೇರಕವೆಂಬುದು ಮಾತ್ರ ಸಿದ್ಧ.)

ಇದರ ಮೊದಲನೆಯ ದುರಾಗ್ರಹ ಪೀಡೆಗೆ ನಮ್ಮ ಗ್ರಂಥಮಾಲೆಯ ಎರಡನೆಯ ಸಂಪುಟದ ಪ್ರಸ್ತಾವನೆಯಲ್ಲಿ ದೀರ್ಘ ಉತ್ತರವಿದೆ.

(ಪುಟ XVII–XXIX)

ಎರಡನೆಯದಕ್ಕೆ ಸಂಬಂಧಿಸಿ ಈಗಾಗಲೇ ಪ್ರತಿಮೆಗೂ–ಸಂಕೇತಕ್ಕೂ ಇರುವ ವ್ಯತ್ಯಾಸವನ್ನು ಸೋದಾಹರಣವಾಗಿ ತೋರಿಸಲಾಗಿದೆ. ಭಾಷೆಗೆ

ಬೆಳವಣಿಗೆಯಿದೆಯೆಂಬುದನ್ನು ಒಪ್ಪಿದವರೆಲ್ಲರೂ, ಅದರ ಶಬ್ದಗಳಿಗೂ ಅರ್ಥ ಪರಂಪರೆಯಿದೆಯೆಂಬುದನ್ನು ಒಪ್ಪಲೇಬೇಕಾಗುತ್ತದೆ. ಬೆಳವಣಿಗೆಯಿಲ್ಲದ ಭಾಷೆ ಜಗತ್ತಿನಲ್ಲಿ ಯಾವುದಾದರೂ ಇದೆಯೆ? ಇದ್ದರೆ ಅದು ಯಾವುದು? 'ಸಂಶೋಧಕ'ರು ಹೇಳಲಿ! ಮಾತನ್ನು ಆಡುವವನು ಯಾವನೋ ಅವನು ಆ ಮಾತಿನ ಹಿಂದೆ ಏನನ್ನು ಹೇಳಲು ಉದ್ದೇಶಿಸಿದ್ದಾನೋ, ಅದನ್ನು ಗ್ರಹಿಸುವುದನ್ನು ಬಿಟ್ಟು, ಅವನ್ನು ಉಪಯೋಗಿಸುವ ಶಬ್ದಕ್ಕೆ ಬೇರೆಲ್ಲೋ ಏನು ಅರ್ಥ ಇರಬಹುದೋ ಅದನ್ನು ಆರೋಪಿಸಿಕೊಂಡರೆ, ಅಪಾರ್ಥವಲ್ಲದೆ ಬೇರೇನು ಆದೀತು? ಎಲ್ಲ ಶಬ್ದಗಳಿಗೂ ಮೂಲತಃ 'ಚಿತ್ರ'ವೊಂದು ಇರಲೇ ಬೇಕೇ? ಹೌದೆಂದರೆ, ಭಾಷೆಯು ಕೇವಲ ಪಂಚೇಂದ್ರಿಯಗಳಿಂದ ಗ್ರಹಿಸಲ್ಪಟ್ಟ ಅರ್ಥವನ್ನು ಮಾತ್ರ ಹೇಳಲು ಉಪಯುಕ್ತವೆಂದೂ, ಇಂದ್ರಿಯಾತೀತವಾದ ವಿಚಾರ, ಭಾವನೆಗಳು ಇರಲು ಸಾಧ್ಯವೇ ಇಲ್ಲವೆಂದೂ ಹೇಳಿದಂತಾಗುವುದು. ಇದೇ ವ್ಹಿಟ್‌ಗೀನ್‌ಸ್ಟೀನನ ಸಿದ್ಧಾಂತ! ಇದು ಅನುಭವ ವೇದ್ಯವೇ?

ಉನ್ನತವಾದ ವಿಚಾರಗಳಿರಲಿ; ವ್ಯವಹಾರದಲ್ಲಿಯೂ ಮಾತನ್ನು ಇನ್ನೊಬ್ಬರಿಗೆ ತಿಳಿಯುವಂತೆಯೂ, ಆಡುವವನ ಮನಸ್ಸಿನಲ್ಲಿದ್ದುದನ್ನು ಸಮರ್ಪಕವಾಗಿಯೂ, ಹೇಳುವುದು ಎಷ್ಟು ಕಠಿಣವೆಂಬುದು ಎಲ್ಲರಿಗೂ ತಿಳಿದಿದೆ. ಉದ್ದಾಮವಾದ ಅನುಭವ, ಭಾವ, ವಿಚಾರಗಳನ್ನು ವ್ಯಕ್ತಪಡಿಸುವವನ ಪಾಡೇನೆಂಬುದನ್ನು ಕವಿಯಾದವನು ಬಲ್ಲನು. ವೇದದ ಋಷಿಗಳಿರಲಿ, ಟಿ.ಎಸ್. ಎಲಿಯೆಟ್ ಎಂಬ ಆಂಗ್ಲಕವಿ ಬರೆಯುತ್ತಾನೆ: ಇಪ್ಪತ್ತು ವರ್ಷ ಕಾಲ ತಾನು ಕಾವ್ಯ ಬರೆದುದೆಲ್ಲ ಶಬ್ದಗಳ ಉಪಯೋಗವನ್ನು ಕಲಿಯುವ ಪ್ರಯತ್ನಮಾತ್ರವೆಂದೂ, ಇದೂ ಮುಕ್ಕಾಲು ಭಾಗ ನಿಸ್ಸಾರ್ಥಕವಾಯಿತೆಂದೂ, ಪ್ರತಿಪ್ರಯತ್ನವೂ ಹೊಸ ಬಗೆಯ ಪ್ರಯತ್ನವಾಗಿ, ಇನ್ನೊಂದು ಬಗೆಯ ವಿಫಲತೆಯಾಗಿ, (every attempt is a wholly new start, and a different kind of failure,) ಪರಿಣಮಿಸಿದೆಯೆಂದು ಬರೆಯುತ್ತಾನೆ.

ಅನುಭವವೆಂಬುದು ಮೂಕವಾದ ಗಭೀರಲೋಕ; ಕವಿಯು ಈ ಲೋಕಕ್ಕೆ ಮುತ್ತಿಗೆ ಹಾಕಿ, ಅದರ ಭಂಡಾರವನ್ನು ದೋಚುತ್ತಾನೆ; ಆದರೆ

ಅವಸಿಗಿರುವ ಸಲಕರಣೆಯು ಮಾತ್ರ ಉಜ್ಜ್ವಲವಾಗಿರದೆ, ಕ್ಷಣಕ್ಷಣಕ್ಕೂ ಭಾವನೆಗಳ ಅಸ್ಪಷ್ಟತೆಯ ಮಬ್ಬಿನಲ್ಲಿ, ಗೊಂದಲವಾಗಿ, ಕಾಂತಿರಹಿತವೂ, ಅದಕ್ಷವೂ ಆಗುತ್ತಾ ಹೋಗುತ್ತದೆ. ಇವನ ಭಾವನೆಗಳು, ಶಿಸ್ತಿಲ್ಲದ ಸಿಪಾಯಿ ಗಳ ದಳಗಳಂತಾಗಿ, ಬಲದಿಂದಲೋ ಶರಣಾಗತಿಯಿಂದಲೋ, ಅನುಭದ ಲೋಕದಲ್ಲಿ ಗೆಲ್ಲಬಹುದಾದ್ದನ್ನೆಲ್ಲ ಗೆದ್ದು, ವ್ಯಕ್ತ ಪಡಿಸಬಹುದಾದ್ದನ್ನೆಲ್ಲ ಬೇರೆಯವರು (ಜಗನ್ಮಾನ್ಯ ಕವಿಗಳು. ತತ್ತ್ವವೇತ್ತರು, ಮೇಧಾವಿಗಳು) ಈಗಾಗಲೇ ಒಮ್ಮೆಯೋ, ಹಲವು ಸಲವೋ ತಮ್ಮ ತಮ್ಮ ಗ್ರಂಥಗಳಲ್ಲಿ ವ್ಯಕ್ತಪಡಿಸಿಯಾಗಿದೆ! ಇವನಿಗೆ ಉಳಿದದ್ದೇನು ? ಎನಿಸುತ್ತದೆ. ಆದರೆ ಸ್ಪರ್ಧೆ ಮಾತ್ರದಿಂದ ಬರೆದುದು ಹಿರಿಯ ಕೃತಿಯಾಗಲಾರದು. (East Coker, lines 172-180)

ಇದು ಸುಸಂಸ್ಕೃತ ಮಾನವನ ಪರಮೋನ್ನತವಾದ ಸಾಧನೆ. ಇಷ್ಟಾ ದರೂ ಭಾಷೆಯಲ್ಲಿ ವ್ಯಕ್ತವಾದುದಕ್ಕಿಂತ, ಇನ್ನೂ ಅವ್ಯಕ್ತವಾದ ಮೂಕ ಅನುಭವದ ಪ್ರಪಂಚವೇ ದೊಡ್ಡದು. ಇದಕ್ಕಾಗಿಯೇ, ನಿರಾಶರಾದವರು ದಿವ್ಯಾನುಭವವು ಅನಿರ್ವಚನೀಯವೆನ್ನುವರು; ಮೂರ್ಖರಾದವರೋ? ಎಂದರೆ, ಅಂಥದೊಂದು ಅನುಭವವು, (ಇಂದ್ರಿಯಾತೀತವಾದದ್ದು) ಇಲ್ಲವೇ ಇಲ್ಲವೆಂದೂ, ಕಣ್ಣಿಗೆ ಕಂಡಷ್ಟು ಮಾತ್ರವೇ ಭಾಷೆಗೆ ವಿಷಯವೆಂದೂ ಹೇಳಿ, ವೇದದಲ್ಲಿ "ಅಹದ್ರ್ಯಶಃ" ಎಂಬ ಅಪಹಾಸ್ಯಕ್ಕೆ ಗುರಿಯಾಗಿದ್ದಾರೆ. (ಇದೇ ಸಂಪುಟದ ಪುಟ ೩ಳನ್ನು ನೋಡಿ) ಇವರೇ "ಪಣಿ"ಗಳು! ಸುಖ, ಪ್ರೀತಿ, ಆನಂದ, ಜಗತ್ತಿನ ಬಗೆಗೆ ಅಕ್ಕರೆ, ಅನುಕಂಪ, ಜ್ಞಾನಾತುರತೆ, ಜ್ಞಾನ ದೊರಕಲಿಲ್ಲವೆಂಬ ದುಃಖ, ಜಗತ್ತಿನ ಸಕಲ ನಿಯಮಗಳ ಮೂಲ ಬಿಂದುವಿನ ದರ್ಶನದ ತವಕ, ಒಮ್ಮೆ ಆದ ದರ್ಶನಕ್ಕೆ ಮತ್ತೆ ಹಂಬಲ,...ಇತ್ಯಾದಿ ಅನುಭವ ಪ್ರಕಾರಗಳ ಕೊನೆ ಮೊದಲಿಲ್ಲದ ರೂಪಾಂತರಗಳೆಲ್ಲ ಕಣ್ಣಿಗೆ ಕಾಣ ತಕ್ಕವೇ? ಕಾಣಲಿಲ್ಲವೆಂದರೆ ಅವು ಅಸತ್ಯವೇ ? "ಧ್ಯಾನ", "ತಪಸ್ಸು", "ಯೋಗ"—ಎಂದ ಕೂಡಲೇ, ಇವು "ಕಣ್ಣುಮುಚ್ಚಿಸತಕ್ಕ" ವ್ಯಾಪಾರ ಗಳೆಂದೂ, ರಾತ್ರೀ-ಉಪಾಸನೆಯ ವಾಮಾಚಾರದ ಆಚರಣೆಯೆಂದೂ. ವಾದಿಸುವವರಿಗೆ "ಅನುಭವಕ್ಕೆ" ಉಳಿದದ್ದೇನು ? ಇವರಿಗೆ "ಹೃದಯ ವಿದೆಯೇ? "ತಲೆ" ಇದೆಯೇ? ಇವರಲ್ಲಿ ಇರುವುದಾದೂ ಏನು ?

ಚಾರ್ವಾಕರಿಗೂ ಇವರಿಗೂ ಏನು ವ್ಯತ್ಯಾಸ? ಮೌಲ್ಯಗಳಿಲ್ಲದ ಇವರ ಜೀವನ ಪ್ರಾಣಿ ಜೀವನಕ್ಕಿಂತ ಹೇಗೆ ಬೇರೆ?

ಶಬ್ದವು ಕೇವಲ ವ್ಯವಹಾರದ ಮಾಧ್ಯಮವೆನ್ನುವುದೂ ಇದಕ್ಕೆ ಮೀರಿದ ವ್ಯಾಪಾರವೇ ಇಲ್ಲ ಎನ್ನುವುದೂ, ಒಂದು ಅತಿರೇಕ; ದಿವ್ಯಾನುಭವವು ಎಂದೆಂದೂ ಭಾಷೆಯಲ್ಲಿ ಬರಲಾರದೆಂಬುದು ಇನ್ನೊಂದು ಅತಿರೇಕ; ದಿವ್ಯಾನುಭವ ಉಂಟು; ಅದು ವ್ಯಕ್ತಪಡಿಸಲು ಬಹುಕಷ್ಟವೆಂಬದೂ ನಿಜ; ಆದರೆ ಭಗವತ್ಕೃಪೆಯಿಂದ ಅದು ತಾನೇತಾನಾಗಿ ವ್ಯಕ್ತವಾಗಿ ಋಷಿದೃಷ್ಟವಾಗಿ, ವೇದಸೂಕ್ತಗಳಲ್ಲಿ ಉಳಿದಿರುವುದು ಜಗತ್ತಿನ ಅತಿದೊಡ್ಡ "ಭಾಗ್ಯ". (ಪುಟ ೧೯೯–೧೨೦ ನೋಡಿ.) ಇದು ನಿತ್ಯಪರಂಪರೆಯಲ್ಲಿ ಸ್ವರವತ್ತಾಗಿ, ಅರ್ಥವತ್ತಾಗಿ, ಅಪೌರುಷೇಯುವಾಗಿ ಉಳಿದುಕೊಂಡಿರುವುದು, ಋಷಿಗಳ ಮಹಾ ತಪಸ್ಸಿನ ಬಲದಿಂದ, ಭಗವಂತನ ಅನುಗ್ರಹ ವಿಶೇಷದಿಂದ.

ಇಂಥ ಶಬ್ದರಾಶಿಯಲ್ಲಿ ಬಂದಿರುವ ಶಬ್ದಗಳೂ, ಕ್ರಿಯಾವಿಶೇಷಗಳೂ, ಅವಿವೇಕಿಗಳೂ ಪ್ರಾಕೃತರೂ ಆದ ಸಾಮಾನ್ಯರ ಬಾಯಲ್ಲಿ ಬರತಕ್ಕ ದಿನ ಬಳಕೆಯ ಶಬ್ದಗಳಲ್ಲ. ದಿನದಿನದ ಕ್ರಿಯಾಭ್ರಷ್ಟಾಚಾರಗಳಲ್ಲ. ದಿನಬಳಕೆಯ ಜನಜೀವನಕ್ಕೂ, ಪರಿಷ್ಕೃತವಾದ, ಯಮ-ನಿಯಮಾದಿ ಅಷ್ಟಾಂಗಸಹಿತವಾದ ದಿವ್ಯಜೀವನಕ್ರಮಕ್ಕೂ ವ್ಯತ್ಯಾಸವಿರುವುದರಿಂದ, ಈ ಭಾಷೆಗಳೂ ಭಿನ್ನವೇ. ಜನಸಾಮಾನ್ಯ ಜೀವನದಲ್ಲಿರುವ ಎಲ್ಲ ಲೋಪ-ದೋಷಗಳೂ, ಆಸೆ, ನಿರಾಸೆಗಳೂ, ದುರಾಚಾರಗಳೂ, ಕುರುಡುನಂಬಿಗೆಗಳೂ, ಮೂಢ ಆಚರಣಗಳೂ ವೇದದಲ್ಲಿ ಬರತಕ್ಕ, ಪ್ರತಿಬಿಂಬಿಸಲ್ಪಡತಕ್ಕ ಅವಶ್ಯವಿಲ್ಲ. ಆ್ಯಂಥ್ರೊಪಾಲಜಿ ಎಂಬ ಈಚಿನ ಶಾಸ್ತ್ರವು ಜನಸಾಮಾನ್ಯ ಜೀವನದ ರೀತಿ. ನೀತಿ, ಭಾವ, ವಿಚಾರಗಳ ಆವಿಷ್ಕರಣಕ್ಕೆ ಸಂಬಂಧಿಸಿದ್ದು, ಮಹಾಕಾವ್ಯಗಳಲ್ಲೂ, ಉದ್ದಾಮ ತತ್ತ್ವಗ್ರಂಥಗಳಲ್ಲೂ, ಪ್ರತಿಭಾವಂತ ವ್ಯಕ್ತಿ, ಕಲಾಕಾರರ ಕೃತಿಗಳಲ್ಲಿಯೂ ಇವರಿಗೆ ಕೆಲಸವೇನಿದೆ? "ಕಾಯಿ ಮಾರುವ ಸಂತೆಯಲ್ಲಿ ನಾಯಿಗೇನಗ ?" ಎಂಬ ಗಾದೆಯು ನೆನೆಪಾಗುತ್ತದೆ, ಇವರ ಸ್ಥಿತಿಯನ್ನು ನೋಡಿದರೆ! ಅಂತಃಕರಣವು ಬಲಿಯದೇ, ಮನಸ್ಸು, ಬುದ್ಧಿ, ಭಾವನಾ ಶಕ್ತಿಗಳು ವಿಕಾಸ ಹೊಂದದೇ ತನ್ನನ್ನು ತಾನೇ ತಿಳಿದುಕೊಳ್ಳದ ಅವಸ್ಥೆಯ ಪ್ರಾಕೃತ ಮನುಷ್ಯನ ಅಪ್ರಬುದ್ಧ ಜೀವನದ ಆಚರಣೆಗಳಲ್ಲಿ, ಅವನಿಗೇ

ತಿಳಿಯದಂತೆ ವ್ಯಕ್ತವಾಗಿರುವುದೇನು ?– ಎಂಬುದು ಬೇರೆ ಪ್ರಶ್ನೆ. ಇದು ವೇದವಾಙ್ಮಯಕ್ಕೆ ಅನ್ವಯವಾಗತಕ್ಕದ್ದಲ್ಲ. ಪ್ರಾಕೃತ ಮನುಷ್ಯನ ಭಾಷೆಗೆ ಬೇರೆಯೇ ವ್ಯಾಕರಣವಿದೆ; ಅವನ ಶಬ್ದಗಳಿಗೆ ಅರ್ಥ ಮಾಡುವ ರೀತಿ ಬೇರೆ ಇದೆ. ಅತ್ಯುಚ್ಚಮಟ್ಟದ ಅಂತರಂಗಜೀವನದ ಪರಿಷ್ಕೃತ ಅನುಭವದ ಭಾಷೆಗೆ. ಈಗಿರುವ ವ್ಯಾಕರಣವೂ, ನಿರುಕ್ತವೂ, ವೇದಾರ್ಥ ಪ್ರಯತ್ನಕ್ಕೆ ತೊಡಗಿರುವ ಬೃಹದ್ದೇವತೆಯಂಥ ಸಕಲ ಗ್ರಂಥಗಳೂ ಸಹ ಸಾಲವಾಗಿ, ಋಷಿಸದೃಶನಾದವನಿಗೇ ಮಟ್ಟಿಗೆ ಎಟಕುವ ಈ ಭಾಷೆಗ, ಈ ಸಕಲ ಗ್ರಂಥಗಳನ್ನೂ ತಳ್ಳಿಹಾಕಿ, ಇಷ್ಟ ಬಂದಂತೆ ಅರ್ಥ ಮಾಡಿದರೆ, ಇದರಿಂದ ಅಮಾನುಷವಾದ ಒಂದು ಭಯಾನಕ ಸ್ವರೂಪದ ವಿನೋದ ಮಾತ್ರವೇ ಆಗುವುದು. "ಕಣ್ಣು" ಕನ್ನಡ ಶಬ್ದ; ತಮಿಳಿನಲ್ಲಿ ಕೃಷ್ಣನನ್ನು "ಕಣ್ಣ" ಎನ್ನುತ್ತಾರೆ; ಆದುದರಿಂದ, "ಕಣ್ಣು" ಎಂದರೆ "ಸ್ತ್ರೀಯೋನಿ" ಎಂದು ಈ ಮೊದಲೇ ಗ್ರಹಿಸಿ, "ಕಣ್ಣ" ನೆಂದರೆ "ಸ್ತ್ರೀಚಪಲವುಳ್ಳವನೆಂದು ಅರ್ಥ ಮಾಡುವುದೂ, ಇದೇ ಮಾದರಿಯ ಸಹಸ್ರಾರು "ಯಾತು" "ಕೃತ್ಯ"ಗಳೂ, ಯಾವ ವ್ಯಾಕರಣಕ್ಕೆ, ನಿರುಕ್ತಕ್ಕೆ ಯಾವ ಶಾಸ್ತ್ರಕ್ಕೆ ಸಂಬಂಧಿಸಿವೆ ? ಆತ್ಮದ್ರೋಹ, ದೈವದ್ರೋಹ, ಸಮಾಜ ದ್ರೋಹಗಳ ಸಂಮ್ಮಿಶ್ರಪ್ರಕಾರ ಮಾತ್ರ, ಇದು ಆಗಿದೆ.

ಆದುದರಿಂದ ಈ ಪ್ರಯತ್ನವನ್ನು ಇನ್ನಾದರೂ ಇಂಥ ಮಹನೀಯರು ಕೈಬಿಡುವುದು ಒಳಿತು. ಅನುಭವವು ಅನಂತವಾಗಿದೆ. ಅನುಭವದ ಉತ್ತುಂಗ ಶಿಖರಗಳಂತಿರುವ ಭಾಗಗಳನ್ನು ವ್ಯಕ್ತಪಡಿಸಲು ಹೊರಡುವ ಭಾಷೆಯೂ ಅನಂತಮುಖವಾಗಿ, ಅನಂತ ಧ್ವನಿಗಳನ್ನೂ, ಭಾವವಿಶೇಷಗಳನ್ನೂ, ಒಳಗೊಳ್ಳುವುದು ಅನಿವಾರ್ಯ. ಇಂಥ ಭಾಷೆಯು ಬೇಕೆಂದೇ ಉದ್ದೇಶಪೂರ್ವಕವಾಗಿ ಓದುಗನಿಗೆ ಕಠಿಣವಾಗಲು ಹೊರಟಿರುವುದಿಲ್ಲ. ಕ್ಲಿಷ್ಟತೆಗೆ ಕಾರಣ, ಓದುಗನ ಅಪಕ್ವ ಮನಸ್ಸು, ಬುದ್ಧಿ, ಮತ್ತು ಆ ಅನುಭವ ಪ್ರಕಾರದ ಅಪರಿಚಿತತನ. ಸತತ ಅಭ್ಯಾಸದಿಂದ ಇದನ್ನು ಅರಗಿಸಿಕೊಳ್ಳುವುದನ್ನು ಬಿಟ್ಟು, ಈ ಭಾಷೆಯೇ ಸರಳವಾಗಬೇಕೆಂದು ಅಪೇಕ್ಷಿಸುವುದು ಸರಿಯಲ್ಲ. ಇಂಥ ಅಸಹಜ ಅಪೇಕ್ಷೆಯ ಹಿಂದೆ ಒಂದು ಪ್ರಮಾದವಾದ ತಪ್ಪು ಕಲ್ಪನೆಯಿದೆ. ಇದು ಪಾಶ್ಚಾತ್ಯರಿಂದ ನಮ್ಮ ಕೆಲವು 'ಸಂಶೋಧಕ'ರಿಗೆ ಬಳುವಳಿಯಾಗಿ ಬಂದಿದೆ. ಇದೇನೆಂದರೆ ಭಾಷಾಕೋಶವು ಅರ್ಥವನ್ನು ನಿರ್ದಿಷ್ಟ

ವಾಗಿ ಮಾಡಿಬಿಟ್ಟಿದೆಯೆಂದೂ, ಇದರಲ್ಲಿ ಬಾರದ ಅರ್ಥ ಏನಿದ್ದರೂ ಅಸಾಧು, ಅನುಪಯುಕ್ತ, ಅಸಂಭವ ಎಂಬುದು. ಪರಿಣಾಮ ಏನೆಂದರೆ, ಮಾನವನ ಪೂರ್ಣ ಅನುಭವದ ಪರಿಪೂರ್ಣ ಅಭಿವ್ಯಕ್ತಿಗೆ, ಮತ್ತು ತಿಳುವಳಿಕೆಗೆ ಭಾಷಾ ಕೋಶಗಳು ಏನೊಂದೂ ಸಹಾಯವಾಗದೆ, ಉಳಿದಿವೆ :—

"European learning was founded on the dictionary; and splendid dictionaries were produced. With the culmination of the dictionaries the epoch has ended. For this reason, all the dictionaries of all the languages have failed to provide for the expression of the full experience." (**Essays in Science and Philosophy,** p. 158. by A. N. Whitehead )

ಇದೂ, ಕಳೆದ ಮುನ್ನೂರು ವರ್ಷಗಳ ಯುರೋಪಿನ ಹಣೆಯಬರೆಹ ವಾಗಿದೆ ! ನಿರ್ದಿಷ್ಟಾರ್ಥಗಳನ್ನೊಳಗೊಂಡ ಶಬ್ದಗಳ ನಿರ್ದಿಷ್ಟ ಭಾಷೆಯು ಸಾಧ್ಯತೆಯ ವಿಚಾರವೆಂಬುದು ಪರಿಸರಕ್ಕೆ ಹೊಂದಲಾರದೇ ಸತ್ತುಹೋದ ಪ್ರಾಣಿಜಾತಿಗಳ ವರ್ಗಗಳೊಡನೆ ಎಂದೋ ನಿರ್ನಾಮವಾಗಬೇಕಾಗಿತ್ತೆಂದೂ ಒಬ್ಬ ತತ್ತ್ವಶಾಸ್ತ್ರಜ್ಞನು ಬರೆದಿದ್ದಾನೆ. ಗಣಿತಕ್ಕೆ ಶರಣು ಹೋಗಿ, ಶಬ್ದ ಗಳನ್ನು ಬಿಟ್ಟು, ನಿರ್ದಿಷ್ಟಾರ್ಥಕ್ಕೆ ಗಂಟು ಬೀಳೋಣವೆಂದರೂ ಅಲ್ಲೂ ಈ "ಗೋಳು" ತಪ್ಪಿದ್ದಲ್ಲ. ಬೀಜಾಕ್ಷರಗಳೂ ಬದಲಾದ ಅರ್ಥಗಳನ್ನು ಹೊಂದಿ **Variables** ಎನಿಸಿ, ಆಧುನಿಕ ಗಣಿತದ ಜೀವಾಳವಾಗಿವೆ !

ಶಬ್ದಗಳಿಗೆ ಅನಿವಾರ್ಯ ಸಂದರ್ಭಗಳಿವೆ (Contexts). ಇವುಗಳನ್ನು ತಿಳಿಯಲು ಸಹನೆ, ಸಹೃದಯತೆ, ಪರಿಶ್ರಮ ಬೇಕು. ವೇದವಾಕ್ಯಗಳಿಗೆ ಪರಸ್ಪರವಾಗಿ ವಿರೋಧಬಾರದಂತೆ, ಈ ಪರಂಪರೆಯ ಪ್ರಯತ್ನ ಮಾಲೆ ಯಿಂದಲೇ ಪ್ರಯತ್ನಿಸಬೇಕು. ಮಿಗಿಲಾಗಿ ಯೋಗಾಭ್ಯಾಸಬೇಕು; ದೈವಕೃಪೆ ಬೇಕು. ಋಷಿಗಳ ಅಂತರಂಗದ ಕಣ್ಣಿನ ಎದುರಿಗೆ ಏನೇನು ಕಂಡಿದೆಯೋ, ಅನುಭವದ ಯಾವ ಯಾವ ಶಿಖರಗಳಲ್ಲಿ ನಿಂತು ಅವರು ಮಾತನಾಡು ತ್ತಿದ್ದಾರೋ, ಇವನ್ನೆಲ್ಲ ತಿಳಿಯಲು ನಮಗಿರುವ ಏಕಮೇವ ಸಾಧನೆಯೆಂದರೆ, ಅವರು ಉಪಯೋಗಿಸಿರುವ ಸಂಕೇತಗಳು. (ಶಬ್ದಾತ್ಮಕ, ಕ್ರಿಯಾತ್ಮಕವಾದವು.)

ಇವು, ಮಾನವನ ಹೊರಗಣ್ಣಿನ ಎದುರಿಗೆ ಸರ್ವದಾ ಇವೆ: ಸೂರ್ಯ, ಅಗ್ನಿ ನೀರು, ಗೋವು, ಮೋಡ ಇತ್ಯಾದಿ ಅಸಂಖ್ಯಾತವಾಗಿವೆ. ಸಾಧಕನು ತನ್ನ ಅನುಭವದ ಕ್ಷೇತ್ರವನ್ನೂ ಅನುಭವ ಶಕ್ತಿಯನ್ನೂ, ಸಂವೇದನ ಶಕ್ತಿಯನ್ನೂ ಸತತವೂ ದೊಡ್ಡದನ್ನಾಗಿಸಿಕೊಳ್ಳಲು ಯತ್ನಿಸಬೇಕು. ಇದಕ್ಕೆ ಇಡೀ ಜೀವನವೇ ಪರಿಪೂರ್ಣವಾದ ಯೋಗವಾಗಿ, ಅಷ್ಟಾಂಗ ಯೋಗಮಯವಾಗಬೇಕಾಗುತ್ತದೆ. ವೇದವು, ಹೊತ್ತು ಕಳೆಯಲು ಬರುವ 'ಕಾದಂಬರಿ'ಯಲ್ಲ! ಇದನ್ನು ಚೆನ್ನಾಗಿ ಗ್ರಹಿಸುವುದು ಅವಶ್ಯ. ವೇದಕ್ಕೆ ಗಂಟು ಬಿದ್ದವನನ್ನು ಅದು ಪೂರ್ಣವಾಗಿ ಮಾರ್ಪಡಿಸದೇ ಇರುವುದಿಲ್ಲ. ಇಲ್ಲಿ ಕಂಡ ವಿಷಯಗಳು ಬೇರೆಲ್ಲಿಯೂ ಕಾಣತಕ್ಕವಲ್ಲವಾದ್ದರಿಂದ "ವೇದೈಃ ಪಶ್ಯಂತಿ ಪಂಡಿತಾಃ" ಎಂಬಂತೆ, ಪಂಡಿತನಿಗೆ ವೇದವೇ ಸಹಜವಾದ ಕಣ್ಣಾಗುತ್ತದೆ. ಗೋವುಗಳಿಗೆ ಕಣ್ಣುಗಳಿದ್ದರೂ ಅವು ಮೂಸಿನೋಡಿಯೇ ತಿಳಿಯುತ್ತವೆ. (ಗಾವಃ ಪಶ್ಯಂತಿ ಗಂಧೇನ). ರಾಜರೂ, ತಮಗೆ ಕಣ್ಣಿದ್ದರೂ ಚಾರರಿಂದ ಗೂಢಚರ್ಯೆಯ ಮೂಲಕ ಲೋಕವನ್ನು 'ನೋಡುತ್ತಾರೆ'. (ಚಾರೈಃ ಪಶ್ಯಂತಿ ರಾಜಾನಃ). ಪ್ರಾಕೃತನಾದ ಅವಿವೇಕಿಯು ಮಟ್ಟಿಗೆ ತನ್ನ ಹೊರಗಣ್ಣುಗಳಿಂದಲೇ ನೋಡುತ್ತಾನೆ. (ಚಕ್ಷುರ್ಭ್ಯಾಂ ಇತರೇ ಜನಾಃ). ಹೀಗೆ ವೇದಾರ್ಥವನ್ನು ಬಯಸುವವನು ಒಳಗಣ್ಣನ್ನು ತೆರೆಯುವುದು ಅವಶ್ಯ. ಋಷಿಗಳು ಕಂಡದ್ದೇನೆಂದು ಕೇಳಿದರೆ ಇಡೀ ವೇದರಾಶಿಯೇ ಉತ್ತರವಾಗುವುದು ಸಂಕ್ಷಿಪ್ತವಾಗಿ, ಯಥಾಮತಿಯಾಗಿ, ನಮ್ಮ ಯೋಗ್ಯತೆಗೆ ಎಟುಕಿದಂತೆ ವಿವರಿಸುವುದೇ ನಮ್ಮ ಗ್ರಂಥಮಾಲೆಯ ಉದ್ದೇಶ. ಎಷ್ಟು ಸುಲಭಕ್ಕೆ ತರಲು ಯತ್ನಿಸಿದರೂ, ಒಂದಷ್ಟು ಕ್ಲಿಷ್ಟತೆ ಅನಿವಾರ್ಯವಾಗಿ, ನಮ್ಮ ಈ ಗ್ರಂಥಗಳೂ ಸಹ ಕಠಿಣವಾಗಿಯೇ ತೋರಬಹುದು. ಪದೇ ಪದೇ ಮನನ ಮಾಡುವುದೊಂದೇ ಉಳಿದಿರುವ ದಾರಿ. ಅಧಿಕಾರಿಗಳಾದವರು ಈ ಶ್ರಮ ಸಹಿಸುವರು. ಸಹಿಸದವರು ಅನಧಿಕಾರಿಗಳೆಂಬುದು ಸ್ಪಷ್ಟ! ವೇದಾರ್ಥಗಳು ಸತ್ಪಾತ್ರರಿಗೆ ಸಿಗಲಿ ಎಂಬುದೇ ನಮ್ಮ ಪ್ರಾರ್ಥನೆ. ಸರ್ವಾಂತರ್ಯಾಮಿಯಾದ ಶ್ರೀಹಯಗ್ರೀವನು ಇದನ್ನು ನೆರವೇರಿಸಲಿ.

— ಶ್ರೀ ಕೃಷ್ಣಾಯನಮಃ —



ಮನ್ನಾರುಗುಡಿಯ ಶ್ರೀರಾಜಗೋಪಾಲನ ಶ್ರೀಪಾದಗಳಲ್ಲಿ

॥ ಶ್ರೀ ಕೃಷ್ಣಾಯ ಪರಬ್ರಹ್ಮಣೇ ನಮಃ ।

ಹಯಮುಖಮುಖೈಸ್ತತ್ತದ್ರೂಪೈರಕರ್ಮವಿನಿರ್ಮಿತೈಃ
ಉಪದಿಶತಿ ಯಸ್ತಥ್ಯಂ ಪಥ್ಯಂ ಸತಾಮವಸೀದತಾಂ ।
ಜನನ ಪದವೀ ಯಾತಾಯಾತಶ್ರಮಾಪಹರಾಂ
ಧಿಯಂ ಜನಯತು ಸ ಮೇ ದೇವಃ ಶ್ರೀಮಾನ್ ಧನಂಜಯ ಸಾರಥಿಃ ॥

# ೧. ವೇದದಲ್ಲಿ ಗೋವಿನ ಮಹತ್ತ್ವ

## ಪ್ರವೇಶ

"ಹಾಲಾದೆ ಕರೆದರೆ, ಮೊಸರಾದೆ ಹೆಪ್ಪರೆ,
ಮೇಲೆ ಕೆನೆಗಡೆದರೆ ಬೆಣ್ಣೆಯಾದೆ.
ಮೇಲಾದ ತುಪ್ಪವೂ ನಾನಾದೆ ಕಾಸಿದರೆ,
ನೀನಾರಿಗಾದೆಯೋ ಎಲೆ ಮಾನವಾ ?

ಹಾದಿಬೀದಿಯಲಿರುವ ಕಸದ ಹುಲ್ಲನು ಹುಡುಕಿ
ಮೇದು ಮನೆಗೈದಿ ನಾನಮೃತವೀವೆ,
ಅದನುಂಡು ನನಗೆರಡ ಬಗೆವ ಮಾನವ ಹೇಳು
ನೀನಾರಿಗಾದೆಯೋ ಎಲೆ ಮಾನವಾ ?"

ಕನ್ನಡ ನಾಡಿನಲ್ಲಿ ಈ 'ಗೋವಿನ ಗೀತೆ'ಯನ್ನು ತಿಳಿಯದವನೂ ಉಂಟೆ? ಗೋವಿನ ಪವಿತ್ರ ಜೀವನವನ್ನೂ ಇದನ್ನು ಹಿಂಸಿಸಿ ಬದುಕುವ ಮಾನವನ ಸ್ವಾರ್ಥ ಜೀವನವನ್ನೂ ಈ ಗೋವಿನ ಗೀತೆಯಂತೆ ವ್ಯಂಗಪೂರ್ಣ ಭಾಷೆಯಲ್ಲಿ ಹೃದಯಂಗಮವಾಗಿ ತಿಳಿಸಿಕೊಡುವ ಇನ್ನೊಂದು ಕಾವ್ಯವೇ ಇಲ್ಲವೆಂದರೆ ಅತಿಶಯೋಕ್ತಿಯಲ್ಲ. ಗೋವು ಪರಾರ್ಥ ಪರೋಪಕಾರಗಳ ಸಾಕಾರ ಮೂರ್ತಿ. ತಲೆತಲಾಂತರಗಳಿಂದ ಗೋಪೂಜೆ ಭಾರತೀಯ ಸಂಸ್ಕೃ

ತಿಯ ಜೀವನಾಡಿಯಾಗಿ ಬಂದಿದ್ದು, ಇಂದಿನ ನಮ್ಮ ಸಂಸ್ಕೃತಿಯ ಗಂಡಾಂತರದ ಸಂಕ್ರಾಂತಿ ಕಾಲದಲ್ಲಿ ಇದರ ಮಹತಿಯನ್ನು ವೇದದರ್ಶನದ, ವೇದ ಸೂಕ್ತಗಳ ಹಿನ್ನೆಲೆಯಲ್ಲಿ ಅರಿತುಕೊಳ್ಳುವುದು ಅತ್ಯವಶ್ಯಕವಾಗಿದೆ. ಇದೇ ಪ್ರಕೃತ ಲೇಖನದ ಉದ್ದೇಶ.

ಭಾರತೀಯರು ಕೇವಲ ಪ್ರಕೃತಿಯ ವಿವಿಧ ಶಕ್ತಿಗಳನ್ನು ಪೂಜಿಸುವಷ್ಟು "ಅನಾಗರಿಕರು" ಎಂದು ಕ್ರೈಸ್ತಮಿಷನರಿಗಳು ನಮ್ಮ ಸನಾತನ ಧರ್ಮವನ್ನು ಹೀಗಳೆದು, ಭಾರತೀಯರಿಗೆ ತಮ್ಮ ಧರ್ಮದಲ್ಲಿ ಜುಗುಪ್ಸೆ, ಅನಾದರ ಭಾವ ಮೂಡಿಸಲು ಹೂಡಿದ ದೊಡ್ಡ ಸಂಚಿನ ಬಗೆಗೆ ನಮ್ಮ "ವೇದಸಂಸ್ಕೃತಿಯ ಪರಿಚಯ"ದ ಪ್ರಥಮ ದ್ವಿತೀಯ ಸಂಪುಟಗಳಲ್ಲಿ ಈಗಾಗಲೇ ಸಾಕಷ್ಟು ವಿವರಣೆ ನೀಡಲಾಗಿದೆ. "ಭಾರತೀಯರು ಗಿಡಮರ ಬಳ್ಳಿಗಳನ್ನೂ, ಪಶುಪಕ್ಷಿಗಳನ್ನೂ ಪೂಜಿಸುವ ಪರಮಮೂರ್ಖರು" ಎಂದು, ಈ "ಮಹನೀಯರು" ನಡೆಸಿರುವ ಅಪಪ್ರಚಾರಕ್ಕೆ ಇನ್ನೂ ವಿರಾಮಸಿಕ್ಕಂತೆ ಕಾಣುತ್ತಿಲ್ಲ. ಸರ್ ಮೋನಿಯರ್ ವಿಲಿಯಮ್ಸ್ ಎಂಬ ಪ್ರಸಿದ್ಧ ಪಾದ್ರಿಯು "ಹಿಂದೂ ಧರ್ಮ" ಎಂಬ ತನ್ನ ಗ್ರಂಥದಲ್ಲಿ ಹೀಗೆ ಬರೆದಿದ್ದಾನೆ:

"Everything great and useful everything strange, monstrous, and unusual, whether good or evil, is held to be permeated by the presense of the divinity. It is not merely all the mighty phenomena and forces of the universe— all the most striking manifestations of almighty energy— that excite the awe and attract the reverence of the ordinary Hindu. There is not an object in earth or heaven which he is not prepared to worship— rocks, stocks, and stones, trees, pools, and rivers, his own implements of trade, the animals he finds most useful, the noxious reptiles he fears men remarkable for any extraordinary qualities— for great valour, sanctity, virtue, or even vice; good and evil demons, ghosts and goblins the spirits of the departed ancestors, an

infinite number of semi-human, semi-devine existences—inhabitants of the seven upper and the seven lower worlds—each and all of these come in for a share of divine honour or a tribute of more or less adoration. Verily, the Hindu Pantheon has a place for everybody and everything''.

(p 118)

("ಯಾವುದೆಲ್ಲ ದೊಡ್ಡದೋ, ಉಪಯುಕ್ತವೋ—ಏನೆಲ್ಲ ವಿಚಿತ್ರವೋ, ಭಯಂಕರವೋ, ಅಸಾಮಾನ್ಯವೋ, ಒಳ್ಳೆಯದಾಗಲಿ, ಕೆಟ್ಟದ್ದಾಗಲಿ ದೈವದ ವಾಸದಿಂದ ಪರಿಪೂರ್ಣವಾಗಿದೆ ಎಂದು ಬಗೆಯಲ್ಪಡುತ್ತದೆ. ವಿಶ್ವದ ಮಹಾ ಶಕ್ತಿಗಳಾಗಲಿ, ಪ್ರಕೃತಿಯ ಪ್ರಬಲ ವ್ಯಾಪಾರಗಳಾಗಲಿ—ಒಟ್ಟಿನಲ್ಲಿ ಶಕ್ತಿಯು ಸರ್ವಶಕ್ತತೆಯ ಪ್ರಧಾನ ಆವಿಷ್ಕಾರಗಳು — ಮಾತ್ರವಲ್ಲ. ಸಾಮಾನ್ಯ ಹಿಂದುವಿನ ಭಯಭಕ್ತಿಗಳಿಗೆ ಪ್ರೇರಕಗಳು ! ಅವನು ಪೂಜಿಸಲು ಸಿದ್ಧನಾಗದ ವಸ್ತುವೊಂದು ಭೂಮಿಯಲ್ಲಾಗಲಿ ಸ್ವರ್ಗದಲ್ಲಾಗಲಿ ಇಲ್ಲ ! —ಕೋಡು ಬಂಡೆಗಳು, ಮರದ ಬುಡಗಳು, ಕಲ್ಲುಗಳು, ಸರೋವರಗಳು, ನದಿಗಳು, ತನ್ನದೇ ವ್ಯಾಪಾರದ ಆಯುಧ ಸಲಕರಣೆಗಳು, ತನಗುಪಯುಕ್ತವಾದ ಪ್ರಾಣಿಗಳು, ಭಯಂಕರಗಳಾದ ಸರೀಸೃಪಗಳು, ಅತಿಶಯ ಗುಣಯುಕ್ತರಾದ ಮನುಷ್ಯರು ಮಹಾಪರಾಕ್ರಮ, ಪಾವಿತ್ರ್ಯ, ಸದ್ಗುಣ ಅಥವಾ ದುರ್ಗುಣ ಏನೇ ಆಗಲಿ; ಒಳ್ಳೆಯ ಕೆಟ್ಟ ಭೂತಗಳು, ಪಿಶಾಚಿಗಳು, ಪ್ರೇತಗಳು, ಪಿತೃಗಳ ಆತ್ಮಗಳು, ಸಂಖ್ಯಾತೀತವಾದ ಅರೆಮಾನವ—ಅರೆದೈವೀ ಭೂತ ಗಳು, ಸಪ್ತ ಊರ್ಧ್ವ ಅಧೋಲೋಕಗಳ ನಿವಾಸಿಗಳು — ಇವೆಲ್ಲವೂ ಒಂದೊಂದೂ ಸಹ ಒಂದಿಷ್ಟು ದೇವತ್ತ್ವ ಗೌರವವನ್ನು ಪಡೆದಿರುವು ವಲ್ಲದೇ ಹೇಗೋ ಆರಾಧ್ಯ ವಸ್ತುಗಳಾಗಿವೆ. ಖಂಡಿತವಾಗಿಯೂ ಹಿಂದೂ ಗಳ ದೇವಾಗಾರದಲ್ಲಿ ಎಲ್ಲರಿಗೂ ಎಲ್ಲಕ್ಕೂ ಒಂದು ಸ್ಥಾನವಿದ್ದೇ ಇದೆ".)

ಈ ಮಾತುಗಳನ್ನು ಬರೆದವನಿಗೆ ಹಿಂದೂ ಧರ್ಮದ ಹೃದಯ ವೈಶಾಲ್ಯವನ್ನು ಎತ್ತಿ ತೋರಿಸುವುದು ಇಲ್ಲಿ ಪ್ರಕೃತವಲ್ಲ ! ಪೂಜಾನರ್ಹವಸ್ತುಗಳನ್ನು ಹಿಂದುಗಳು ಪೂಜಿಸುವರೆಂದೂ ಒಬ್ಬ ದೇವರ ಕಲ್ಪನೆ ಇಲ್ಲಿಲ್ಲವೆಂದೂ

ಅಪಹಾಸ್ಯ ಮಾಡುವುದೇ ಇವನ ಉದ್ದೇಶ್ಯ. (ಇದಕ್ಕೆ ಉತ್ತರವನ್ನು ನಮ್ಮ ಮಾಲೆಯ ಪ್ರಥಮ ಸಂಪುಟದ ೬೭–೭೫ ಪುಟಗಳಲ್ಲಿ ನೋಡಬಹುದು.) ದೇವರು ಒಬ್ಬನೇ ಆದರೂ ಅವನಿಗೆ ಅನಂತ ಮುಖಗಳು, ರೂಪಗಳು, ಅಂಶಗಳು ಎಂಬುದು ವೇದದ ವಿಶಾಲ ಹೃದಯ. ದೇವರಿಗೆ ಆಕಾರವಿಲ್ಲವೆಂದೂ ಆಕಾರವುಳ್ಳ ವಸ್ತುಗಳಲ್ಲಿ ದೇವರು ಇರುವ ಸಂಭವವೇ ಇಲ್ಲವೆಂದೂ ಹಠಮಾರಿತನ ತೊಟ್ಟಿರುವ ಕ್ರೈಸ್ತ ಮತ್ತು ಸಮಾನದೋಷವುಳ್ಳ ಇತರ ಮತಗಳಲ್ಲಿ ವೇದದ ದರ್ಶನದ ಬಗೆಗೆ ಸಹೃದಯತೆ ಹೇಗೆ ಮೂಡೀತು ? "ಸರ್ವಂ ಖಲ್ವಿದಂ ಬ್ರಹ್ಮ" ಎಂಬ ಶ್ರುತಿ ವಾಕ್ಯದ ಸ್ವಾರಸ್ಯ ಇವರಿಗೆ ತಿಳಿಯುವುದೆಂತು? "ಏಕಮೇವಾದ್ವಿತೀಯಂ" ಎಂಬ ಶ್ರುತಿಯ "ಏಕ"ವು "ಸರ್ವಂ" ಶಬ್ದದ ಸಮಾನಾರ್ಥಕವೆಂಬುದು ನಮ್ಮ ದರ್ಶನ. "ಏಕ"ದಲ್ಲಿ "ಸರ್ವ"ವು ಇಲ್ಲವಾದರೆ "ಏಕ"ಕ್ಕೆ ಏನರ್ಥ ? "ಅನರ್ಥ"ವೇ ಅಲ್ಲವೆ ? "ಏಕ"ವು "ಸರ್ವ" ವಿರೋಧಿಯೇ ಆದರೆ ಕೇಳಬೇಕಾದುದೇನು ?

ವಿಶ್ವಪ್ರಸಿದ್ಧವಾದ ರೋಮಕಸಾಮ್ರಾಜ್ಯವು ನಾಶವಾದುದಕ್ಕೆ ಮುಖ್ಯವಾದ ನಾಲ್ಕು ಕಾರಣಗಳಲ್ಲಿ ಕ್ರೈಸ್ತಮತದ ಉದಯವೂ ಅವರ ಮತಾಂಧತೆಯೂ ಒಂದೆಂಬುದನ್ನೂ, ಈ ವಿಷಯದಲ್ಲಿ ಇದೇ ಮತದ ಅವಲಂಬಿಗಳು ಆದೇ ಕಾಲದಲ್ಲಿ ಅನಾಗರೀಕರೆಂದು ಕರೆಯಲ್ಪಡುತ್ತಿದ್ದವರಿಗಿಂತಲೂ ಕೀಳು ಮಟ್ಟದ ಸಂಸ್ಕೃತಿಯುಳ್ಳವರೆಂತಲೂ ಗಿಬ್ಬನ್ ಎಂಬ ಸುಪ್ರಸಿದ್ಧ ಇತಿಹಾಸಜ್ಞನು ತನ್ನ The Decline and Fall of the Roman Empire ಎಂಬ ಗ್ರಂಥದಲ್ಲಿ ಬರೆದಿದ್ದಾನೆ. ರೋಮಕರು ಭಾರತೀಯರಂತೆ ವಿಗ್ರಹಾರಾಧಕರಾಗಿದ್ದರು. ಭಗವದಾರಾಧನೆಯಲ್ಲಿ ಮಾನವರು ತಮಗೆ ಇಷ್ಟವಾದ ಆಕಾರದಲ್ಲಿ, ಅಂಶದಲ್ಲಿ, ರೀತಿಯಲ್ಲಿ ಅವನನ್ನು ಆರಾಧಿಸಬಹುದೆಂಬ ವಿಶಾಲ ಭಾವನೆಯ ಹಿನ್ನೆಲೆಯಲ್ಲಿ ರೋಮಕ ಸಾಮ್ರಾಜ್ಯದಲ್ಲಿ, ರೋಮ್ ನಗರದಲ್ಲಿ, ಅಸಂಖ್ಯಾತ ದೇವಾಲಯಗಳಿದ್ದವು. ದೊಡ್ಡ ಸಾಮ್ರಾಜ್ಯವನ್ನು ಅವರು ಕಟ್ಟಲು ಅವರಿಗೆ ಈ ವಿಶಾಲಭಾವನೆಯೇ ಸ್ಫೂರ್ತಿದಾಯಕವಾಯಿತು. ಇದನ್ನು ಸಂಪೂರ್ಣ ನಾಶಮಾಡಲು, ಈ ದೃಷ್ಟಿಗೆ ಸಂಪೂರ್ಣ ವಿರೋಧಿಯಾದ ಸೇಡು – ವಿನಾಶಗಳ ಮನೋಭಾವ, ವಿಸ್ತರಣದ ಮಹತ್ವಾ

ಕಾಂಕ್ಷೆಯನ್ನೇ ಮುಖ್ಯ ಲಕ್ಷಣವನ್ನಾಗಿ ಉಳ್ಳ ಒಂದು ದುಷ್ಟ ಶಕ್ತಿಗೆ ಮಾತ್ರ ಸಾಧ್ಯವಿತ್ತೆಂದೂ, ಇಂತಹ ಪರಿಪೂರ್ಣವಿನಾಶ ಸ್ವರೂಪಶಕ್ತಿಯು ಕ್ರೈಸ್ತ ಮತದ ಅಸಹಿಷ್ಣುತೆಯೇ ಆಗಿದ್ದಿತೆಂದೂ, ಗಿಬ್ಬನ್ ಮಹಾಶಯನು ಬರೆದಿದ್ದಾನೆ. ರೋಮ್ ಸಾಮ್ರಾಜ್ಯದ ಉತ್ತರಕ್ಕೆ ವಾಸಿಸುತ್ತಿದ್ದ "ಅನಾಗರಿಕ" ಜನಾಂಗಗಳ ಬಗೆಗೂ ಅವರಿಂದ ಈ ಸಾಮ್ರಾಜ್ಯಕ್ಕೆ ಒದಗಿತೆಂದು ಹೇಳಲಾದ ತೊಂದರೆಗಳ ಬಗೆಗೂ ವ್ಯತ್ಯಾಸ ತೋರಿಸಿ ಬರೆಯುತ್ತಾ ಗಿಬ್ಬನ್ ಮಹಾಶಯನು ಹೀಗೆ ಬರೆಯುತ್ತಾನೆ :

"But in simple truth, the northern conquerors were neither sufficienty savage, nor sufficiently refined, to entertain such aspiring ideas of destruction and revenge....... nor could they derive either pride or pleasure from the improfitable reflection that they had battered to the ground the works of consuls and Caesars...... From these innocent barbarians the reproach may be transferred to the Catholics of Rome. The statues, altars, and houses, and houses of demons were an abominatian in their eyes; and in the absolute command of the City they might labour with zeal and perseverance to erase the idolatry of their ancertors." (Laurel edition, p. 705).

ಹೀಗೆ ಭವ್ಯವಾಗಿದ್ದ ರೋಮ್ ಸಾಮ್ರಾಜ್ಯವನ್ನು ನಿರ್ನಾಮಮಾಡಿದ ಕ್ರೈಸ್ತರು ಆ ಸಂಸ್ಕೃತಿಯ ಬದಲು ಅಲ್ಲಿ "ಪ್ರತಿಷ್ಠಿಸಿ"ದುದೇನನ್ನು ? "ಕತ್ತಲೆಯ ಯುಗಗಳು" Dark Ages, ಅಥವಾ "ಮಧ್ಯಯುಗ" Middle Ages ಎಂದು ಪ್ರಸಿದ್ಧವಾದ ಹತ್ತು ಶತಮಾನಗಳ ಅಂಧಕಾರವನ್ನು ಮಾತ್ರ, ಎಂಬುದು ಐರೋಪ್ಯ ಚರಿತ್ರೆಯ ಪಾಠ! ಕ್ರೈಸ್ತರು ಸುಂದರ ವಸ್ತುಗಳನ್ನು ವಿನಾಶಗೊಳಿಸುವುದರಲ್ಲಿ ಅಗ್ರಗಣ್ಯರೆಂಬುದೂ, ಸೃಜನ ಶಕ್ತಿಯೆಂಬುದು ಮತಾಂಧತೆಯ ಕಾರಾಗೃಹವಾಸಿಗಳಲ್ಲಿ ಇರಲಾರ

ದೆಂಬುದೂ ಚರಿತ್ರೆಯ ಮುಖ್ಯಪಾಠ. ಇವರಿಗೆ ಭಾರತೀಯ ಸಂಸ್ಕೃತಿಯನ್ನು ರೋಮಕ ಸಂಸ್ಕೃತಿಯಂತೆ ಅಳಿಸಿ ಹಾಕಿಬಿಡುವ ಮಹೋದ್ದೇಶವಿದ್ದಿತೆಂಬುದು ಸ್ಪಷ್ಟ. ಇದಕ್ಕಾಗಿ ಸುಸಜ್ಜಿತ ಯೋಜನೆಯೊಂದು ಸಿದ್ಧವಾಗಿ ಈ ಹಿನ್ನೆಲೆಯಲ್ಲಿ ಬರೆದ ಇವರ ಗ್ರಂಥಗಳಲ್ಲಿ ಈ ದೃಷ್ಟಿಯಲ್ಲದೆ ಬೇರೇನು ಇರಲು ಸಾಧ್ಯ ?

ಈ ಹಿನ್ನೆಲೆಯಲ್ಲಿ "ಗೋಪೂಜೆ"ಯ ಅರ್ಥ ಕ್ರೈಸ್ತಪಾದ್ರಿಗಳಿಗೆ ಅರ್ಥವಾಗುವುದೆಂತು ? "ಗೋ"ವು ಇವರಿಗೆ ಮಾಂಸಾಶನ ಮಾತ್ರ ! ಹೀಗೆ ಭಾರತೀಯರನ್ನು "ಸುಧಾರಿಸಲು" ಹೊರಟ ಕೆಲವರಿಗೆ ಆದರೂ ಭಾರತೀಯ ಸಂಸ್ಕೃತಿಯ ದೊಡ್ಡತನದ ಅರಿವು ಆಗಲೇ ಇಲ್ಲವೆನ್ನುವಂತಿಲ್ಲ. ಉದಾಹರಣೆಗೆ The Ethics of the Hindus ಎಂಬ ಗ್ರಂಥದ ಲೇಖಕನಾದ ಇ.ಡಬ್ಲ್ಯು. ಹಾಪ್ಕಿನ್ಸ್ ಎಂಬ ಮಹಾಶಯನು ಹೀಗೆ ಬರೆದಿದ್ದಾನೆ :

"Yet it is in its whole scope that the Hindu ethics surpasses ours; in the inclusion of the beasts and birds and even of the trees and flowers in its all-embracing tenderness and kindly sympathy. And we, who are only beginning to hear that trees and flowers have life and feeling comparable in weak degree to our own, and condone, if we do not inflicit, so much of the misery suffered by dumb animals, may properly, as we learn to be less cruel, turn back with some humility to the time long before the Christian era, when so good and perfect a doctrine was not only preached as an ethical ideal but was accepted by millions of people as the normal rule of life for every good man, and confess that however excellent our ethics may be, India has taught us something better than we knew." (PP. 232–233).

(ಆದರೂ, ಹಿಂದೂ ಧರ್ಮವು ಸಮ್ಮದನ್ನು ಎಲ್ಲಿ ಹಿಂದೆಹಾಕಿದೆಯೆಂದರೆ ತನ್ನ ವಿಶಾಲ ದೃಷ್ಟಿಕೋನದಲ್ಲಿ; ತನ್ನ ಉದಾರ ಕರುಣಾಭಾವ, ದಯಾ, ಮೃದುಭಾವಗಳ ದೊಡ್ಡ ತೋಳುಗಳಲ್ಲಿ ಪ್ರಾಣಿ, ಪಶು, ಪಕ್ಷಿಗಳನ್ನೂ, ಗಿಡಮರ ಪುಷ್ಪಗಳನ್ನೂ ಒಳಗೊಂಡಿರುವ ವಿಷಯದಲ್ಲಿ; ನಾವೂ ಈಗೀಗ, ಗಿಡಗಳಿಗೂ ಹೂಗಳಿಗೂ ಪ್ರಾಣವೂ ಭಾವನೆಯೂ ನಮ್ಮಂತೆಯೇ ಯಾವುದೇ ಅಲ್ಪ ಪ್ರಮಾಣದಲ್ಲಿಯಾದರೂ ಇರುವುದೆಂದು ಕೇಳುತ್ತಿದ್ದೇವೆ ಮಾತ್ರ; ಮೂಕ ಪ್ರಾಣಿಗಳು ಪಡುವ ಯಾತನೆಯನ್ನು ಈಗ ನಾವಾಗಿ ವಿಧಿಸದಿದ್ದರೂ ಕಡಿಮೆ ಮಾಡುವ ಪ್ರಯತ್ನದಲ್ಲಿರುವೆವು; ಕ್ರಮವಾಗಿ ನಮ್ಮ ಕ್ರೌರ್ಯ ಮನೋವೃತ್ತಿಯನ್ನು ಕಡಿಮೆಮಾಡಿಕೊಳ್ಳುವದನ್ನು ನಾವು ಕಲಿತಂತೆಲ್ಲ, ಅಹಂಕಾರ ಹೋಗಿ ನಮ್ರರಾಗಿ ಹಿಂತಿರುಗಿ ನೋಡಿದರೆ, ಕ್ರೈಸ್ತಯುಗವು ಪ್ರಾರಂಭವಾಗುವ ಅದೆಷ್ಟೋ ಕಾಲದ ಮುನ್ನವೇ ಇಂಥದೊಂದು ಒಳ್ಳೆಯ ಪರಿಪೂರ್ಣ ತತ್ವವು ಧರ್ಮಬೋಧೆಯಾಗಿ ಪ್ರಚಾರದಲ್ಲಿದ್ದುದು ಮಾತ್ರವಲ್ಲದೆ ಕೋಟ್ಯಾಂತರ ಸುಜನರಿಂದ ನಂಬಲ್ಪಟ್ಟು ಜೀವನದ ಸರ್ವಮಾನ್ಯ ನೀತಿಯಾಗಿ ಪರಿಪಾಲಿಸಲ್ಪಡುತ್ತಿತ್ತೆಂದು ಮನಗಂಡು, ನಮ್ಮ ನೀತಿಶಾಸ್ತ್ರವು ಎಷ್ಟೇ ಉತ್ತಮವಾಗಿದ್ದರೂ, ಭಾರತ ದೇಶವು ನಮಗೆ ತಿಳಿದುದಕ್ಕಿಂತಲೂ ಇನ್ನೂ ಉತ್ತಮ ನೀತಿಯನ್ನು ಕಲಿಸಿಕೊಟ್ಟಿದೆಯೆಂಬುದನ್ನು ಒಪ್ಪಿಕೊಳ್ಳೋಣ.")

ಇಷ್ಟು ಸಾಲದೆಂಬಂತೆ ಈ ಮಹಾಶಯನು ಹಿಂದೂಗಳ ಅಹಿಂಸಾ ಧರ್ಮದ ಬಗೆಗೆ ಇನ್ನೂ ಬರೆದಿರುವುದೇನೆಂದರೆ :

"This is not a teaching of Christianity, though it has been engrafted upon it and finds expression in a small degree in the *Society for the prevention of Cruelty to Animals,* the very existence of the society being, however an indictment of ordinary practice. This ancient rule of Hindu ethics embodies toward all animal life a sympathetic attitude which repels the robust West and is excluded from its "manly

virtues. To kill for sport is a commendable amusement practised by clergy and laity alike; to be a Christian gentleman one does not have to be gentle!" (p. 227)

("ಇದು [—ಅಹಿಂಸಾಧರ್ಮವು] ಕ್ರೈಸ್ತಮತದ ಬೋಧೆಯಲ್ಲ; ಅದರ ಮೇಲೆ ಆಮೇಲೆ ಬೆಳೆಸಲ್ಪಟ್ಟಿದ್ದು, ಮತ್ತು ಒಂದಿಷ್ಟು ಪ್ರಮಾಣ ದಲ್ಲಿ "ಪ್ರಾಣಿಗಳಿಗೆ ಕ್ರೌರ್ಯವನ್ನು ತಡೆಗಟ್ಟುವ ಸಂಘ"ದ ಮೂಲಕ ಅಭಿವ್ಯಕ್ತಿಯನ್ನು ಹೊಂದಿದೆ; ಆದರೆ ಇಂಥ ಒಂದು ಸಂಘ ಇರುವುದೇ ಸಾಮಾನ್ಯ ಜನಜೀವನದ ರೀತಿಯ ಮೇಲೆ ಅಪರಾಧದ ಹೊರೆಯ ನಿರ್ಣಯ ವಾದಂತಿದೆ. ಸಕಲ ಪ್ರಾಣಿ ಜೀವನದ ಬಗೆಗೆ ದಯಾಪೂರ್ಣ ಧೋರಣೆ ಯನ್ನು ವಿಧಿಸುವ ಹಿಂದೂ ಧರ್ಮದ ಈ ಆದೇಶವು, ಧಾಂಧಿಗ [ಬೆಳವಣಿ ಗೆಯ] ಪಾಶ್ಚಾತ್ಯರನ್ನು ತನ್ನಿಂದ ಮುಖ ತಿರುಗಿಸುವಂತೆ ಮಾಡಿರುವು ದಲ್ಲದೇ, ಅದು ಅವರ "ಪೌರುಷ ಗುಣ"ಗಳಿಂದ ಆಚೆಗೆ ದೂರ ಎಸೆಯಲ್ಪ ಟ್ಟಿದೆ. [ಪಶ್ಚಿಮದಲ್ಲಿ] ಆಟಕ್ಕಾಗಿ ಕೊಲ್ಲುವುದು ಮೆಚ್ಚತಕ್ಕ ವಿನೋದ ವಾಗಿದ್ದು ಮತಪ್ರಚಾರಕರೂ ಸಾಮಾನ್ಯ ಜನರೂ ಕೂಡಿಯೇ ಇದರಲ್ಲಿ ಪಾಲುಗೊಳ್ಳುತ್ತಾರೆ. ಸಭ್ಯ ಕ್ರೈಸ್ತನಾಗಲು ಯಾರೊಬ್ಬರೂ "ಸಭ್ಯ" ನಾಗಬೇಕಾದ [ಮಾರ್ದವ ಗುಣ ಹೊಂದಬೇಕಾದ] ಅವಶ್ಯಕತೆಯಿಲ್ಲ ! )

ಈ ಮಾತುಗಳನ್ನು ಕ್ರೈಸ್ತ ಗುರುಗಳಾದಿಯಾಗಿ ಸಮಸ್ತ ಕ್ರೈಸ್ತರೂ ಒಪ್ಪುವರೇ ? ಎಂಬುದು ಬೇರೆ ಪ್ರಶ್ನೆ. ಸದ್ಯಕ್ಕೆ ಇಷ್ಟನ್ನೊಪ್ಪಿದ ಮೇಲೆ, (ಹೊರ ದೇಶದ) ಕ್ರೈಸ್ತರಿಗೆ ನಮ್ಮ ದೇಶದಲ್ಲಿ ಮಾಡುವ ಕೆಲಸವೇನಿದೆ ? ಆಗಾಗ ಜಗತ್ತಿನಾದ್ಯಂತ ಅವರು ತಮಟೆ ಬಡಿದು ಹೇಳಿಕೊಳ್ಳುವ "Christian Compassion"-- "ಕ್ರೈಸ್ತರಿಗೇ ವಿಶಿಷ್ಟವಾದ ದಯಾ ಭಾವ" ಎಂಬುದು ಎಷ್ಟರಮಟ್ಟಿಗೆ ಆ ಮತದ ಅವಿಭಾಜ್ಯ ಅಂಗವೆಂಬುದು ಈಗಲಾದರೂ ಎಲ್ಲರಿಗೂ ತಿಳಿಯುವುದಲ್ಲವೆ ! ತಾನೇ ಆಚರಿಸದ ಈ ಧರ್ಮ ವನ್ನು ಈ ಧರ್ಮಸಮೃದ್ಧವಾದ ನಮ್ಮ ನಾಡಿನಲ್ಲಿ ಪ್ರಚಾರಮಾಡುವ ತಂತ್ರದ ಮೂಲಕ ಅವರು ಸಾಧಿಸಲು ಇಟ್ಟುಕೊಂಡಿರುವ ದುರುದ್ದೇಶಗಳೇ ಬೇರೆಯೆಂಬುದು ಮಾತ್ರ ಈಗ ಸುಸ್ಪಷ್ಟ ! ಇದು ಹೇಗಿದೆಯೆಂದರೆ ಗಣಿಕೆ ಯರು ಪತಿವ್ರತೆಯರ ಕೇರಿಕೇರಿಗಳಲ್ಲಿ ಪಾತಿವ್ರತ್ಯದ ಮಹಾತ್ಮೆಯ ಬಗೆಗೆ

ದೊಡ್ಡ ಕೂಗುಗಳನ್ನು ಹಾಕುತ್ತ, ಪ್ರಚಾರ ನಡೆಸುತ್ತ ಆ ಪತಿವ್ರತೆಯರನ್ನು ತಮ್ಮ ವ್ಯಭಿಚಾರ ಗೃಹಕ್ಕೆ ಸದಸ್ಯರಾಗಲು ಪ್ರಚೋದಿಸಿದಂತೆ ಮಾತ್ರ !! ಯಾವ ತಂತ್ರ ಬಳಸಿದರೂ ಸರಿಯೆ, ತನ್ನ ಬಳಗ ಮಾತ್ರ ದೊಡ್ಡದಾದರೆ ಸಾಕೆಂದು ಭಾವಿಸುವ ಒಂದಾನೊಂದು "ಧರ್ಮ" ಜಗತ್ತಿನಲ್ಲಿ ಏನು "ಕಲ್ಯಾಣ" (?) ವನ್ನು ಸಾಧಿಸಬಹುದೆಂಬುದು ಗಿಬ್ಬನ್ ಮಹಾಶಯನ ಮೇಲೆ ಹೇಳಿದ ಗ್ರಂಥದಲ್ಲಿ ಸ್ಪಷ್ಟವಾಗಿ ನಿರೂಪಿತವಾಗಿದೆ.

ನಮ್ಮ ಧರ್ಮವಾದರೋ ವೇದವಾಣಿಯ ದ್ವಾರಾ ಈ ಸ್ಪಷ್ಟ ಆದೇಶ ವನ್ನಿತ್ತಿದೆ :

ಯಃ ಪೌರುಷೇಣ ಕ್ರವಿಷಾಸಮಂಕ್ತೇ ಯೋ ಅಶ್ವ್ಯೇನ ಪಶುನಾ
ಯಾತುಧಾನಃ ।
ಯೋ ಅಘ್ನ್ಯಾಯಾ ಭರತಿ ಕ್ಷೀರಮಗ್ನೇ ತೇಷಾಂ ಶೀರ್ಷಾಣಿ
ಹರಸಾಪಿ ವೃಶ್ಚ ॥ (ಋ. ಸಂ. X-87-16)

"ಯಾವ ರಾಕ್ಷಸನು ಪುರುಷಸಂಬಂಧಿಯಾದ ಮಾಂಸದಿಂದಲೂ ಕುದುರೆಯೇ ಮೊದಲಾದ ಪ್ರಾಣಿಗಳ ಮಾಂಸದಿಂದಲೂ, ವಧಿಸಲ್ಪಡಬಾರದ ಗೋವಿನ ಮಾಂಸದಿಂದಲೂ ಹೊಟ್ಟೆಯನ್ನು ತುಂಬಿಕೊಳ್ಳುವನೋ, ಗೋಕ್ಷೀರವನ್ನು ಅಪಹರಿಸುವನೋ ಇಂತಹವರ ತಲೆಗಳನ್ನು, ಹೇ ! ಅಗ್ನಿದೇವ! ನಿನ್ನ ಜ್ವಾಲೆಗಳಿಂದ ಸುಟ್ಟು ನಾಶಮಾಡು," ಈ ಸೂಕ್ತದ ತುಂಬ ಇಂಥ ಗೋ ಸಂಬಂಧಿ ಮಂತ್ರಗಳೇ ಇವೆ. ಗೋ ಪ್ರೇಮವಿಲ್ಲದವರು ಅಸುರ ರೆಂಬುದು ಇಲ್ಲಿ ಸ್ಪಷ್ಟವಾಗಿದೆ.

ಇಷ್ಟರ ಮೇಲೆ ಈ "ಗೋ" ತತ್ತ್ವವು ಮಾರ್ಮಿಕವೂ ಆಗಿದ್ದು, ಪ್ರಾಣಿ ದಯೆಯ ಹಿನ್ನೆಲೆಯಲ್ಲಿ ಬಹು ದೊಡ್ಡ ಆಧ್ಯಾತ್ಮ ಸತ್ಯವಿರುವುದನ್ನು ಈಗ ಮನಗಾಣಬೇಕಾಗಿದೆ. (ಇಷ್ಟರ ಮೇಲೆಯೂ ಗೋಮಾಂಸ ಭಕ್ಷಣದ ಬಗೆಗೆ ನಮ್ಮ ಧರ್ಮದಲ್ಲಿಯೇ ಅವಕಾಶವಿದೆಯೆಂದು ಅಲ್ಲಲ್ಲಿ ದುರ್ವಾದ ಮಾಡುವ ಮಹನೀಯರು, ಈ ಕೆಳಕಂಡ ಗ್ರಂಥವನ್ನು ಓದಿ ನೋಡಲಿ. ಅನೇಕ ವಿದ್ವಾಂಸರು ಕೂಡಿ ಬರೆದದ್ದು ಈ ಗ್ರಂಥ : A Review of 'Beef in Ancient India' published by Gita Press, Gorakhpur, Price Rs. 2/-, 1971.)

"ಗೋಬ್ರಾಹ್ಮಣೇಭ್ಯಃ ಶುಭಮಸ್ತು ನಿತ್ಯಂ" ಎಂಬುದು ನಮ್ಮ ದೈನಂದಿನ ಸ್ವಸ್ತಿವಾಚನ. "ಈ ಮಾತುಗಳನ್ನು ಬ್ರಾಹ್ಮಣರು ತಮ್ಮ ಸ್ವಾರ್ಥಕ್ಕಾಗಿ ಬರೆದರೆ"ಂದು ಹೇಳುವವರು ಈಗೀಗ ಹುಟ್ಟಿಬರುತ್ತಿದ್ದರೂ, ಗೋವುಗಳಂತೂ ತಾವಾಗಿ ಬ್ರಾಹ್ಮಣರಿಗೆ ಹೇಳಿ ಬರೆಸಿದುವು ಎಂದು ಹೇಳುವವರು ಇನ್ನೂ ಹುಟ್ಟಿ ಬಂದಿಲ್ಲವಷ್ಟೇ ! (ಈ ಕಲಿಕಾಲದಲ್ಲಿ ಯಾವುದೂ ಅಸಂಭವವಲ್ಲ; ಇರಲಿ; ಅವರು ಬಂದ ಮೇಲೆ ಅವರಿಗೆ ಉತ್ತರ! ) ಗೋವುಗಳಿಗೂ ಬ್ರಾಹ್ಮಣನಿಗೂ ಶಾಶ್ವತಿಕವಾಗಿ, ಯಾವುದೋ ದೊಡ್ಡ ನಂಟು, ಸಮೀಕರಣ ಇಲ್ಲಿರುವುದು ಇನ್ನಷ್ಟು ಸ್ಪಷ್ಟ. ಗೋ-ಹತ್ಯೆ, ಬ್ರಹ್ಮಹತ್ಯೆ ಮಹಾಪಾತಕಗಳೆಂದು ಎಣಿಸಲ್ಪಟ್ಟಿವೆ. ಗೋಜಾತಿ ಶ್ರೇಷ್ಠವಾದರೂ ತುಂಟ ಆಕಳಿನ ವಿಷಯ ಬೇರೆಯೇ ! ಆದರೂ ಆಕಳು ಕತ್ತೆಯಾಗುವುದಿಲ್ಲ ! ಹಾಗೆಯೇ ಬ್ರಾಹ್ಮಣ ವರ್ಗವೂ ಲೋಕಕ್ಷೇಮಾರ್ಥವಾಗಿರತಕ್ಕದ್ದು. "ತುಂಟರ"ರು ಇಲ್ಲೂ ಅಸಂಭವವೇನಲ್ಲ ! ಆದರೆ ಇಷ್ಟುಮಾತ್ರದಿಂದ ಈ ಬ್ರಾಹ್ಮಣ್ಯ ತತ್ತ್ವವನ್ನೇ ಅಳಿಸಿ ಹಾಕಲು ಪ್ರಯತ್ನಿಸಿದರೆ, ತುಂಟ ಆಕಳಿಗಾಗಿ ಗೋ ಸಮೂಹವನ್ನೇ ನಿರ್ನಾಮ ಮಾಡಿದ ಹಾಗಾಗುತ್ತದೆ. ಗೋವುಗಳನ್ನೂ, "ಬ್ರಾಹ್ಮಣ"ನನ್ನೂ ಉಳಿಸಿ, ಪಾಲಿಸಿ, ಗೋಧರ್ಮ–ಬ್ರಾಹ್ಮಣ ಧರ್ಮಗಳನ್ನು ಸಮಾಜವು ರಕ್ಷಿಸಿದರೆ, ಸಮಾಜಕ್ಕೇ ಇದು ಕ್ಷೇಮಕಾರಕ. "ಧರ್ಮೋ ರಕ್ಷತಿ ರಕ್ಷಿತಃ" ಅಲ್ಲವೆ ? ಮುಂದಿನ ಪ್ರಸಂಗದಲ್ಲಿ ಇದರ ಮಾರ್ಮಿಕ ವಿವರಣೆಯನ್ನು ಗಮನಿಸಿರಿ.

॥ ಓಂ ॥ ॥ ಗಾವಃ ಪ್ರಸೀದಂತು ॥

॥ ಶ್ರೀ ಗೋಪಾಲಃ ಪ್ರೀಯತಾಂ ॥

ಶ್ರೀ

# ೧. ಜಮದಗ್ನಿಮಹರ್ಷಿಗಳ ಆದೇಶ

ಮಾತಾ ರುದ್ರಾಣಾಂ ದುಹಿತಾ ವಸೂನಾಂ ಸ್ವಸಾದಿತ್ಯಾನಾಂ
ಅಮೃತಸ್ಯ ನಾಭಿಃ ।

ಪ್ರ ನು ವೋಚಂ ಚಿಕಿತುಷೇ ಜನಾಯ ಮಾ ಗಾಂ ಅನಾಗಾಂ
ಅದಿತಿಂ ವಧಿಷ್ಟ ॥
(ಋಕ್ಸಂಹಿತಾ, VIII, 101–18

ಇದು ಭಾರ್ಗವ ವಂಶದ ಜಮದಗ್ನಿ ಮಹರ್ಷಿಗಳ ಸುಪ್ರಸಿದ್ಧ ಸಂದೇಶ : "(ಏಕಾದಶ) ರುದ್ರರಿಗೆ ಮಾತೆಯೂ, (ಅಷ್ಟ) ವಸುಗಳಿಗೆ ಪುತ್ರಿಯೂ, (ದ್ವಾದಶ) ಆದಿತ್ಯರಿಗೆ ಸಹೋದರಿಯೂ, ಅಮೃತಕ್ಕೆ ಉತ್ಪತ್ತಿಸ್ಥಾನಳೂ, ರೋಗರಹಿತಳೂ (ಸರ್ವದಾ ಶುದ್ಧಳೂ) ಗೋ ಸ್ವರೂಪಿಣಿಯೂ ಆಗಿರುವ, ತೇಜೋವಂತೆಯಾದ ಈ ಅದಿತಿದೇವತೆಯನ್ನು ಹಿಂಸೆ ಮಾಡಬೇಡಿರಿ ಎಂದು ಚೇತೋವಂತರಾದ, ಬುದ್ಧಿವಂತರಾದ, ಶುಶ್ರೂಷುಗಳಾದ ಜನರಿಗೆ ಈಗ ನಾನು ಉಪದೇಶ ಮಾಡಿರುತ್ತೇನೆ."

ಜಮದಗ್ನಿ ಮಹರ್ಷಿಗಳು "ಗೋ"ವಿಗಾಗಿ ಪ್ರಾಣವನ್ನೇ ತೆತ್ತ ಹುತಾತ್ಮರಾದ ಮಹಾನುಭಾವರು. ಅವರ ಜೀವಿತ ಸರ್ವಸ್ವ ಸಂದೇಶವೆಂಬಂತಿದೆ ಈ ಅವರ ದಿವ್ಯವಾಣಿ. ಹೈಹಯಕಾರ್ತವೀರ್ಯನಿಂದ "ಗೋ"ವಿಗೆ ಒದಗಿದ ಬಾಧೆಯೂ, ಇದಕ್ಕೆ ಜಮದಗ್ನಿಯ ಆತ್ಮಾರ್ಪಣವೂ, ನಂತರ ಪರಶುರಾಮ ಸ್ವರೂಪಿಯಾದ ಭಗವಂತನಿಂದ "ಗೋ" ಉದ್ಧಾರವೂ, ಭಾರತೀಯರ ರಾಜಕೀಯ, ಸಾಮಾಜಿಕ, ಆಧ್ಯಾತ್ಮಿಕ ಚರಿತ್ರೆಯಲ್ಲಿ ಚಿರಸ್ಮರಣೀಯವಾದುದು ಎಲ್ಲರಿಗೂ ಗೊತ್ತಿದೆ. ಅಂದ ಮೇಲೆ ಈ ವಾಣಿಯ ಪರಿಪೂರ್ಣಾರ್ಥವೇನು ? ಇಲ್ಲಿ ಉಕ್ತವಾಗಿರುವ "ಗೋವು" ಯಾವುದು ?

ಇಲ್ಲಿ ಹೇಳಲ್ಪಟ್ಟ ಸಂದೇಶವು "ಚಿಕಿತುಷೇ ಜನಾಯ"—"ಚೇತನಾವತೇ ಜನಾಯ" (ಸಾಯಣ ಭಾಷ್ಯ) "ಚೇತನವುಳ್ಳ ಮಾನವರಿಗೆ"

ಉದ್ದಿಷ್ಟವಾಗಿದೆ. ಆತ್ಮಘಾತಕರಾದ ಜನರಿಗೆ ಈ ಮಾತು ಪ್ರಯೋಜನವಿಲ್ಲ. "ಗೋ" ಹಿಂಸೆ ಮಾಡತಕ್ಕವನಿಗೆ ಚೇತನವೇ ಇಲ್ಲವೆಂಬುದು ಇಲ್ಲಿ ಧ್ವನಿತ. ಸಕಲ ದೇವತೆಗಳ ವಾಸಸ್ಥಾನವೇ "ಗೋ"ವು ಎಂದೂ, "ಅಮೃತ" ತತ್ತ್ವವೇ ಇದರ ಹೃದಯಬಿಂದುವೆಂದೂ ಹೇಳಲ್ಪಟ್ಟಿರುವುದು ಗಮನೀಯ. ಮುಂದಿನ ಒಂದು ಮಂತ್ರದಲ್ಲಿ ಜಮದಗ್ನಿ ಋಷಿಗಳು ಈ "ಗೋ" ಲಕ್ಷಣಗಳನ್ನು ಇನ್ನಷ್ಟು ವಿವರಿಸಿದ್ದಾರೆ :

ವಚೋವಿದಂ ವಾಚಮುದೀರಯಂತೀಂ ವಿಶ್ವಾಭಿಃ ಧೀಭಿಃ
ಉಪತಿಷ್ಠಮಾನಾಂ ।
ದೇವೀಂ ದೇವೇಭ್ಯಃ ಪರ್ಯೇಯುಷೀಂ ಗಾಂ ಆಮಾವೃಕ್ತ
ಮರ್ತ್ಯೋ ದಭ್ರಚೇತಾಃ ॥

"(ನಮಗೆ) ವಾಕ್ಕನ್ನು ಕಲಿಸಿಕೊಡುವವಳೂ, (ಶ್ರೇಷ್ಠವಾದ) ವಾಕ್ಕನ್ನು ಉಚ್ಚಾರ ಮಾಡತಕ್ಕವಳೂ, ಸಕಲ (ಶಬ್ದರಾಶಿರೂಪವಾದ) ವಾಕ್ಕುಗಳಿಂದ ಸ್ತುತಿಸಲ್ಪಡುವವಳೂ, ದೇದೀಪ್ಯಮಾನವಾಗಿ ಬೆಳಗುವವಳೂ, ದೇವಪೂಜೆಯಲ್ಲಿ ನನಗೆ ಸಹಾಯಾರ್ಥವಾಗಿ ಬಂದಿರುವವಳೂ ಆದ ಈ " ಗೋ " ಸ್ವರೂಪಿಣೀ ದೇವಿಯನ್ನು, ಅಲ್ಪಬುದ್ಧಿಯ (ಯಃಕಶ್ಚಿತ್) ಮಾನವನೊಬ್ಬನು (ಮಾತ್ರ) ಪರಿತ್ಯಜಿಸುತ್ತಾನೆ.

ಇಲ್ಲಿಯೂ "ಗೋ"ವಿಗೂ ವಾಕ್‌ತತ್ತ್ವಕ್ಕೂ ಬಹು ನಿಕಟವಾದ ಸಂಬಂಧವನ್ನು ಗಮನಿಸಬೇಕು. ದೇವಪೂಜೆಗೆ ಈ "ಗೋವು" ಸಹಕಾರ ನೀಡಬಲ್ಲುದು. "ಗೋ"ವನ್ನು ಹಿಂಸಿಸುವ ಮಾತಿರಲಿ; ಸೇವೆಮಾಡದೆ, ಅದನ್ನು ಉಪೇಕ್ಷಿಸಿ, "ಗೋ" ಸಂಬಂಧವಿಲ್ಲದವನನ್ನು "ದಭ್ರಚೇತಾಃ" "ಅಲ್ಪಬುದ್ಧಿಃ" (ಸಾಯಣಭಾಷ್ಯ), ದಡ್ಡನೆಂದು ಕರೆದಿರುವುದು ವಿಶೇಷವಾಗಿ ಗಮನೀಯ, "ಗೋ"ವಿಲ್ಲದವನ ಮನೆ ಹಾಳು ಎಂಬ ಅರ್ಥದಲ್ಲಿ ಈ ವಾಣಿ ಪರ್ಯವಸಾನ ಹೊಂದುವಂತಿದೆ. ಈ "ಗೋ"ವು ಯಾವುದು ?

"ಗೋ"ವಿಲ್ಲದೆ ವೈದಿಕನ ಯಾವ ಯಜ್ಞಯಾಗಾದಿಗಳಾಗಲೀ, ದೈನಂದಿನ ಜೀವನವಾಗಲೀ ನಡೆಯುವಂತಿಲ್ಲವೆಂಬುದು ಎಲ್ಲರಿಗೂ ತಿಳಿದಿದೆ. ಪಂಚ"ಗವ್ಯ"ಗಳು ಲೋಕಪಾವನಗಳೆಂದು ಅನಾದಿಕಾಲದಿಂದ ಪ್ರಸಿದ್ಧಿ ಹೊಂದಿವೆ, ಇದಕ್ಕೇನು ಕಾರಣ?

## ೨. ನಿರುಕ್ತದಲ್ಲಿ 'ಗೋ'ವು

ಯಾಸ್ಕಮಹರ್ಷಿಗಳ ಪ್ರಕಾರ "ಗೋ" ನಾಮವು ಪೃಥ್ವಿಯ ಸುಪ್ರಸಿದ್ಧವಾದ ಇಪ್ಪತ್ತೊಂದು ವೈದಿಕ ನಾಮಗಳಲ್ಲಿ ಒಂದು ಮಾತ್ರ : (ನಿರುಕ್ತ II-5)

"ಓಂ ಗೌಃ (೧), ಗ್ಮಾ (೨), ಜ್ಮಾ (೩), ಕ್ಷ್ಮಾ (೪), ಕ್ಷಾ (೫), ಕ್ಷಮಾ (೬), ಕ್ಷೋಣೀಃ (೭), ಕ್ಷಿತಿಃ (೮), ಅವನಿಃ (೯), ಉರ್ವೀ (೧೦), ಪೃಥ್ವೀ (೧೧), ಮಹೀ (೧೨), ರಿಪಃ (೧೩), ಅದಿತಿಃ (೧೪), ಇಲಾ (೧೫), ನಿರ್ಋತಿಃ (೧೬), ಭೂಃ (೧೭), ಭೂಮಿಃ (೧೮), ಪೂಷಾ (೧೯), ಗಾತುಃ (೨೦), ಗೋತ್ರಾ (೨೧) ಇತ್ಯೇಕ ವಿಂಶತಿಃ ಪೃಥಿವೀ ನಾಮಧೇಯಾನಿ !"

ಇದರಲ್ಲಿ 'ಗೌಃ' ಶಬ್ದಕ್ಕೆ ನಿಷ್ಪತ್ತಿಯನ್ನು ಯಾಸ್ಕರು ಹೀಗೆ ಹೇಳಿದ್ದಾರೆ :

"ಯದ್ದೂರಂಗತಾ ಭವತಿ । ಯಚ್ಚಾಸ್ಯಾಂ ಭೂತಾನಿ ಗಚ್ಛಂತಿ ।" ಎಂದರೆ "ಬಹಳ ದೂರದವರೆಗೆ ವ್ಯಾಪಿಸಿರುವುದು" ಅಥವಾ "ಸಕಲ ಭೂತರಾಶಿಗಳೂ ಇದರ ಮೇಲೆ ಸಂಚಾರ ಮಾಡುತ್ತಾರೆ" ಎಂಬರ್ಥದಲ್ಲಿ 'ಗೋ' ಶಬ್ದಕ್ಕೆ ಯಾಸ್ಕರ ವಿವರಣೆ ಇದೆ. ತಥಾಪಿ ಅವರೇ ಮುಂದೆ :

"ಅಥಾಪಿ ಪಶುನಾಮೇಹ ಭವತಿ ಏತಸ್ಮಾದೇವ" ಎಂದು ಹೇಳಿ ಪಶುವಿಶೇಷಕ್ಕೂ ಇದೇ ಕಾರಣದಿಂದ 'ಗೋ' ಶಬ್ದ ಅನ್ವಯಿಸುತ್ತದೆಂದು ಬರೆದಿದ್ದಾರೆ. ಇನ್ನೂ ಮುಂದೆ (II-6) ಅವರೇ ಮತ್ತಷ್ಟು ಸ್ಪಷ್ಟವಾಗಿ :

"ಆದಿತ್ಯೋಽಪಿ ಗೌರುಚ್ಯತೇ".... "ಸರ್ವೇಽಪಿ ರಶ್ಮಯೋ ಗಾವ ಉಚ್ಯಂತೇ" ಎಂದರೆ "ಆದಿತ್ಯನಿಗೂ "ಗೌಃ" ಎಂದು ವ್ಯವಹಾರವಿದೆ. ಸೂರ್ಯರಶ್ಮಿಗಳಿಗೂ ಗೋವುಗಳೆಂಬ ವ್ಯವಹಾರವಿದೆ" ಎಂದು ಬಹು ಸ್ವಾರಸ್ಯವಾಗಿ ಬರೆದಿದ್ದಾರೆ. (ಶ್ರೀವಿಷ್ಣುಪುರಾಣದಲ್ಲಿ "ಗವಾಂ ಸೂರ್ಯಃ ಪರೋ ಗುರುಃ" ಎಂದು ಭೂದೇವಿಯೇ, ಶ್ರೀಕೃಷ್ಣಾವತಾರೋಪಕ್ರಮ ಘಟ್ಟದಲ್ಲಿ ದೇವತೆಗಳಿಗೆ ಮಾಡಿದ ಮೊರೆಯಲ್ಲಿ [ V-I-14 ] ಹೇಳಿರುವುದೂ ಗಮನೀಯ. ಇಲ್ಲಿ ವ್ಯಾಖ್ಯಾನ ಮಾಡುತ್ತಾ ಶ್ರೀ ವಿಷ್ಣುಚಿತ್ತರೆಂಬ

ಪ್ರಾಚೀನ ಆಚಾರ್ಯರು "ಅತ್ರ ಗುರುಶಬ್ದಃ ಕಾರಣವಾಚೀ"— "ಇಲ್ಲಿ ಗುರು ಶಬ್ದವು ಕಾರಣವೆಂಬರ್ಥದಲ್ಲಿ ಬಂದಿದೆ" ಎಂದು ವಿವರಿಸಿ "ಸೂರ್ಯ ಸುತಾಶ್ಚ ಗಾವಃ" ಎಂಬ ಸಂವರ್ತ್ತಸ್ಮೃತಿವಾಕ್ಯವನ್ನು ಪ್ರಮಾಣವನ್ನಾಗಿ ಉದಾಹರಿಸಿದ್ದಾರೆ. ಸೂರ್ಯ ಕಿರಣಗಳೇ ಸೂರ್ಯಸುತೆಯರೆಂದೂ, ಸೂರ್ಯನೇ ಅವುಗಳಿಗೆ ಕಾರಣನಾದುದರಿಂದ "ಗುರು"ವೆಂದೂ ಇಲ್ಲಿ ಗ್ರಹಿಸಿರುವುದಕ್ಕೆ ಪ್ರಾಚೀನ ನಿರುಕ್ತ ಪರಂಪರೆಯೇ ಆಧಾರವೆಂಬುದು ಸ್ಪಷ್ಟ.) ಇಲ್ಲಿ ಹೇಳಲ್ಪಟ್ಟ "ಸೂರ್ಯ"ನು ಯಾರು ? ಈ "ಗೋವು" ಗಳು ಯಾವುವು ?

## ೩. ಕೆಲವು ಪ್ರಶ್ನೆಗಳು

ಇದಲ್ಲದೆ "ಗೋ"ವನ್ನು "ದೇವನಾಂ ಮಾತಾ" ದೇವತೆಗಳ ತಾಯಿ ಎಂದು ಏಕೆ ಕರೆದರೆಂಬುದೂ ವಿವೇಚನೀಯ. ಇಂದ್ರನಿಗೆ "ಗೋಪತಿ"ಎಂದು ಏಕೆ ಹೆಸರಾಯಿತೆಂಬುದೂ ಸ್ವಾರಸ್ಯವಾಗಿದೆ. ಶ್ರೇಷ್ಠರಾದ ವೈದಿಕ ಮಹರ್ಷಿ ಗಳು 'ಗೋತಮ', 'ಗವಿಷ್ಠಿರ' ಇತ್ಯಾದಿ ಹೆಸರುಗಳನ್ನು ಏಕೆ ಇಟ್ಟುಕೊಳ್ಳು ತಿದ್ದರೆಂಬುದೂ ವಿವೇಚನೀಯ.

ಇದಲ್ಲದೆ "ಗವಾಮಯನ"ವೆಂಬ ಒಂದು ಸಾಂಕೇತಿಕ ಯಾಗವೂ 'ಗೋ'ವುಗಳಿಂದಲೇ ನಡೆಸಲ್ಪಟ್ಟ ಕ್ರಮವೂ ವಿವರಣೆಯೊಂದಿಗೆ ತೈತ್ತಿರೀಯ ಸಂಹಿತೆಯಲ್ಲಿ (VII-5) ಉಕ್ತವಾಗಿದೆ. ಋಗ್ವೇದದಲ್ಲಿ ಸುಪ್ರಸಿದ್ಧ ವಾದ "ಗೋ" ಸೂಕ್ತವೂ ಇದೆ. (X-169) ಇವಕ್ಕೆಲ್ಲ ಏನರ್ಥ ?

ಸಾಮಾನ್ಯಾರ್ಥದ ಆಕಳನ್ನು ಮಾತ್ರ ಉದ್ದೇಶಿಸಿ ಮಂತ್ರಗಳೂ, ಸೂಕ್ತಗಳೂ ಬಂದಿರುವುದು ಅಸಂಭವವೆಂದು ಅವುಗಳ ಪರಿಶ್ರಮವಿರುವವ ರಿಗೆ ಮೇಲ್ನೋಟಕ್ಕೂ ಸಹ ತಿಳಿಯುವ ವಿಷಯ. ವೇದೋಕ್ತವಾದ ವಸಿಷ್ಠ ವಿಶ್ವಾಮಿತ್ರರ ಕಲಹದಲ್ಲಿ ಒಂದು "ಕಾಮಧೇನುವೂ" ಸಿಕ್ಕಿ ಹಾಕಿಕೊಂಡಿ ರುವುದು ಸುಪ್ರಸಿದ್ಧವಾಗಿದೆ. ಕೇಳಿದ್ದನ್ನೆಲ್ಲಾ ಕೊಡುವ ಕಾಮಧೇನುವು 'ಕೇವಲ ಸಾಮಾನ್ಯ ಗೋವೇ ? ಐಶ್ವರ್ಯ, ಭೋಗ, ಕ್ಷಾತ್ರ, ಶಕ್ತಿಗಳನ್ನು ಪಡೆದಿದ್ದ ಕೌಶಿಕನಿಗೆ ಇದರ ಮೇಲೆ ಬಯಕೆಯಾಯಿತೆಂದರೆ, ಇದು ಎಂತಹ 'ಗೋವು' ಎಂದು ತಿಳಿಯಬೇಕಾದದ್ದು ಅವಶ್ಯ!

ಅಲ್ಲದೆ ಬಹುವಚನದಲ್ಲಿ "ಗೋವು"ಗಳನ್ನು ಕುರಿತ ಇನ್ನೊಂದು ಕಥೆಯೂ ವೇದದಲ್ಲಿ ಬಂದಿರುವುದರ ಅರ್ಥವೇನು ? "ಗೋವು"ಗಳನ್ನು 'ಪಣಿ'ಗಳು ಹೊಡೆದುಕೊಂಡು ಹೋಗಿ, ಅನೇಕ ಕಾಲ ಗುಹೆಯಲ್ಲಿ ಬಚ್ಚಿಟ್ಟರೆಂದೂ, ಆಗ ಇಂದ್ರನ ದೂತಿಯಾದ ದೇವಶುನಿಯಾದ 'ಸರ-ಮೆ'ಯು ಇವುಗಳನ್ನು ಪತ್ತೆ ಹಚ್ಚಿದಳೆಂದೂ, ಇಂದ್ರನು ಇವುಗಳನ್ನು ಬಿಡಿಸಿ ತಂದನೆಂದೂ, ಈ ಪ್ರಸಂಗದಲ್ಲಿ ಪಣಿಗಳಿಗೂ ಸರಮೆಗೂ ನಡೆದ ಸಂವಾದವನ್ನು ವೇದವೇ ಬಹು ಸುಂದರವಾಗಿ, ಸಾಕಷ್ಟು ವಿಸ್ತಾರವಾಗಿ, ತಿಳಿಸುತ್ತಿದೆ. ಇದೆಲ್ಲದರ ಅರ್ಥವೇನು ?

ವೇದದ ಒಂದು ಭಾಗಕ್ಕೆ "ಗೋಪಥ ಬ್ರಾಹ್ಮಣ" ಎಂದು ಹೆಸರಿದೆ. ಇದರರ್ಥವೇನು ? ಇಲ್ಲೆಲ್ಲ ಕೇವಲ ಸಾಮಾನ್ಯ ಗೋವನ್ನೋ ಅಥವಾ ಕೇವಲ ಚಾರಿತ್ರಿಕಾಂಶಗಳನ್ನೋ ಮಾತ್ರ ಹುಡುಕುವವರು ನಿರಾಶ ರಾಗ ಬೇಕಾಗುತ್ತದೆ !

## ೪. ಗೋ ಸೂಕ್ತ ವಿವರಣೆ

ಮೊದಲು ಋಗ್ವೇದದ ಗೋ ಸೂಕ್ತವನ್ನು ಪರಿಶೀಲಿಸೋಣ. (X-169) ನಾಲ್ಕೇ ಮಂತ್ರಗಳನ್ನುಳ್ಳ ಈ ಸೂಕ್ತಕ್ಕೆ ಗೋವುಗಳೇ ದೇವತೆ ಗಳು ಎಂದು ಹೇಳಲ್ಪಟ್ಟಿದೆ. ಇದರ ಭಾವ ಹೀಗಿದೆ :

"ವಾಯುವು ಗೋವುಗಳ ಬಳಿ ಸುಖವಾಗಿ ಬೀಸುತ್ತ ಬರಲಿ. ಗೋವು ಗಳು ಪುಷ್ಟಿಕರವಾದ ಹುಲ್ಲು ಮೊದಲಾದ ಸಸ್ಯಗಳನ್ನು ಚೆನ್ನಾಗಿ ತಿನ್ನುವಂತಾ ಗಲಿ. ಸಮೃದ್ಧವಾದ ಮತ್ತು ಜೀವನವನ್ನು ಧನ್ಯವನ್ನಾಗಿ ಮಾಡುವ (ಜೀವಧನ್ಯಾಃ) ನೀರನ್ನು ಕುಡಿಯುವಂತಾಗಲಿ, ಹೇ ರುದ್ರದೇವ ! ನಮಗೆ ಅನ್ನವನ್ನು ಒದಗಿಸುವ, (ತನ್ನ) ಕಾಲ ಮೇಲೆ ನಿಂತು ಬದುಕುವ ಈ ಗೋವುಗಳಿಗೆ ಸುಖವನ್ನೇ ಉಂಟು ಮಾಡು."

"ಯಾವ ಗೋವುಗಳು ಒಂದೇ ರೂಪವನ್ನು ಹೊಂದಿವೆಯೋ ಅಥವಾ ವಿವಿಧವಾದ ರೂಪಗಳನ್ನು ಹೊಂದಿವೆಯೋ ಅಥವಾ ಸಮಾನಾ ಕಾರಗಳನ್ನು ಪಡೆದಿವೆಯೋ, ಇಂತಹ ಗೋವುಗಳ ಹೆಸರುಗಳನ್ನೆಲ್ಲಾ ಅಗ್ನಿ

ದೇವನು ತನ್ನ ಯೋಗ ಬಲದಿಂದ ತಾನೊಬ್ಬನೇ ತಿಳಿಯಬಲ್ಲನು. ಅಲ್ಲದೆ ಈ ಗೋವುಗಳನ್ನು ಸೃಷ್ಟಿಮಾಡಿದವರೇ ಅಂಗೀರಸ ವಂಶದ ಋಷಿಗಳು. ಅವರ ತಪಸ್ಸಾಮರ್ಥ್ಯವೂ ಯಜ್ಞಾಚರಣೆಯೂ ಇವುಗಳ ಸೃಷ್ಟಿಗೆ ಸಾಧನವಾದವು. ಇಂತಹ ಸಮಸ್ತ ಗೋವುಗಳಿಗೂ, ಪರ್ಜನ್ಯ ದೇವನು ಸುಖವನ್ನು ಕೊಡಲಿ."

"ಗೋವುಗಳು ಯಾಗಾರ್ಹರಾದ ದೇವತೆಗಳಿಗೆ ಮಾತ್ರ ತಮ್ಮ 'ಆತ್ಮೀಯ' ಶರೀರವನ್ನೇ ಅರ್ಪಿಸುತ್ತವೆ. ಇವುಗಳ ಸಮಸ್ತ ರೂಪಗಳನ್ನು 'ಸೋಮದೇವ'ನೊಬ್ಬನೇ ತಿಳಿದಿದ್ದಾನೆ. ನಮಗಾಗಿಯೇ ಕ್ಷೀರ ಸಮೃದ್ಧವಾದ ಮತ್ತು ಸಂತಾನವನ್ನು ಹೊಂದಿದ (ಪ್ರಜಾವತೀಃ) ಈ ಗೋವುಗಳನ್ನು, ಹೇ ಇಂದ್ರದೇವ, ನೀನಾಗಿಯೇ ನಮ್ಮ ಕೊಟ್ಟಿಗೆಯಲ್ಲಿ ತಂದು ಕಟ್ಟು !

"ಸೃಷ್ಟಿಕರ್ತನಾದ ಪರಮಾತ್ಮನು, ಅವನನ್ನೇ ಸ್ತುತಿ ಮಾಡುವ ನನಗಾಗಿ ಈ ಗೋವುಗಳನ್ನು ಕೊಟ್ಟಿದ್ದಾನೆ. ವಿಶ್ವದೇವತೆಗಳು ಪಿತೃಗಳು ಸಮ್ಮತಿಸುವಂತೆ ಮಾಡಿ ಮಂಗಳಕರಗಳಾದ ಈ ಗೋವುಗಳನ್ನು ತಾನಾಗಿಯೇ ನಮ್ಮ ಕೊಟ್ಟಿಗೆಯಲ್ಲಿ ತಂದು ಕಟ್ಟುವಂತಾಗಲಿ. ಈ ಗೋವು ಸಂತತಿಯಿಂದಲೇ ನಾವು ಸುಖಸಮೃದ್ಧರಾಗಿರೋಣ."

ಮೇಲಿನ ಸೂಕ್ತದಲ್ಲಿ ಕೇವಲ ಚಾರಿತ್ರಿಕ ದೃಷ್ಟಿಯಿಂದ ಕಾಣುವುದೇನು ? ಆರ್ಯರೆಂಬ "ಗ್ರಾಮ್ಯ" ಜನಾಂಗವೊಂದು, ತಮಗಾಗಿಯೂ, ತಮ್ಮ ಪಶುಗಳಿಗಾಗಿಯೂ ಆಹಾರ, ನೀರುಗಳನ್ನು ಹುಡುಕುತ್ತ ನಮ್ಮ ದೇಶಕ್ಕೆ ಒಂದಾನೊಂದು ಕಾಲದಲ್ಲಿ ಹೊರಗಿನಿಂದ ಬಂದರೆಂದು ಸೃಷ್ಟವಾಗಿರುವ ಪೊಳ್ಳುಕಥೆಯ ಹಿನ್ನೆಲೆಯಲ್ಲಿ ಈ ಸೂಕ್ತವನ್ನು ನೋಡಿದರೆ ಗೋವುಗಳ ಕ್ಷೇಮಕ್ಕಾಗಿ ಮಾಡಿದ ಪ್ರಾರ್ಥನೆಯೊಂದು ಮಾತ್ರ ಇಲ್ಲಿ ಹೊರಗಣ್ಣಿಗೆ ಕಾಣುತ್ತದೆ. ಆದರೆ ಆಗ ಒಳಗಿನ ವಿವರಣೆಗಳೆಲ್ಲ ಅಸಂಬದ್ಧವಾಗಿಯೇ ತೋರುವುವು ! ಉದಾ : "ಗೋವುಗಳು ಹುಲ್ಲನ್ನು ತಿನ್ನಲಿ, ನೀರನ್ನು ಕುಡಿಯಲಿ" ಎಂಬುದಕ್ಕೆ ವೇದಸೂಕ್ತ ಅವಶ್ಯವೇ ? ಇದಕ್ಕೆ ರುದ್ರನ ಅನುಗ್ರಹ ಏತಕ್ಕೆ ಬೇಕು ? "ಅಂಗೀರಸ ಋಷಿಗಳು ತಪಸ್ಸಿನಿಂದ ಗೋವುಗಳನ್ನು ಸೃಷ್ಟಿಸಿದರೆಂದರೆ ಏನರ್ಥ." ಇದರಲ್ಲಿ ತಿಳಿದು ಬರುವ

ಚರಿತ್ರೆ ಏನು ? ಗೋವುಗಳಿಗೆ, ಕೆಲವುಗಳಲ್ಲಿ ಒಂದೇ 'ರೂಪವೂ' ವಿವಿಧ 'ರೂಪವೂ' ಸಮಾನ 'ರೂಪವೂ' ಇವೆ ಎಂಬುದನ್ನು ಹೊರಗಣ್ಣಿನಿಂದ ಒಪ್ಪಿದರೂ "ಇವುಗಳ ಹೆಸರುಗಳನ್ನೆಲ್ಲ ಅಗ್ನಿದೇವನೊಬ್ಬನೇ ತಿಳಿದಿದ್ದಾನೆ" ಎಂದು ಹೇಳಿರುವುದರ ಅರ್ಥವೇನು ? "ಗೋವುಗಳು ದೇವತೆಗಳಿಗಾಗಿ, ತಮ್ಮ ಆತ್ಮಾಶ್ಮೀಯ ಸಮರ್ಪಣೆಯನ್ನು ಮಾಡಿವೆ" ಎಂದರೇನರ್ಥ? ಇದರ ಗುಟ್ಟು ಸೋಮನಿಗೇ ಏಕೆ ತಿಳಿದಿರಬೇಕು? "ಇಂದ್ರನೇ ಇವುಗಳನ್ನು ಋಷಿಗಳ ಕೊಟ್ಟಿಗೆಯಲ್ಲಿ ತಂದು ಕಟ್ಟಲಿ" ಎಂಬ ಪ್ರಾರ್ಥನೆಗೆ ಏನು "ಚಾರಿತ್ರಿಕ" ಅರ್ಥವಿದೆ? "ಸ್ತೋತ್ರ ಮಾಡುವ ಋಷಿಗಾಗಿ ಮಾತ್ರ ಭಗವಂತನಿಂದ ಗೋವು ಕೊಡಲ್ಪಟ್ಟವೆ" ಎಂಬುದಕ್ಕೇನರ್ಥ? ವಿಶ್ವೇದೇವತೆಗಳು ಏತಕ್ಕೆ ಇದರ ರಕ್ಷಕರು ?

ಈ ಎಲ್ಲ ಪ್ರಶ್ನೆಗಳಿಗೂ ಸಮಂಜಸವಾದ ಅರ್ಥ ದೊರೆತ ಹೊರತು ಸೂಕ್ತಕ್ಕೆ ಅಪಾರ್ಥವೇ ಆಗುವುದು. ತಮಗೆ ತಿಳಿಯದ ವಿವರಣೆಗಳಿಗೆ ಅರ್ಥವೇ ಇಲ್ಲವೆಂದೂ, ಅವುಗಳನ್ನು ಹುಚ್ಚರಾದ ಋಷಿಗಳು ಮನಸ್ಸಿಗಳಾಗಿ, ಅತಿಶಯೋಕ್ತಿ ಎಂಬಂತೆ ಬರೆದುಕೊಂಡಿರುವರೆಂದೂ, ಒಟ್ಟಿನಲ್ಲಿ ತಮ್ಮ ಗೋ ಸಂಪತ್ತನ್ನು ಹೇಗಾದರೂ ಕಾಪಾಡಿಕೊಳ್ಳುವ ಬಯಕೆಯನ್ನು ಮಾತ್ರ ಇಲ್ಲಿ ವ್ಯಕ್ತಪಡಿಸಿರುವರೆಂದೂ ಹೇಳುವುದು ಅತಿವಾದವೂ, ವ್ಯರ್ಥ ಸಾಹಸವೂ ಆಗುತ್ತದೆ. ಈ ರೀತಿಯ ಬಾಯಿಬಡುಕರನ್ನು ಉಪೇಕ್ಷಿಸಿ ಈಗ ಸೂಕ್ತದ ಒಳಹೊಕ್ಕರೆ ಕಾಣುವುದೇ ಬೇರೆ :

ಇಲ್ಲಿ, ಹಿಂದೆ ಸೂಚಿಸಿದಂತೆ 'ಗೋ' ಎಂದರೆ ಬೆಳಕು; ಕೇವಲ 'ಭೌತಿಕ ಬೆಳಕಲ್ಲ' ಇದು. ಋಷಿಗಳಿಗೆ ತಮ್ಮ ಅಂತರಂಗ ಜೀವನದ ಸಾರ್ಥಕ್ಯಕ್ಕಾಗಿ ಬೇಕಾದ "ಒಳಗಿನ ಬೆಳಕು". ಅದರ ಪರಿಪೋಷಣೆಗಾಗಿ ಉದಿಸಿದ ಪ್ರಾರ್ಥನೆ ಇದು. ಇದಕ್ಕಾಗಿಯೇ ಈ 'ಬೆಳಕಿಗೂ' ಅಗ್ನಿ, ಸೋಮ, ಇಂದ್ರ, ಪ್ರಜಾಪತಿ, ವಿಶ್ವೇದೇವತೆಗಳಿಗೂ ಸಂಬಂಧವಿರುವುದು ಸ್ಪಷ್ಟ. ಕತ್ತಲೆಯಲ್ಲಿ ಕುಳಿತ ಮಾನವನಿಗೆ ಹೊರಗಿನ ಬೆಳಕು ಎಷ್ಟು ಪ್ರಿಯವಾದ, ಪೂಜ್ಯವಾದ ಅತಿಥಿಯೋ, ಹಾಗೆಯೇ ಒಳಗಿನ ಕತ್ತಲೆಯಲ್ಲಿ (ದೀರ್ಘತಮಸ್ಸು ಎಂಬ ಋಷಿಗಳಂತೆ) ಬಹುಕಾಲ ನೊಂದು, ಬೆಂದು, ಕುಳಿತ ಜ್ಞಾನಾರ್ಥಿಯಾದ ಋಷಿಗೆ ಬೇಕಾದುದು 'ದಿವ್ಯಜ್ಞಾನದ

ಬೆಳಕು.' ಗೋವುಗಳಂತೆ ಈ ದಿವ್ಯ ಜ್ಞಾನದ ಬೆಳಕಿನ 'ಕಿರಣಗಳಿಗೂ' 'ಹುಲ್ಲು', 'ನೀರು' ಅವಶ್ಯಕ. ಪೋಷಣೆಯಿಲ್ಲದ ಜ್ಞಾನ, ಸತ್ತುಹೋಗುವುದು ಸಹಜ. ಇವುಗಳ ಜೀವನವನ್ನು ಸಾರ್ಥಕ ಮಾಡುವ "ನೀರಿಗೆ" ಋಷಿಗಳು "ಜೀವಧನ್ಯಾ" ಎಂಬ ವಿಶೇಷಣವನ್ನು ಕೊಟ್ಟಿದ್ದಾರೆ. ಆಗ ಈ ಗೋವುಗಳು "ತಮ್ಮ ಕಾಲಮೇಲೆ ಸ್ವತಂತ್ರವಾಗಿ ನಿಲ್ಲಬಲ್ಲವು"–"ಪದ್ವತೀಃ". ಕೇವಲ "ಗೋವುಗಳಿಗೆ ಕಾಲುಗಳಿವೆ", ಎನ್ನಲು ವೇದಸೂಕ್ತವನ್ನೋದಿಯೇ ತಿಳಿಯುವ ಅವಶ್ಯಕತೆ ಇದೆಯೆ ?

ರುದ್ರನು ಮೃತ್ಯುದೇವತೆ, ಇವನು ಈ ಒಳಗಿನ ಬೆಳಕನ್ನು ಕೊನೆಗಾಣಿಸದಿರಲಿ ಎಂದು ಮಾಡಿರುವ ಪ್ರಾರ್ಥನೆಯು ಜ್ಞಾನದ ಅನಂತತೆಗೂ ಸಾರ್ವಕಾಲಿಕತೆಗೂ ಬಯಸಿ ಮಾಡಿದ ಪ್ರಾರ್ಥನೆಯಷ್ಟೇ? ಹಾಗೆಯೇ ಕಣ್ಣಿಗೆ ಕಾಣುವ ಹೊರಗಿನ ಗೋವುಗಳಿಗೆ ಕೆಲವೊಮ್ಮೆ ಸಮಾನರೂಪ ಆಕಾರ ಬಣ್ಣಗಳೂ, ವಿವಿಧ ರೂಪ ಆಕಾರಗಳೂ ಇರುವಂತೆ, "ಬೆಳಕಿನ" ಕಿರಣಗಳಿಗೂ ಸೂರ್ಯಬಲವನ್ನು ಆಶ್ರಯಿಸಿ, ಬೇರೆ ಬೇರೆ ಬಣ್ಣಗಳಿರುವಂತೆ, 'ಜ್ಞಾನಸೂರ್ಯನ' ಕಿರಣಗಳಿಗೂ, ಜ್ಞಾನ ಬಲವನ್ನಾಶ್ರಯಿಸಿ, ಬೇರೆ ಬೇರೆ ಬಣ್ಣಗಳೂ ಉಂಟು. ಜ್ಞಾನಪ್ರಕಾರವು ಸರ್ವದಾ ಒಂದೇ ಆಗಿರುವುದಿಲ್ಲ. ಸತ್ಯವು ತನ್ನ ಬೇರೆ ಬೇರೆ ಮುಖಗಳನ್ನು ವಿವಿಧ ರೂಪಗಳಲ್ಲಿಯೂ ಆಕಾರಗಳಲ್ಲಿಯೂ ವರ್ಣಗಳಲ್ಲಿಯೂ ತೋರಿಸಿಕೊಳ್ಳುತ್ತದೆ. (ಗೀತೆಯಲ್ಲಿ ಹನ್ನೊಂದನೆಯ ಅಧ್ಯಾಯದಲ್ಲಿ ನಾನಾ ವರ್ಣಾಕೃತೀನಿ ಚ ಎಂಬಂತೆ.) ಇವುಗಳನ್ನೆಲ್ಲ ಅಗ್ನಿದೇವನು ತಿಳಿದಿರುವನೆಂಬುದರಲ್ಲಿಯೂ ಅರ್ಥವಿದೆ.

ಅಗ್ನಿಯು, ಭೂ ತತ್ವ ಅಭಿಮಾನದೇವತೆಯಾಗಿದ್ದು ಮಾನವನಿಗೆ ಅತ್ಯಂತ ಸಮೀಪದಲ್ಲಿರುವ ಮೊದಲ ದೇವತೆ. ಇವನೇ ದೇವತೆಗಳ 'ಮುಖ', 'ಪುರೋಹಿತ'. ಆದುದರಿಂದ ಅಗ್ನಿ ಸಮಾನವಾದ, ಅಗ್ನಿ ಸದೃಶವಾದ, ದೇವದತ್ತವಾದ ಪ್ರಜ್ಞೆಯ ಜ್ವಾಲೆಯೊಂದು ಎಂದೆಂದೂ ನಂದದೆ ಮಾನವನಲ್ಲಿ ಸರ್ವದಾ ಜಾಗೃತವಾಗಿಯೇ ಇರುವುದು. ಜ್ಞಾನದ ಬೆಳಕಿನ ಬಣ್ಣಗಳು ಇದರ ಕಣ್ಣಿಗೆ ಬೀಳದೆ ಹೇಗೆ ತಪ್ಪಿಸಿಕೊಂಡಾವು ?

ಅಲ್ಲದೆ ಆಂಗಿರಸ ಋಷಿಗಳು ತಪಸ್ಸಿನ ಪ್ರಭಾವದಿಂದ ಈ ಲೋಕದಲ್ಲಿ ಈ ಗೋವುಗಳನ್ನು ಸೃಷ್ಟಿಸಿದರೆಂದರೆ, ಅವರೆಲ್ಲರೂ ಪರಂಪರೆಯಿಂದ ಗೌಳಿಗರಾಗಿದ್ದು, ಪಶುಸಂಗೋಪನೆ, ಸಂವೃದ್ಧಿಗಳಲ್ಲಿ ತೊಡಗಿದ್ದವರೆಂದು ಅರ್ಥವಲ್ಲ! "ತಪಸ್ಸು ಮಾಡಿದರೆ ಭೃಗುಗಳಂತೆ ಆಂಗಿರಸರಂತೆ ತಪಸ್ಸು ಮಾಡಬೇಕು— ಭೃಗೂಣಾಂ ಅಂಗಿರಸಾ ತಪಸಾ ತಪ್ಯಧ್ವಂ" ಎಂದು ವೇದವೇ ಹೇಳುತ್ತದೆ. ವೈದಿಕ ಜ್ಞಾನ ಸಂಪತ್ತಿನಲ್ಲಿ ಆಂಗಿರಸ ಋಷಿಗಳ ಪಾಲು, ಕೊಡುಗೆ ಬಹಳ ಇದೆ. ಆದುದರಿಂದ ಆಂಗಿರಸರು ತಪಸ್ಸಿನಿಂದ ಈ ಲೋಕಕ್ಕೆ ತಂದ ಗೋವುಗಳೆಂದರೆ ತಮ್ಮ ತಪಸ್ಸಿನ ಮಹಿಮೆಯಿಂದ ಸಾಕ್ಷಾತ್ಕರಿಸಿಕೊಂಡು ಈ ಲೋಕಕ್ಕೆ ಪ್ರಕಟಪಡಿಸಿದ ಜ್ಞಾನಸೂರ್ಯನ ಕಿರಣಗಳು ಎಂಬುದೇ ಸಮಂಜಸವಾದ ಅರ್ಥ.

ಪುರಾಣದ ಕಥೆಯಲ್ಲಿಯೂ ಇದೇ ಆಂಗಿರಸ ಗೋತ್ರದ ಜಮದಗ್ನಿಗಳ "ಗೋ" ಒಂದನ್ನು ಕಾರ್ತವೀರ್ಯನು ಅಪಹರಿಸಲು ನಡೆಸಿದ ಕಥೆಯೂ ಅದರ ಪರಿಣಾಮವೂ ವರ್ಣಿಸಲ್ಪಟ್ಟಿವೆ. (ವಸಿಷ್ಠ - ವಿಶ್ವಾಮಿತ್ರರ ಕಥೆಯಲ್ಲಿ ಬರುವಂತೆ.) ಜಮದಗ್ನಿ ಋಷಿಗಳ ಕಾಲದಲ್ಲಿ ಕಾರ್ತವೀರ್ಯನಂತಹ ಉನ್ಮತ್ತ ಕ್ಷಾತ್ರ ಶಕ್ತಿಗಳಿಂದ ವೈದಿಕಜ್ಞಾನ "ಗೋವುಗಳಿಗೆ" ಬಹಳ ಉಪದ್ರವ ಏರ್ಪಟ್ಟಂತೆ ಕಾಣುತ್ತದೆ. ಇದಕ್ಕಾಗಿಯೇ ಪರಶುರಾಮರು ಕೈಕೊಂಡ ಕ್ಷಾತ್ರ ನಿರ್ಮೂಲನ ವ್ರತವು "ಬ್ರಾಹ್ಮಣ್ಯದ" ಪರಿಪೋಷಣೆಯ, (ವೈದಿಕಜ್ಞಾನ ಸಂಪತ್ತಿನ ಸಂರಕ್ಷಣೆಯ) ಉದ್ದೇಶವನ್ನೇ ಹೊಂದಿದ್ದಿತು. "ಅಬ್ರಹ್ಮಣ್ಯಂ ಅಪಾಕರೋತು ಭಗವಾನ್ ಆಬ್ರಹ್ಮಕೀಟಂ ಮುನಿಃ" ಎಂದು ಶ್ರೀ ವೇದಾಂತದೇಶಿಕರು ಪರಶುರಾಮಾವತಾರವನ್ನು ಈ ಅರ್ಥದಲ್ಲಿಯೇ ಸ್ತುತಿಸಿರುವುದು ಸ್ಪಷ್ಟ.

ನಮ್ಮ ದೇಶದಲ್ಲಿ ಈ ಜ್ಞಾನ "ಗೋವುಗಳು" ಹಿಂದೆಯೂ ಈಗಲೂ ಅನುಭವಿಸುತ್ತಿರುವ ಕಷ್ಟಗಳು ಅಷ್ಟಿಷ್ಟಲ್ಲ.

## ೫. ಶ್ರೀ ವಿಷ್ಣುಸೂಕ್ತದಲ್ಲಿ 'ಗೋವು'ಗಳು

ಋಗ್ವೇದದ ಸುಪ್ರಸಿದ್ಧವಾದ ಶ್ರೀ ವಿಷ್ಣುಸೂಕ್ತದಲ್ಲೂ (I-154-6), ಇದರ ರೂಪಾಂತರವಾಗಿ ಕೃಷ್ಣಯುಜುಸ್ಸಂಹಿತೆಯಲ್ಲಿ (I-3-6) ಬಂದಿರುವ ವಿಷ್ಣು ಅನುವಾಕದಲ್ಲೂ, ಪರಮಾತ್ಮನು ಬಲಿಷ್ಠವಾದ ದೊಡ್ಡ ಕೊಂಬುಗಳನ್ನುಳ್ಳ, ಚುರುಕಾದ ಪಾದಗತಿಯುನ್ನುಳ್ಳ ಗೋವುಗಳ ಮಧ್ಯದಲ್ಲಿಯೇ ಸರ್ವದಾ ವಾಸಿಸುವುದಾಗಿ ವರ್ಣಿಸಲಾಗಿದೆ :

> ಗಮಧ್ಯೈ ಗಾವೋ ಯತ್ರ ಭೂರಿ ಶೃಂಗಾ ಅಯಾಸಃ। ಅತ್ರಾಹ
> ತದುರುಗಾಯಸ್ಯ ವಿಷ್ಣೋಃ ಪರಮಂ ಪದಂ ಅವಭಾತಿ
> ಭೂರೇಃ।
> ವಿಷ್ಣೋಃ ಕರ್ಮಾಣಿ ಪಶ್ಯತ ಯತೋ ವ್ರತಾನಿ ಪಸ್ಪಶೇ।
> ಇಂದ್ರಸ್ಯ ಯುಜ್ಯಸ್ಸಖಾ। ತದ್ವಿಷ್ಣೋಃ ಪರಮಂ ಪದಗ್ಂ
> ಸದಾ ಪಶ್ಯನ್ತಿ ಸೂರಯಃ। ದಿವೀವ ಚಕ್ಷುರಾತತಂ॥

["ಗೋ" ಶಬ್ದಾರ್ಥ ವಿವರಣೆಯ ಸಂದರ್ಭದಲ್ಲಿ ಯಾಸ್ಕರು ನಿರುಕ್ತದಲ್ಲಿ ಈ ಮಂತ್ರವನ್ನುದಾಹರಿಸಿ ಇಲ್ಲಿ "ಬೆಳಕು" ಎಂದೇ ಅರ್ಥಮಾಡಿದ್ದಾರೆ. (ನಿ II-7)]

"ಎಲ್ಲಿ ಬಲಿಷ್ಠವಾದ ಕೊಂಬುಗಳನ್ನುಳ್ಳ ಚುರುಕಾದ ಗೋವುಗಳು ಇವೆಯೋ, ಅಲ್ಲಿ, ಗೋಮಧ್ಯದಲ್ಲಿ, ಮಹಾಗತಿಯುನ್ನುಳ್ಳ, ಸ್ತೋತ್ರಪ್ರಿಯನಾದ, ಮಹಾವಿಭೂತಿಯಾದ, ವಿಷ್ಣುವಿನ ಪರಮ ಪದವು (ಪಾದಸ್ಥಾನವು, ವಾಸಸ್ಥಾನವು) ಪ್ರಕಾಶಿಸುತ್ತಿದೆ. (ಇಂತಹ ನಿನ್ನ ವಾಸಸ್ಥಾನಕ್ಕೆ ಹೋಗಬೇಕೆಂಬಾಸೆಯಿಂದಿರುವೆವು—ತೇ ತೇ ಧಾಮಾನ್ಯುಶ್ಮಸಿ-) ಆಹಾ! ಶ್ರೀ ವಿಷ್ಣುವಿನ ಅದ್ಭುತವಾದ (ದಶಾವತಾರಾದಿ) ವ್ಯಾಪಾರ ಕರ್ಮಗಳನ್ನು ನೋಡಿರಿ! ಇವನ (ಲೋಕ ಸಂರಕ್ಷಣ ರೂಪ) ವ್ರತಗಳು ವ್ಯಕ್ತವಾಗಿವೆ! ಇಂದ್ರನ ಸಹಜ ಸ್ನೇಹಿತನಲ್ಲವೇ! ಇಂತಹ ವಿಷ್ಣುವಿನ ಪರಮಪದವನ್ನು ನಿತ್ಯಸೂರಿಗಳು ಸರ್ವದಾ, ದ್ಯುಲೋಕದಲ್ಲಿ ವ್ಯಾಪ್ತವಾದ ಕಣ್ಣಿನಂತೆ, ದರ್ಶನ ಮಾಡುತ್ತಲೇ ಇರುವರು."

ಸಕಲ ಗೋ ಸಮೂಹ ಪರಿವೃತನಾದ "ಗೋಪಾಲನ", ಗೋವಿಂದನ" ದಿವ್ಯ ವರ್ಣನೆಯಿದು.

"ಸರ್ವೋಪನಿಷದೋ ಗಾವಃ ದೋಗ್ಧಾ ಗೋಪಾಲ ನಂದನಃ" ಎಂಬ ಗೀತಾಧ್ಯಾನಶ್ಲೋಕದ ಗೋಪಾಲ ವರ್ಣನೆಗೆ ಈ ವಿಷ್ಣು ಸೂಕ್ತವೇ ಆಧಾರ. ಇಲ್ಲಿ ಜ್ಞಾನವೆಂಬ "ಬೆಳಕು" ಉಪನಿಷತ್ತಿನ ರೂಪದ ಗೋವು ಗಳೊಡನೆ ತಾದಾತ್ಮ್ಯ ಹೊಂದಿರುವುದು ಗಮನೀಯ. ಶ್ರೀ ವಿಷ್ಣು ಸಹಸ್ರ ನಾಮದಲ್ಲಿಯೂ:

"ಗೋವಿಂದಃ ಗೋವಿದಾಂ ಪತಿಃ" ಎಂದು ಉಕ್ತವಾಗಿರುವುದು ಇದೇ ಅರ್ಥದಲ್ಲಿ. ಇಲ್ಲಿ ಶ್ರೀ ಪರಾಶರಭಟ್ಟರು "ಭಗವದ್ಗುಣ ದರ್ಪಣ" ವೆಂಬ ತಮ್ಮ ಭಾಷ್ಯದಲ್ಲಿ "ಗೋವಿಂದಃ ತದ್ಗವಾಂ ಸ್ತುತಿಗಿರಾಂ ವಿನ್ದಃ" ಎಂದೂ (189) "ಗಾವಃ- ವೇದಗಿರಃ," (190) ಎಂದೂ ವ್ಯಾಖ್ಯಾನ ಮಾಡಿದ್ದಾರೆ. ಭಗವಂತನನ್ನು ಕೊಂಡಾಡುವ ವೇದವಾಕ್ಯಗಳೇ ಗೋವು ಗಳು. ಇವನ್ನು ಒಳಹೊಕ್ಕು ತಿಳಿದ ಜ್ಞಾನಿಗಳ ಜ್ಞಾನಯಜ್ಞದಿಂದ ಆರಾ ಧಿಸಲ್ಪಟ್ಟು ಅವರನ್ನು ಸಂರಕ್ಷಿಸುವವನು ಭಗವಂತನೆಂದು ಅರ್ಥ. ಹೀಗೆಯೇ "ಗೋಪತಿಃ" ಎಂಬ ಶ್ರೀ ನಾಮಕ್ಕೂ: "ಅಶೇಷಚ್ಛಂದೋ ಭಾಷಾ ವೇಷವಾಙ್‌ನಿರ್ವಾಹಕಃ" ಎಂದರೆ, "ಸಕಲಛಂದೋಬದ್ಧವಾದ ವೇದ ಭಾಷಾ ವೇಷವುಳ್ಳವಾಕ್ಕಿಗೆ, ದಿಗ್ದರ್ಶನ ಮಾಡುವವನು" ಎಂದೂ. (ಶ್ರೀ ನಾಮ 497) ಅರ್ಥಮಾಡಿರುವುದನ್ನು ಅನುಸಂಧಾನ ಮಾಡಬೇಕು. ಹೀಗ ನೋಡಿದಾಗ "ಗೋ ಗೋಪ ಗೋಪೀ ಜನವಲ್ಲಭ" ನೆಂಬ ಭಗ ವಂತನ ಬಿರುದಾವಳಿಗೆ ವಿಶೇಷ ಅರ್ಥವಿರುವುದನ್ನು ಜ್ಞಾನಿಗಳು ಮನಗಾಣ ಬೇಕು. ಶ್ರೀಭಾಗವತದ "ಗೋವರ್ಧನೋದ್ಧರಣ", "ಗೋವಿಂದ" ಪಟ್ಟಾಭಿಷೇಕಗಳಿಗೂ ಮಾರ್ಮಿಕಾರ್ಥ ಇರುವುದು ಈಗ ತಿಳಿಯಬಹುದು. ("ಗೋಪಾಲ" ತತ್ತ್ವವು, "ವಾಸುದೇವ" ತತ್ತ್ವದಂತೆ (ಈಶಾವಾಸ್ಯ-೧) ಪ್ರಾಚೀನವೂ, ವೈದಿಕವೂ ಆಗಿರುವುದನ್ನು "ಸಂಶೋಧಕರು" ಗಮನಿಸದೆ, ಪುರಾಣಗಳಿಗೂ ವೇದಕ್ಕೂ ವಿರೋಧ ಕಲ್ಪಿಸುವುದರಲ್ಲೇ ತತ್ಪರರಾಗಿರು ವುದು ಶೋಚನೀಯ. ಇವರನ್ನು ಕುರಿತೇ "ಇತಿಹಾಸ ಪುರಾಣಾಭ್ಯಾಂ

ವೇದಂ ಸಮುಪಬೃಂಹಯೇತ್" ಎಂದು ಇದಕ್ಕಾಗಿಯೇ ಸ್ಮೃತಿಯಲ್ಲಿ ಆದೇಶವಿರುವದು ಈಗ ಸ್ಪಷ್ಟ.)

ಇದೆಲ್ಲವನ್ನೂ ಚೆನ್ನಾಗಿ ಗ್ರಹಿಸಿ, ಶ್ರೀ ನಾರಾಯಣ ಭಟ್ಟಾದಿರಿಪಾದರೆಂಬ ಮಹಾಭಕ್ತರು ಶ್ರೀ ಗುರುವಾಯೂರಿನ ಶ್ರೀಕೃಷ್ಣಸ್ವಾಮಿಯನ್ನುದ್ದೇಶಿಸಿ ರಚಿಸಿದ "ನಾರಾಯಣೀಯ"ವೆಂಬ ಶ್ರೀ ಭಾಗವತದ ಅಪರಾವತಾರರೂಪ ಗ್ರಂಥದಲ್ಲಿ, ಭಗವಂತನು ನಿಬಿಡವಾಗಿ (ಸಾಂದ್ರವಾಗಿ) ರುವ ಬೆಳಕಿನ ಸಮೂಹ ರೂಪದಲ್ಲಿ ತಮಗೆ ಮೊದಲು ದರ್ಶನ ಅನುಗ್ರಹಿಸಿದನೆಂದೂ, ಅದನ್ನು ಕಂಡು ಪುಳಕಿತರಾದ ಅವರು ಆ ಬೆಳಕಿನ ಹೃದಯವನ್ನು ಮತ್ತಷ್ಟು ಸೂಕ್ಷ್ಮವಾಗಿ ಅವಲೋಕಿಸಿದಾಗ ಅದರ ಮಧ್ಯದಲ್ಲಿ ಒಂದು ದಿವ್ಯ ಕಿಶೋರನನ್ನು ಕಂಡುದಾಗಿಯೂ, ಆ ಕಿಶೋರನು ತಾರುಣ್ಯದ ಆರಂಭದಲ್ಲಿದ್ದು ರಮ್ಯನಾಗಿ ಕಾಣಿಸಿದುದಾಗಿಯೂ, ನಾರದರೂ, ಉಪನಿಷತ್ತುಗಳೆಂಬ (ಗೋಪಿಕಾ) ಸುಂದರಿಯರೂ ರೋಮಾಂಚಿತರಾಗಿ ಅವನನ್ನು ಮಂಡಲಾಕಾರವಾಗಿ ಸುತ್ತುವರಿದು ನಿಂತಿರುವುದನ್ನು ದರ್ಶನ ಮಾಡಿದುದಾಗಿಯೂ, ದಿವ್ಯಗೋಪಾಲ ವರ್ಣನೆಯನ್ನು ಮಾಡಿದ್ದಾರೆ :

ಅಗ್ರೇ ಪಶ್ಯಾಮಿ ತೇಜೋನಿಬಿಡತರಕಲಾಯಾವಲೀ
ಲೋಭನೀಯಂ
ಪೀಯೂಷಾ ಪ್ಲಾವಿತೋಽಹಂ ತದನು ತದುದರೇ ದಿವ್ಯ ಕೈ
ಶೋರವೇಷಂ ।
ತಾರುಣ್ಯಾರಂಭರಮ್ಯಂ ಪರಮ ಸುಖರಸಾಸ್ವಾದ
ರೋಮಾಂಚಿತಾಂಗೈಃ
ಆವೀತಂ ನಾರದಾದ್ಯೈಃ ವಿಲಸದುಪನಿಷತ್ಸುಂದರೀ
ಮಂಡಲೈಶ್ಚ ॥
(100-1)

ಇದು (ಗೋ) ಪಾಲಕನಾದ, ಜ್ಞಾನ ಸಂರಕ್ಷಕನಾದ, ವೇದ ವೇದ್ಯನಾದ, ಪರಮಾತ್ಮನ ದಿವ್ಯ ವರ್ಣನೆ. ಇಂತಹ 'ಗೋವುಗಳನ್ನು' ಆಂಗಿರಸರು ತಪಸ್ಸಿನಿಂದ ಲೋಕದಲ್ಲಿ ತಂದುದು ಮಾರ್ಮಿಕಾರ್ಥದಲ್ಲಿ.

ದೇವತೆಗಳಿಗೆ ಈ 'ಗೋವುಗಳು' ತಮ್ಮ ಆತ್ಮಾತ್ಮೀಯ ಸಮರ್ಪಣೆಯನ್ನು ಮಾಡಿಕೊಂಡಿವೆ ಎಂಬುದರಲ್ಲೂ ಅರ್ಥವು ಎದ್ದು ಕಾಣುತ್ತದೆ. ದೇವತೆಗಳೆಂದರೆ. ಲೋಕವನ್ನು ಬೆಳಗುವ ಪಾವನ ಶಕ್ತಿಗಳು. ವೇದಾಂತರ್ಗತ 'ಜ್ಞಾನ ಗೋವುಗಳು' ಈ ದೇವತೆಗಳಿಗಾಗಿಯೇ, ಅವರ ಕ್ಷೇಮಾರ್ಥವಾಗಿಯೇ ತಮ್ಮನ್ನು ಅರ್ಪಿಸಿಕೊಂಡಿರುವುದರಲ್ಲಿ ಲೋಕಹಿತಾರ್ಥವು ಸ್ಪಷ್ಟ. **ಜ್ಞಾನವು ಗೊಡ್ಡಾದ ಗೋವಲ್ಲ! ಅದಕ್ಕೂ ಸಂತತಿಯುಂಟು. ಜ್ಞಾನವಂತನಾದ ಆಚಾರ್ಯನನ್ನು 'ಗೋ'ವಿಗೆ ಹೋಲಿಸಿದರೆ, ಇವನ ಆಶ್ರಯದಿಂದ ತಾವೂ ಜ್ಞಾನವಂತರಾದ ಅನೇಕ ಶಿಷ್ಯರನ್ನು ಇವರ "ವತ್ಸ"** ರನ್ನಾಗಿ, ಕರುಗಳನ್ನಾಗಿ ಭಾವಿಸುವುದು ಯುಕ್ತ. ಹೀಗೆ ಅನೇಕ 'ವತ್ಸ' ಸಮೇತವಾದ 'ಜ್ಞಾನ ಗೋ'ವನ್ನು, ತಮ್ಮ ಕೊಟ್ಟಿಗೆಯಲ್ಲಿ ಕಟ್ಟುವಂತೆ ಇಂದ್ರನಿಗೆ ಮಾಡಿದ ಪ್ರಾರ್ಥನೆಯೂ ನಿರಂತರ ಜ್ಞಾನ ಸಂತತಿಗಾಗಿ ಭಗವಂತನಿಗೆ ಮಾಡಿದ ಪ್ರಾರ್ಥನೆಯೇ ಸರಿ. ಅಷ್ಟೇಕೆ, ಸಮಸ್ತ ದೇವತೆಗಳೂ ಈ 'ಗೋ' ಸಂರಕ್ಷಕರಾದುದರಿಂದ ಮತ್ತು ಸತ್‌ಪಾತ್ರನಿಗೆ ಮಾತ್ರ ಇವು ದೈವಾನುಗ್ರಹದಿಂದ ಲಭಿಸತಕ್ಕವಾದುದರಿಂದ ಆ ಭಗವತ್ಕೃಪೆಗಾಗಿಯೇ ಇಲ್ಲಿ ಮತ್ತೆ ಮತ್ತೆ ಪ್ರಾರ್ಥನೆ. (ಕಾರ್ತವೀರ್ಯನಂತೆಯೋ, ಕೌಶಿಕನಂತೆಯೋ ಬಲಾತ್ಕಾರದಿಂದ ಈ 'ಗೋ'ವನ್ನು ಅಪಹರಿಸುವುದಾಗಲೀ ದಕ್ಕಿಸಿಕೊಳ್ಳುವುದಾಗಲೀ ಶಕ್ಯವಲ್ಲವೆಂದು ಭಾವ. ತಪಸ್ಸಿನಿಂದ ಸಂಪಾದಿತವಾದ ಜ್ಞಾನವು ಆ ತಪಸ್ಸಿಗೇ ಅನನ್ಯಾರ್ಹವಾಗಿದ್ದು ಇನ್ನೊಬ್ಬನಿಗೆ ಎರವಲಾಗಿ ಕೊಡಲು ಬರತಕ್ಕದ್ದಲ್ಲ. ಪುಣ್ಯಶಾಲಿಯ ಕೀರ್ತಿಯು— 'ಕೀರ್ತಿಃ ಆತ್ಮವತೋ ಯಥಾ' ಎಂದು ವಸಿಷ್ಠರು ಕೌಶಿಕನಿಗೆ ಹೇಳುವಂತೆ— ಶ್ರೀ ರಾಮಾಯಣ ಬಾಲಕಾಂಡ, 53-13—ಪಾಪಿಗೆ, ಅವನು ಎಷ್ಟೇ ಬಲಿಷ್ಠನಾಗಿದ್ದರೂ, ದೊರೆಯತಕ್ಕದ್ದಲ್ಲ.) ಹೀಗೆ ಮೇಲಿನ ಋಕ್‌ಸೂಕ್ತವು. ವೈದಿಕ ಮಹರ್ಷಿಗಳ ದಿವ್ಯಜ್ಞಾನ ದಾಹಕ್ಕೆ ಒಂದು ಉಜ್ಜ್ವಲ ನಿದರ್ಶನವಾಗಿದೆ.

## ೬. 'ಗವಾಮಯನ'ದ ಮರ್ಮ

ತೈತ್ತಿರೀಯ ಸಂಹಿತೆಯಲ್ಲಿ ಬರುವ (VII-5) ಗವಾಮಯನದ ಪ್ರಸ್ತಾಪವನ್ನು ಮೇಲೆ ಮಾಡಿದ್ದಾಯಿತು. ಇದರ ಮಾರ್ಮಿಕಾರ್ಥದ ಕೆಲವು ಅಂಶಗಳನ್ನು ಈಗ ಗಮನಿಸಬಹುದು.

ಒಮ್ಮೆ 'ಗೋವುಗಳಿಗೆ' 'ಕೊಂಬುಗಳು' ಇರಲಿಲ್ಲವಂತೆ. ಅದಕ್ಕಾಗಿ ಅವು "ನಮಗೆ ಕೊಂಬುಗಳು ಉಂಟಾಗಬೇಕು" ಎಂಬ ಆಶೆಯಿಂದ (**ಶೃಂಗಾಣಿನೋ ಜಾಯಂತಾ ಇತಿ ಕಾಮೇನ**) ಈ ಸತ್ರವನ್ನು ನಡೆಸಿದುವಂತೆ! ಈ ಯಾಗವು ಹತ್ತು ತಿಂಗಳ ಕಾಲ ನಡೆಯುವಷ್ಟರಲ್ಲಿ ಕೆಲವಕ್ಕೆ ಕೊಂಬುಗಳು ಹುಟ್ಟಿದವಂತೆ; ಅಷ್ಟರಲ್ಲಿ ಈ ಸತ್ರವನ್ನು ಅವರೆಗೆ ನಡೆಸಿದರೂ ಮತ್ತೆ ಕೆಲವಕ್ಕೆ ಕೊಂಬುಗಳು ಬರಲೇ ಇಲ್ಲ. ಇವು ಇನ್ನೂ ಎರಡು ತಿಂಗಳ ಕಾಲ, ಅಂದರೆ ಸಂವತ್ಸರ ಪೂರ್ತಿಯಾಗುವ ತನಕ ಆ ವ್ರತವನ್ನು ನಡೆಸಿ "ನಾವೂ ನಮ್ಮ ಇಷ್ಟಾರ್ಥವನ್ನು ಪಡೆದೆವು" ಎಂದೇ ಹೇಳಿಕೊಂಡವಂತೆ. ಹೀಗೆ ಕೊಂಬುಗಳನ್ನು ಪಡೆದ 'ಗೋವುಗಳು' ಮತ್ತು ಪಡೆಯದ 'ಗೋವುಗಳು' ಎರಡೂ ಯಜ್ಞವನ್ನು ನಿಲ್ಲಿಸಿದವು. ಇದೇ **ಸಂವತ್ಸರವೆಂಬ 'ಗೋಸತ್ರ'.**

ಇದರಲ್ಲಿ "ಏನು ಅರ್ಥವಾಯಿತು ?" ಎಂದು ಕೇಳಿದರೆ, ಕೇವಲ ಚಾರಿತ್ರಿಕ ದೃಷ್ಟಿಯಿಂದ ವೇದವನ್ನು ನೋಡುವ ಮೂಢನು "ಒಂದು ಕಾಲದಲ್ಲಿ ಭಾರತ ದೇಶದಲ್ಲಿ ಗೋವುಗಳಿಗೆ ಕೊಂಬುಗಳು ಇರಲಿಲ್ಲ" ಎಂದಷ್ಟೇ ಗ್ರಹಿಸಬಲ್ಲನು ! ಇದರಲ್ಲಿ ಮಾರ್ಮಿಕಾರ್ಥ ಇಲ್ಲದಿದ್ದರೆ, ವೇದವೇ ಈ ಮುಂದಿನ ಫಲಶ್ರುತಿಯನ್ನು ಏಕೆ ಹೇಳುತ್ತಿದೆ, ಎಂದು ವಿವರಿಸುವುದು ಸಾಧ್ಯವಾಗಲಾರದು : **"ಯಾವ ವಿದ್ವಾಂಸನು ಇದನ್ನು ತಿಳಿದು ಈ ಯಾಗನನ್ನು ಆಚರಿಸುವನೋ ಅವನು ಸಮೃದ್ಧಿಯನ್ನು ಹೊಂದುವನು." "ಯಾರು ಸಂವತ್ಸರ ಕಾಲ ಈ ಯಾಗವನ್ನು ಆಚರಿಸುವರೋ ಅವರು ಸಮುದ್ರವನ್ನು ಈಜಿ ದಡ ಸೇರುವರು."** (ಸಮುದ್ರಂ ವಾ ಏತೇ ಪ್ರಪ್ಲವಂತೇ ಯೇ ಸಂವತ್ಸರಂ ಉಪಯಂತಿ.) **"ಯಾರು ಸಮುದ್ರದ ಆಚೆಯ ದಡವನ್ನು ಕಾಣಲಾರರೋ ಅವರು ಸಮುದ್ರವನ್ನು ಈಜಲಾರರು."** (ಯೋ ವೈ ಸಮುದ್ರಸ್ಯ ಪಾರಂ ನ ಪಶ್ಯತಿ ನ ವೈ ಸ ತತ ಉದೇತಿ ಸಂವತ್ಸರಃ). "ಬ್ರಹ್ಮವಾದಿಗಳು ಸಭಾಸೀನರಾಗಿ ಕೇಳುತ್ತಾರೆ : 'ಮಾನವನು ನಿರ್ಗಮಿಸುವ ದಾರಿ ಯಾವುದು ?' ಎಂದು. ಅದಕ್ಕೆ ಹೀಗೆ ಉತ್ತರ ಹೇಳಬೇಕು. 'ದೇವಯಾನದಿಂದ' ಎಂದು. ಛಂದಸ್ಸುಗಳೇ ದೇವಯಾನ." **ಬ್ರಹ್ಮವಾದಿನೋ ವದಂತಿ ಆಸತೇ ಕೇನ ಯಂತೀತಿ**

**ದೇವಯಾನೇನ ಪಥೇತಿ ಬ್ರೂಯಾತ್ ಛಂದಾಂಸಿ ವೈ ದೇವಯಾನಃ**
"ಮೊದಲು ಹೇಳಿದ ಹತ್ತು ತಿಂಗಳ ಮತ್ತು ನಂತರದ ಹನ್ನೆರಡು ತಿಂಗಳ ಈ ಯಾಗಾರ್ಥವನ್ನು ಯಾರು ತಿಳಿಯುವರೋ ಅವರು ತಮ್ಮ ಕಾಲಮೇಲೆಯೇ ನಡೆದು ಹೋಗುವರು; ಮತ್ತು ಆ ನಡಿಗೆಯಿಂದಲೇ ಬಯಸಿದುದನ್ನು ಪಡೆಯುವರು. ಹೀಗೆ ಈ ಗವಾಮಯನವು ಸಮೃದ್ಧವಾಗಿ ಗೋವುಗಳನ್ನೇ ಪಡೆಯುತ್ತದೆ !! **(ಯ ಏವಂ ವೇದ ಪದೇನ ಖಲು ವಾ ಏತೇ ಯಂತಿ ವಿಂದತಿ ಖಲು ವೈ ಪದೇನ ಯನ್ ತದ್ವಾ ಏತದ್ ಋದ್ಧಂ ಅಯನಂ ತಸ್ಮಾತ್ ಏತತ್ ಗೋಸನಿ.)**

ಈ ಎಲ್ಲ ಫಲ ಶ್ರುತಿಗಳ ಹಿನ್ನೆಲೆಯಲ್ಲಿ ಈ ಪ್ರಸಂಗದಲ್ಲಿ ವಿಶೇಷ ಮಾರ್ಮಿಕಾರ್ಥವಿರುವುದು ಸುಸ್ಪಷ್ಟ. ಯಜ್ಞದ ವಿವರಣೆಯ ರೀತಿಯಲ್ಲಿ ಅರ್ಥ ವಿವರಗಳು ಹೇರಳವಾಗಿ ಸಂಪಾದಿಸಲ್ಪಟ್ಟಿವೆ. ಕೆಲವೊಂದು ಮುಖ್ಯಾಂಶ ಗಳನ್ನು ಮಾತ್ರ ಇಲ್ಲಿ ಎತ್ತಿ ತೋರಿಸಬಹುದು.

(ಉಳಿದವು ಉಪಾಸನಾ ವೇದ್ಯಗಳು.)

ಕೆಲವು 'ಗೋವುಗಳು' ಹತ್ತೇ ತಿಂಗಳು ಕಾಲ ಯಾಗ ಮಾಡಿ 'ಕೊಂಬು ಗಳ'ನ್ನು ಪಡೆದುವೆಂದು ಮೇಲೆ ಹೇಳಿದೆ. ಇಲ್ಲಿ 'ಕೊಂಬು'ಗಳೆಂದರೆ ಆಕಳು ಗಳಿಗೆ ಹೆಮ್ಮೆಯ, ಅಭಿಮಾನದ, ಬಲದ ಸಂಕೇತ; ಜ್ಞಾನವು ತಾನು ಬಲಿಷ್ಠವಾಗಲು ನಡೆಸಿದ, ಯೋಗದ ಕಥೆಯಿದು. ಉಳಿದೆರಡು ತಿಂಗಳೇ ಮಳೆಗಾಲದ ಎರಡು ತಿಂಗಳೆಂದೂ, (ವಾರ್ಷಿಕೌ ಮಾಸೌ), ಹತ್ತು ತಿಂಗಳ ಕಾಲ ಯಾಗ ಮಾಡಿದ 'ಗೋವುಗಳು' ಈ ಎರಡು ತಿಂಗಳಲ್ಲಿ ಸುಖ ಸಮೃದ್ಧಿ ಯಿಂದ ಇರುವುವೆಂದೂ. ಆದರೆ ಇವುಗಳ ಹೊಣೆಗಾರಿಕೆಯು ಈ ಎರಡು ತಿಂಗಳಲ್ಲಿ ಉಳಿದೆಲ್ಲ ತಿಂಗಳುಗಳಿಗಿಂತ ಹೆಚ್ಚಾಗಿರುವುದೆಂದೂ, ಆದರೆ, ಇನ್ನೊಂದು ವರ್ಗದ (ಕೊಂಬಿಲ್ಲದ) ಗೋವುಗಳು ವಿಶೇಷ ಹೊಣೆಗಾರಿಕೆ ಯಿಲ್ಲದೆ ಮತ್ತೊಂದು ವಿಧದ ಸುಖದಿಂದ ಇರುವುವೆಂದೂ ವೇದವೇ ಹೇಳು ತ್ತದೆ. ವೇದಾಧ್ಯಯನ ಸಂಪನ್ನರಾದ, ವೇದ ಮರ್ಮಜ್ಞರಾದ ಬ್ರಹ್ಮ ನಿಷ್ಠರೂ, ಘನೀಭೂತ ಜ್ಞಾನಕ್ಕೆ ಸಂಕೇತರಾಗಿ, ಜ್ಞಾನದ ಮೂರ್ತಸ್ವರೂಪ ವೆನಿಸುವರು. **ಈ ಅರ್ಥದಲ್ಲಿ ಇವರೂ 'ಗೋ'ವುಗಳೇ.** ವರ್ಷಾ ಕಾಲದ ಎರಡು ತಿಂಗಳೆಂದರೆ, 'ಸೂರ್ಯ ರಶ್ಮಿ'ಯೇ ಕಾಣದ 'ದುರ್ದಿನ'ವೆನಿಸಿದ

ಮಾನವ ಜೀವನದ ದುಷ್ಕಾಲ. ಇವು ಹತ್ತು ತಿಂಗಳ ನಂತರ ಬರುವುವಾದುದರಿಂದ ಬ್ರಹ್ಮನಿಷ್ಠನು ಯೌವನ ಚೆನ್ನಾಗಿದ್ದಾಗ ಆರಂಭಿಸಿದ ವೇದಾಧ್ಯಯನ, ವೇದಾರ್ಥ ಚಿಂತನ, ವೇದೋಕ್ತ ಕರ್ಮಾನುಷ್ಠಾನಗಳು, ಅವನ ಇಂದ್ರಿಯಗಳು ಭದ್ರವಾಗಿರುವ ತನಕ ನಡೆಸಲ್ಪಟ್ಟನಂತರ ಬರುವ ಇಂದ್ರಿಯ ಶೈಥಿಲ್ಯಾವಸ್ಥೆಯು, ಬುದ್ಧಿಭ್ರಮಣೆಗೆ ಎಡೆಕೊಡುವ ಒಂದು ದುಷ್ಕಾಲ. ಆ ವೇಳೆಗೆ ಈ 'ಗೋ'ವಿಗೆ 'ಕೊಂಬು' ಬಂದಿರುತ್ತದೆ ಎಂದರೆ, ಅಭಿಮಾನ ಪಡಬಹುದಾದ ರೀತಿಯಲ್ಲಿ ಬ್ರಹ್ಮಜ್ಞಾನ ಸಿದ್ಧಿ ಆಗಿರುತ್ತದೆಂದು ಭಾವ. ಇಂತಹ ಸಿದ್ಧಪುರುಷನು ಈ ದುಷ್ಕಾಲದಲ್ಲಿ ಎಚ್ಚರ ತಪ್ಪಿ ಇರುವಂತಿಲ್ಲ! "ಕೊಂಬು ಚೆನ್ನಾಗಿ ಬೆಳೆದ ಆಕಳಿಗೆ, ಭಾರವಾದ ತಲೆಯನ್ನು ಕೆಳಗಿಟ್ಟು ಮಲಗಿ ನಿದ್ರಿಸುವದು ಕಷ್ಟ" ಎಂದು ವ್ಯಾಖ್ಯಾತೃಗಳು ಹೇಳುತ್ತಾರೆ. ಆದರೆ ಈ ಹೊಣೆಗಾರಿಕೆಯಿಂದ ಕೆಲವೊಂದು ನಿರ್ಬಂಧಗಳು ಏರ್ಪಟ್ಟರೂ ಬ್ರಹ್ಮಜ್ಞಾನಿಗೆ ಬರುವ ಸುಖದ ರೀತಿಯೇ ಬೇರೆ.

'ಕೊಂಬು' ಬಾರದ ಆಕಳುಗಳೂ, ಹನ್ನೆರಡು ತಿಂಗಳ ಕಾಲ ಯಾಗವನ್ನು ನಡೆಸಿರುವುವಾದುದರಿಂದ ಇವುಗಳಿಗೂ ಸುಖವುಂಟು. ಹಲವು ವೇದಾಧ್ಯಯನ ಸಂಪನ್ನರು, ಯಾವತ್ಕಾಲವೂ ವೇದವನ್ನೇ ಅವಲಂಬಿಸಿದ್ದರೂ ಇವರಿಗೆ ಬ್ರಹ್ಮಜ್ಞಾನ 'ಸಿದ್ಧಿ' ಯಾಗದೆ. 'ಕೊಂಬಿ'ಲ್ಲದ 'ಗೋ'ವುಗಳಂತೆ ಇರುತ್ತಾರೆ, ಚತುರ್ವಿಧ ಪುರುಷಾರ್ಥಗಳಲ್ಲಿ ಇವರಿಗೆ ತ್ರಿವರ್ಗವೆನಿಸುವ ಕಾಮಾರ್ಥಧರ್ಮಗಳೇ ಪ್ರಾಪ್ತವಾಗಿ, ಐಹಿಕ ಜೀವನದ ಸುಖ ಸಂವರ್ಧನೆಗೂ ಶಾಂತವಾದ ಧಾರ್ಮಿಕ ಜೀವನಕ್ಕೂ ಕಾರಣವಾಗುವುದು. ಈ ಸುಖದ ರೀತಿಯೇ ಬೇರೆ. ಇದನ್ನು ಬಹು ಮಾರ್ಮಿಕವಾಗಿ ವೇದವು ಕೊಂಬುಳ್ಳ ಮತ್ತು ಕೊಂಬಿಲ್ಲದ "ಗೋ"ವುಗಳ ಸುಖ ಪ್ರಕಾರಗಳಿಗೆ ಹೋಲಿಸಿದೆ. ಇಡೀ ಜೀವನವೇ ಈ ಸತ್ರ. ಸಂವತ್ಸರವೆಂದರೆ ಆಯುಷ್ಯವೇ. ಅಥವಾ ಇದೇ ಸಮುದ್ರ. ಅದರ ಎರಡು ದಡಗಳೇ ಎರಡು ಅತಿರಾತ್ರಗಳು. (ಕತ್ತಲೆ ಎಂಬ ಅಂಧಕಾರಮಯ ಜೀವನದ ಈಚೆ–ಆಚಿನ ದಡಗಳು. ಇಹ–ಪರಗಳೇ ಈ ಎರಡು 'ಅತಿರಾತ್ರಗಳೆಂದು' ವೇದವೇ ಹೇಳುತ್ತಿದೆ. (ಇಯಂ ವೈ ಪೂರ್ವೋ ಅತಿರಾತ್ರಃ ಅಸೌ ಉತ್ತರೋ.) ಅಥವಾ ಮನಸ್ಸು, ವಾಕ್ಕುಗಳೇ, ಪ್ರಾಣ-ಅಪಾನಗಳೇ, ಈಚಿನ

ಆಚಿನ ದಡಗಳು. ಇದನ್ನು ತಿಳಿದವನು ಸರ್ವದಾ ಜ್ಯೋತಿರ್ಮಯವಾದ ಪರಮ ಪದದ ದರ್ಶನವನ್ನು ಹೊಂದುವನು ಎಂದು ಹೇಳಿದೆ. (ಜ್ಯೋತಿ ಕೇವ ಪುರಸ್ತಾತ್ ದಧತೇ ಸುವರ್ಗಸ್ಯ ಲೋಕಸ್ಯ ಅನುಖ್ಯಾತ್ಯೈ.)

ಹೀಗೆ ವೇದಪ್ರಶಂಸಾರೂಪವಾಗಿಯೂ, ಬ್ರಹ್ಮಜ್ಞಾನಿಗಳ ಕೊಂಡಾಟ ರೂಪವಾಗಿಯೂ, ಜೀವನದ ಸ್ವರೂಪವನ್ನೂ, ಇಹ–ಪರಗಳ ಗತಿಯನ್ನೂ, 'ಇಲ್ಲಿಂದ' 'ಅಲ್ಲಿ'ಗೆ ಹೋಗುವ ಬ್ರಹ್ಮಜ್ಞಾನಿಗೆ ಜ್ಞಾನದ ಅವಶ್ಯಕತೆಯನ್ನೂ ಈ ಪ್ರಸಂಗವು ಬಹುಮಾರ್ಮಿಕ ಭಾಷೆಯಲ್ಲಿ ಮಾಡಿಕೊಟ್ಟಿರುವುದು ಸುಸ್ಪಷ್ಟ.

## ೭. 'ಗೋ'ವುಗಳು, 'ಪಣಿ'ಗಳು, ಆಂಗಿರಸರು

ಇದಲ್ಲದೆ 'ಗೋವುಗಳಿಗೆ' ಸಂಬಂಧಪಟ್ಟ ಇನ್ನೊಂದು ಕಥೆಯೂ ಋಗ್ವೇದದಲ್ಲಿ ಇದ್ದು (X–108). ಬಹು ಮಾರ್ಮಿಕವಾಗಿ ಅರ್ಥವನ್ನು ಹೊಂದಿದೆ. 'ಪಣಿ'ಗಳೆಂಬ ದೈತ್ಯರು 'ಗೋವು'ಗಳನ್ನು ಅಪಹರಿಸಿ ಗುಹೆಯಲ್ಲಿ ಬಚ್ಚಿಟ್ಟರು. ಆಗ ಇಂದ್ರನು ಈ 'ಗೋವು'ಗಳನ್ನು ಹುಡುಕಲು ಸರಮೆಯೆಂಬ ದೇವ 'ಶುನಿ'ಯನ್ನು (ನಾಯಿಯನ್ನು) ಕಳುಹಿಸಿದನು. ಅದು ಅವುಗಳನ್ನು ಪತ್ತೆ ಹಚ್ಚಿ ಇಂದ್ರನಿಗೆ ತಿಳಿಸಿ 'ಗೋವುಗಳ' ಬಿಡುಗಡೆಗೆ ಸಹಾಯ ಮಾಡಿತು. ಈ ಪ್ರಸಂಗದಲ್ಲಿ ಪಣಿಗಳಿಗೂ, ಸರಮೆಗೂ ನಡೆದ ಸಂವಾದವೇ ಪ್ರಕೃತ ಸೂಕ್ತದ ಪ್ರಧಾನ ವಿಷಯವಾದುದರಿಂದ ಈ ಭಾಷೆಯ ಮಾರ್ಮಿಕಾರ್ಥವನ್ನು ಗ್ರಹಿಸಬೇಕು. ಈಗ ಈ ಸಂವಾದವನ್ನು ಹೀಗೆ ಸಂಗ್ರಹಿಸಬಹುದು.

ಸರಮೆಯು ಪಣಿಗಳನ್ನೂ, ಅವರು ಗೋವುಗಳನ್ನೂ ಬಚ್ಚಿಟ್ಟ ಪ್ರದೇಶವನ್ನೂ ಕಂಡುಹಿಡಿದ ಮೇಲೆ, ಅವರು ಸರಮೆಯನ್ನು ವಿವಿಧ ಪ್ರಲೋಭನೆಗೆ ಗುರಿಪಡಿಸಿದ ಪ್ರಸಂಗ ಇದು :

**ಪಣಿಗಳು :** ಹೇ ಸರಮೆ ! ಏನನ್ನು ಬಯಸಿ ಇಲ್ಲಿಗೆ ಬಂದಿರುವೆ ? ಈ ದಾರಿಯಾದರೂ ಬಲು ಉದ್ದ. ಒಂದೇಸಮನಾಗಿ ನಡೆಯುವವರಿಗೂ ಬಲು ಕಷ್ಟವಾದದ್ದು. ಅಲ್ಲದೆ, ದಾರಿಯಲ್ಲಿ ಅಡ್ಡಲಾಗಿರುವ 'ರಸಾ'

ಎಂಬ ನದಿಯ ಪ್ರವಾಹವನ್ನೂ ನೀನು ದಾಟಿದುದಾದರೂ ಹೇಗೆ? ಇಷ್ಟೆಲ್ಲ ಶ್ರಮವಹಿಸಿ, ಸಾಮರ್ಥ್ಯದಿಂದ, ಇಲ್ಲಿಗೆ ಬಂದಿರುವ ನಿನ್ನ ಮಹೋದ್ದೇಶವು ಏನಿರಬಹುದು!

ಸರಮೆ : "ಅಯ್ಯಾ ಪಣಿಗಳೇ! ನಾನು ಇಂದ್ರನ ದೂತಿ, ನಿಮ್ಮಲ್ಲಿ ಬಚ್ಚಿಡಲ್ಪಟ್ಟ 'ಗೋವು'ಗಳೆಂಬ 'ಮಹಾನಿಧಿ'ಗಳನ್ನು ಹುಡುಕುತ್ತ ಸಂಚರಿಸುತ್ತಿದ್ದೇನೆ. ನದಿಯ ಜಲವು ತಾನಾಗಿಯೇ ದಾರಿ ಕೊಡದಿದ್ದರೆ ನಾನೇ ಅತಿಕ್ರಮಿಸಬಹುದೆಂಬ ಭಯದಿಂದ ನನಗೆ ದಾರಿ ಕೊಟ್ಟಿತು. ನಾನು ರಸಾ ನದಿಯನ್ನು ದಾಟಿದುದೇ ಹೀಗೆ."

ಪಣಿಗಳು : "ದೂತಿಯಾದ ನಿನಗೇ ಇಂತಹ ಶಕ್ತಿ ಸಾಮರ್ಥ್ಯ ಇರುವುದಾದರೆ, ನಿನ್ನ ಒಡೆಯನಾದ ಇಂದ್ರನು ಎಂಥವನಿರಬೇಕು? ಎಂಥ ರೂಪಸಂಪನ್ನನಾಗಿರಬೇಕು?" (ಸ್ವಗತ) "ಈಗ ಇವಳನ್ನು ಆದರಿಸಿ ಹೇಗಾದರೂ ನಮ್ಮ ಸ್ನೇಹಿತಳನ್ನಾಗಿ ಮಾಡೋಣ. ನಮ್ಮ 'ಗೋವು'ಗಳಿಗೆ ಇವಳೇ ಒಡತಿಯಾಗಲಿ".

ಸರಮೆ : "ಎಲೈ ಪಣಿಗಳೇ! ಇಂದ್ರನು ನಿಮ್ಮಿಂದ ಹತನಾಗತಕ್ಕವನಲ್ಲ. ಅವನು ಎಲ್ಲರನ್ನೂ (ನಿಮ್ಮನ್ನೂ) ನಾಶ ಮಾಡತಕ್ಕವನು. ನಾನು ಇಲ್ಲಿಗೆ ಬಂದು ಮುಟ್ಟಿರುವುದೇ ಇಂದ್ರನ ಶಕ್ತಿಗೆ ನಿದರ್ಶನ. ಯಾವ ಅಡ್ಡ ನದಿಗಳು. ಎಷ್ಟೇ ಆಳವಾದರೂ, ಇಂದ್ರನನ್ನು ಹೊರಗಿಡಲಾರವು. ನಿಮ್ಮ ಮರಣಕಾಲ ಸಮೀಪವಾಯಿತು".

ಕೋಪಗೊಂಡ ಪಣಿಗಳು : "ಹೇ ಸರಮೇ! ನೀನು ನಿಜವಾಗಿಯೂ ಸೌಭಾಗ್ಯವತಿ. ಇದು ದ್ಯುಲೋಕದ ಕೊನೆಯ ಭಾಗ. ಇಂತಹ ದುರ್ಗಮ ಪ್ರದೇಶಕ್ಕೆ ನೀನು ಬಂದ ಮಾತ್ರದಿಂದ ಏನಾಯ್ತು? ಯುದ್ಧವೇ ಇಲ್ಲದೆ ಈ ಗೋವುಗಳನ್ನು ಬಿಟ್ಟುಕೊಡುವಷ್ಟು ಮೂರ್ಖರಲ್ಲ ನಾವು. ನಮಗೂ ಹರಿತವಾದ ಆಯುಧಗಳಿವೆ".

ಸರಮೆ : "ಯೋಧರಿಗೆ ಉಚಿತವಾದ ಮಾತಲ್ಲ ಇದು. ನಿಮ್ಮ ಶರೀರಗಳ ಬಾಣಗಳಿಗೆ ಅಭೇದ್ಯವಲ್ಲ. ಏಕೆಂದರೆ ಅವು ಪಾಪಪೂರ್ಣವಾಗಿವೆ

ನಿಮ್ಮ ದಾರಿಯೇ ಸರಿಯಲ್ಲ. ಬೃಹಸ್ಪತಿಯು ನಿಮ್ಮ ಮಾತನ್ನೂ ದೇಹವನ್ನೂ ಸುಖಪಡಿಸಲಾರನು."

ಪಣಿಗಳು : "ಗೋವುಗಳು ಗುಪ್ತವಾಗಿಡಲ್ಪಟ್ಟಿರುವ ಈ ಪರ್ವತಪ್ರದೇಶವು ಸಕಲ ವಿಧವಾದ ರಕ್ಷಣೆಗಳನ್ನೂ ಹೊಂದಿದೆ. ಇಲ್ಲಿ ಕುದುರೆಗಳೂ, ಸಂಪತ್ತೂ ಹೇರಳವಾಗಿವೆ. ನಮ್ಮ ಸೈನಿಕರು ಎಚ್ಚರವಾಗಿದ್ದಾರೆ. ನೀನು ಇಲ್ಲಿಗೆ ಬಂದುದೇ ವ್ಯರ್ಥ."

ಸರಮೆ : "ಆದರೇನು? ಅಂಗಿರಸರೆಂಬ ಋಷಿಗಳು, ಸೋಮಪಾನ ಮಾಡಿ ಶಕ್ತರಾಗಿ ಅಯಾಸ್ಯನೊಡನೆ ಇಲ್ಲಿ ಬರುವುದು ಖಂಡಿತ ! ಈ ಗೋವು ಗಳನ್ನು ಅವರೇ ಹಂಚಿಕೊಂಡು ಬಿಡುತ್ತಾರೆ. ಆಗ, ನೀವು ಈಗ ನನಗೆ ಹೇಳುತ್ತಿರುವ ಮಾತುಗಳು ವ್ಯರ್ಥವಾಗಿ ಹೋದುವೆಂದು ತಿಳಿಯುವಿರಿ."

ಪಣಿಗಳು : (ಈಗ ಬೆದರಿಕೆಯ ಭಾಷೆಯನ್ನು ಬಿಟ್ಟು, ಸಾಮೋಪಾಯ ದಿಂದ ಮತ್ತು ದಾನೋಪಾಯದಿಂದ ಅವಳನ್ನು ವಶಮಾಡಿಕೊಳ್ಳಲು ಬಯಸಿ ಹೀಗೆನ್ನುತ್ತಾರೆ.) "ಹೇ ಸರಮೇ ! ನಿನಗೆ ದೇವತೆಗಳ ಬಾಧೆಯೋ, ನಿರ್ಬಂಧವೋ ಮತ್ತು ಅವರಿಂದ ಕೊಡಲ್ಪಟ್ಟಶಕ್ತಿಯೋ. ಇಲ್ಲದಿದ್ದರೆ, ನೀನಾಗಿಯೇ ಇಲ್ಲಿ ಬರುತ್ತಿರಲಿಲ್ಲ ಎಂದು ಭಾವಿಸು ತ್ತೇವೆ. ಎಷ್ಟಾದರೂ, ನಿನ್ನನ್ನೂ ನಮ್ಮ ಸಹೋದರಿಯೆಂದೇ ಮಾಡಿ ಕೊಂಡು ಬಿಡುತ್ತೇವೆ. ನೀನು ಇಲ್ಲಿಂದ ಬರಿಗೈಯಲ್ಲಿ ಹಿಂದಿರುಗಿದರೆ ತಾನೇ ನಿನಗೆ ಭಯ ? ಇಲ್ಲಿಯೇ ಇದ್ದು ಬಿಡು ! ಸೌಭಾಗ್ಯವತಿ ಯಾದ ನೀನು ನಮ್ಮೊಡನೆ ಗೋವುಗಳನ್ನು ಹಂಚಿಕೊಂಡು ಸುಖ ವಾಗಿ ಇದ್ದು ಬಿಡು."

ಸರಮೆ : (ಈ ಪ್ರಲೋಭನೆಗೆ ಒಪ್ಪದೆ) "ನಿಮಗೂ ನನಗೂ ಇರುವು ದೆಂದು ನೀವು ಹೇಳುವ ಈ ಸಹೋದರ ಸಹೋದರಿ ಸಂಬಂಧ ಯಾವುದೋ ನನಗೆ ತಿಳಿಯದು! ಇದು ಇಂದ್ರನಿಗೂ, ಶತ್ರುಭಯಂಕರ ರಾದ ಅಂಗಿರಸರಿಗೂ ಗೊತ್ತಿದೆ. ನಾನು ಇಲ್ಲಿಗೆ ಬಂದಾಗಲೇ ನನ್ನ ಹಿಂದೆಯೇ 'ಗೋಕಾಮರಾದ' ದೇವತೆಗಳು ಬಂದು ಈ ಪ್ರದೇಶ ವನ್ನು ಸುತ್ತುವರಿದು ನಿಂತಿರುವರೆಂದು ತಿಳಿಯಿರಿ. ಬೇರೆಲ್ಲಾ

ದರೂ ಓಡಿಹೋಗಿರಿ. ಬೃಹಸ್ಪತಿಯೂ, ಸೋಮನೂ, ಆಂಗಿ ರಸರೂ ಮತ್ತು ಸೋಮವನ್ನು ಹಿಂಡುವ ಒರಳುಕಲ್ಲೂ ಈ ಗೋವುಗಳನ್ನು ಹೊಂದಲಿ."

(ಮುಂದಿನ ಕಥೆಯನ್ನು ಈ ಸೂಕ್ತದಲ್ಲಿ ಹೇಳಿಲ್ಲ. ಶೌನಕರ ಬೃಹದ್ದೇ-ವತೆಯಲ್ಲಿ ೮ನೇ ಅಧ್ಯಾಯದಲ್ಲಿ ಇದೇ ಕಥೆಯನ್ನು ವೇದದ ಇತರ ಭಾಗ ಗಳಿಂದ ಗ್ರಹಿಸಿ, ಹೀಗೆ ಮುಂದುವರೆಸಲಾಗಿದೆ. ಸಾಯಣ ಭಾಷ್ಯದಲ್ಲಿಯೂ ಸರಮೆಯು ಈ ವಿಷಯವನ್ನು ಇಂದ್ರನಿಗೆ ತಿಳಿಸಿತೆಂದೂ, ಇಂದ್ರನು ಅವರನ್ನು ಕೊಂದು ಗೋವುಗಳನ್ನು ಬಿಡಿಸಿದನೆಂದೂ ಈ ಸೂಕ್ತದಲ್ಲಿ ಪ್ರತಿ ಪಾದಿತವಾಗಿದೆಯೆಂದು ಮಾತ್ರ ಬರೆದಿದ್ದಾರೆ.)

## ೮. ಬೃಹದ್ದೇವತೆಯಲ್ಲಿ ಮುಂದಿನ ವಿವರಣೆ

"ಪಣಿಗಳೊಡನೆ ತನಗೆ ಯಾವ ಸಂಬಂಧವೂ ಗೊತ್ತಿಲ್ಲ"ವೆಂದು ಹೇಳಿದ ಸರಮೆಯು ಅವರಿಂದ ಹಣವನ್ನಾಗಲಿ, ಮತ್ತೇನನ್ನಾಗಲಿ ಬಯಸದೆ, ಆ ಬಚ್ಚಿಟ್ಟ 'ಗೋವು'ಗಳ ಒಂದಿಷ್ಟು 'ಹಾಲನ್ನು' ಮಾತ್ರ ಪಾನ ಮಾಡಲು ಬಯಸಿತಂತೆ.

ಸಾಬ್ರವಿನ್ನಾಹಮಿಚ್ಛಾಮಿ ಸ್ವಸೃತ್ವಂ ವಾ ಧನಾನಿ ವಾ ।
ಪಿಬೇಯಂ ತು ಪಯಸ್ತಾಸಾಂ ಗವಾಂ ಯಾಸ್ತಾ ನಿಗೂಹಥ ॥
(VIII–30)

ಹೀಗೆ ಪ್ರಲೋಭನೆಗೆ ಒಳಪಟ್ಟ ಸರಮೆಗೆ ಅವರು ಹಾಲನ್ನು ಕೊಡಲು, ಸರಮೆಯು ಅದನ್ನು 'ತನ್ನ ಸ್ವಭಾವಕ್ಕೂ ಚಪಲದಾಸೆಗೂ ಅನುಸಾರವಾಗಿ' (ಸಾ ಸ್ವಾಭಾವಾಚ್ಚ ಲೌಲ್ಯಾಚ್ಚ) ಕುಡಿದು, ಪ್ರಶಂಸಿಸಿ,' ಮತ್ತೆ ಶತಯೋಜನ ವಿಸ್ತೃತವಾದ ರಸಾನದಿಯನ್ನು ದಾಟಿ, ಹಿಂದಿರುಗಿ, ಇಂದ್ರನಿಗೆ ಸುಳ್ಳು ವರದಿಯನ್ನು ಮಾಡಿತಂತೆ. ಸರಮೆಯ ಸ್ವಭಾವ ಇಲ್ಲಿ ಬದಲಾಗಲು ಏನು ಕಾರಣ ? ಎಂದು ಕೇಳಿದರೆ "ಪ್ರಭಾವಾತ್ ಆಸುರಸ್ಯ ತು" ಎಂಬು ದಾಗಿ ('ಅಸುರ ಪ್ರಭಾವವೇ ಕಾರಣ') ಶೌನಕರು ವಿವರಿಸಿದ್ದಾರೆ. ಅಸುರ

ಸ್ಪೃಷ್ಟವಾದ ಮಾತ್ರದಿಂದ ದೈವೀ ಪದಾರ್ಥವಾದ 'ಹಾಲಿಗೂ' ಅಸುರ ಪ್ರಭಾವವೇ ಇರುವುದಕ್ಕೆ ಇದು ನಿದರ್ಶನ ಎಂದು ಭಾವ.

ಆಗ ಈ ಪ್ರಭಾವವನ್ನು ಕುಗ್ಗಿಸಿ ಸರಮೆಯ ಬಾಯಿಂದ ನಿಜವನ್ನು ಹೊರಡಿಸಲು ಇಂದ್ರನು ಅದನ್ನು ಕಾಲಿನಿಂದ ಒದೆಯಲು ಸರಮೆಯು ಆ ಅಸುರದತ್ತವಾದ ಹಾಲನ್ನು ವಾಂತಿ ಮಾಡಿತಂತೆ: "ತಾಂ ಜಘಾನ ಪದಾ ಕ್ರುದ್ಧಃ ಉದ್ಗಿರಂತೀ ಪಯಸ್ತತಃ |" ನಂತರ ಹೆದರಿ. ಪಣಿಗಳನ್ನೇ ಮತ್ತೆ ಹುಡುಕುತ್ತ. ದೇವ ಭಯದಿಂದ ಉದ್ವೇಗಗೊಂಡು ಅವರ ಗುಪ್ತ ಸ್ಥಾನಕ್ಕೇ ಅದು ನಡೆಯಿತಂತೆ. ಇದರ ಹೆಜ್ಜೆಯನ್ನು ಅನುಸರಿಸಿ. ಹರಿ ವಾಹನವಾದ ಇಂದ್ರನು ಹೋಗಿ ಪಣಿಗಳನ್ನು ಕೊಂದು 'ಗೋವುಗಳ'ನ್ನು ಹಿಂದಿರುಗಿಸಿ ತಂದನು. ಇದು ಕಥೆಯ ಒಟ್ಟು ಚೌಕಟ್ಟು.

## ೯. ಪಾಶ್ಚಾತ್ಯರ ಗ್ರಹಿಕೆ

ಇದು ವೇದದಲ್ಲಿ ಬರುವ 'ಗೋ'ಗ್ರಹಣದ ಕಥೆ. ಇಲ್ಲಿ ಬಂದಿರುವ ವಿವರಣೆಗಳೊಂದೊಂದನ್ನೂ ಗಮನಿಸದೆ ಪಾಶ್ಚಾತ್ಯರು ಮತ್ತು ಅವರನ್ನನುಸರಿಸಿದ ಭಾರತೀಯ "ಸಂಶೋಧಕರೂ" ಇಲ್ಲಿ ಗ್ರಹಿಸುವುದು ಇಷ್ಟೆ. ಪಣಿಗಳೆಂದರೆ. ಈ ದೇಶದಲ್ಲಿ ಎಂದಿನಿಂದಲೂ ವಾಸವಾಗಿದ್ದ 'ದ್ರಾವಿಡ'ರೋ, "ದಸ್ಯು"ಗಳೋ ಅಂತೆ! "ಹೊರಗಿನಿಂದ ಬಂದ ಆರ್ಯರು" ಗೋ ಸಂಪತ್ತನ್ನೇ ಪ್ರಧಾನವಾಗಿ ಹೊಂದಿದ್ದರೆಂದೂ, ಇವರಿಗೂ "ದ್ರಾವಿಡ"ರಿಗೂ ಆಗಾಗ ನಡೆಯುತ್ತಿದ್ದ ಘರ್ಷಣೆಗಳಲ್ಲಿ "ದ್ರಾವಿಡ"ರು ಅವರ ಗೋವುಗಳನ್ನು ಅಪಹರಿಸಿ ಮುಚ್ಚಿಡುತ್ತಿದ್ದರೆಂದೂ, ಅಂತಹದೊಂದು ಪ್ರಸಂಗವೇ ಇಲ್ಲಿಯೂ ಚರಿತ್ರಾರ್ಹ ದಾಖಲೆಯಾಗಿ, ಬರೆದು ಇಡಲ್ಪಟ್ಟಿದೆಯೆಂದೂ ಇವರ ವಿವರಣೆ.

ಇದು ಸರಿಯಾಗಿದ್ದ ಪಕ್ಷದಲ್ಲಿ ಇಲ್ಲಿ ಬಂದಿರುವ ನಾಯಿಯ (ಸರಮೆಯ) ಪಾತ್ರಕ್ಕೆ ಏನರ್ಥ ? ಸರಮೆಯು ಚಾರಿತ್ರಿಕವಾದ ಒಂದಾನೊಂದು ನಾಯಿಯೇ? ನಾಯಿಗಳಿಗೆ, "ವೇದಕಾಲದಲ್ಲಿ" ಮನುಷ್ಯರಂತೆ ಮಾತನಾಡಲು ಬರುತ್ತಿತ್ತೆಂದು ಇಲ್ಲಿ ಸೂಚಿತವಾಗಿದೆಯೇ ? ಮತ್ತು ಈ ಸಂವಾದದ

ಒಳಗಿನ ವಿವರಣೆಗಳಿಗೆಲ್ಲ ಏನು ಚಾರಿತ್ರಿಕ ಅರ್ಥವಿದೆ? 'ರಸಾ' ನದಿಯ ಆಚೆಗಿನ ಪ್ರದೇಶವೆಂದರೆ ಇದು ಭೌಗೋಲಿಕ ಪ್ರದೇಶವೇ? ಇಂದ್ರನು 'ಗೋವು'ಗಳನ್ನು ಬಿಡಿಸಿ ತಂದುದು ಚಾರಿತ್ರಿಕವಾಗಿ ಸತ್ಯವಾದರೆ, ಇಂದ್ರನೂ ಚಾರಿತ್ರಿಕ ವ್ಯಕ್ತಿಯೇ? 'ಇಂದ್ರನ' ಹೆಸರಿನಲ್ಲಿ 'ಆರ್ಯರು' ಜಯ ಹೊಂದಿದರೆಂದು ಭಾವಿಸಬಹುದಾದರೆ 'ಪಣಿಗಳ' ಹೆಸರಿನ ಹಿಂದೆಯೂ ಬೇರೆಯವರು ಇರಬಹುದಾದ ಸಾಧ್ಯತೆಯಿಲ್ಲವೇ? ಆಂಗಿರಸರು "ನಾಯಿ"ಗಳನ್ನು ಸಾಕುತ್ತಿದ್ದ ಒಂದು ಪಂಗಡದ ಜನರೇ? ಇವರು ಬ್ರಾಹ್ಮಣರಾಗಿದ್ದರೆ 'ನಾಯಿ' ಗಳನ್ನೇಕೆ ಬೆಳೆಸುತ್ತಿದ್ದರು? ಬ್ರಾಹ್ಮಣರಲ್ಲದಿದ್ದರೆ 'ಗೋ' ಸಂಬಂಧದ ಈ ಸೂಕ್ತದಲ್ಲಿ ಇವರ ಕೆಲಸ, ಪಾತ್ರಗಳೇನು? "ಆಂಗಿರಸ" ಶಬ್ದಕ್ಕೇನರ್ಥ? ಈ ಪ್ರಸಂಗದಲ್ಲಿ, ಇನ್ನೂ ಉತ್ಕೃಷ್ಟವಾದ ಕುದುರೆಯಂತಹ ಪ್ರಾಣಿಯನ್ನು ಬಿಟ್ಟು "ನಾಯಿ"ಯನ್ನೇ ಏಕೆ ಇಲ್ಲಿ ತರಲಾಗಿದೆ? "ಆರ್ಯ"ರು ಎಂದಿನಿಂದಲೂ "ನಾಯಿ" ಸಾಕುವ ಕಸಬಿನಲ್ಲಿದ್ದವರೇ? "ದ್ರಾವಿಡ"ರಲ್ಲಿ ನಾಯಿಗಳಿರಲಿಲ್ಲವೇ? "ಪಣಿ"ಗಳು ತಮ್ಮ ನಾಯಿಗಳನ್ನು ಸರಮೆಯ ಮೇಲೆ "ಛೂ" ಬಿಟ್ಟು, ನಾಯಿಗಳ ಜಗಳವನ್ನು ನೋಡುವುದನ್ನು ಬಿಟ್ಟು ತಾವೇ ಏಕೆ ಸರಮೆಯೊಡನೆ ಸಂಭಾಷಣೆಗೆ ಇಳಿದರು? "ನಾಯಿ"ಯ ಹೆಸರಿನಲ್ಲಿ ಪರಮ ವೈದಿಕ ಋಷಿಗಳು ಏತಕ್ಕಾಗಿ ಶುನ, ಶುನಕ, ಶೌನಕ, ಶುನಶ್ಶೇಫ ಇತ್ಯಾದಿ ಹೆಸರುಗಳನ್ನು ಇಟ್ಟುಕೊಳ್ಳುತ್ತಿದ್ದರು?— ಎಂಬ ಅನೇಕ ಪ್ರಶ್ನೆಗಳು ಇಲ್ಲಿ ಏಳುತ್ತವೆ.

## ೧೧. ಕೆಲವು ವಿವರಣೆಗಳು

ಪಣಿಗಳು ಮುಖ್ಯವಾಗಿ ಇಂದ್ರನಿಗೂ, ಸೋಮ, ಅಗ್ನಿ, ಬೃಹಸ್ಪತಿ, ಆಂಗಿರಸರಿಗೂ ಶತ್ರುಗಳೆಂದೂ, ಇವರ ವಾಸಸ್ಥಾನ 'ವಾಯು' ಮಂಡಲವೆಂದೂ ವೇದವು ಸ್ಪಷ್ಟವಾಗಿ ಹೇಳುತ್ತದೆ. ವೇದದಲ್ಲಿ ಬಂದ ಒಂದು ಮಾತು ಸತ್ಯವಾಗಿ, ಪಣಿಗಳೆಂಬವರು ಇದ್ದದ್ದೇ ಆದರೆ ಅವರ ವಾಸಸ್ಥಾನದ ಬಗೆಗೂ ಅದೇ ವೇದವು ಕೊಡುವ ವಿವರಣೆ ಏತಕ್ಕೆ ಸತ್ಯವಲ್ಲ? ಮತ್ತು ಪಣಿಗಳ ಸ್ವರೂಪ ವಿವರಣೆಯನ್ನು ಕೊಡುವ ವೇದ ಪ್ರಸಂಗಗಳು ಏತಕ್ಕೆ ಪ್ರಮಾಣವಲ್ಲ? 'ಪಣಿ' ಶಬ್ದವು 'ಜಿಪುಣ', 'ಕೃಪಣ' ಎಂಬ

ಅರ್ಥದಲ್ಲಿಯೇ ಬಳಸಲ್ಪಟ್ಟಿದೆ. ಇವರು ಇಂದ್ರಶತ್ರುವಾದ 'ವಲ' (ಬಲ) ನ ಅನುಯಾಯಿಗಳೆಂದೂ ಹೇಳಲ್ಪಟ್ಟಿದೆ. 'ಗೋ'ವುಗಳೆಂದರೆ ವೇದದಲ್ಲಿ ಏನು ಸೂಚಿತವಾಗಿದೆಯೆಂಬುದನ್ನು ಹಿಂದೆ ವಿವರಿಸಿದಂತೆ ಗ್ರಹಿಸಿದರೆ, ಪಣಿಗಳಿಗೆ ಜ್ಞಾನ ನಿರೋಧಕ ಶಕ್ತಿಗಳು ಎಂಬ ಅರ್ಥ ಸ್ಪಷ್ಟವಾಗುತ್ತದೆ. ಹೀಗೆ, ಪ್ರಕೃತ ಸೂಕ್ತದಲ್ಲಿ ಬಂದಿರುವ ವಿಷಯವು ಜ್ಞಾನಾಪಹಾರಕ ಶಕ್ತಿಗಳ ಮತ್ತು ಜ್ಞಾನಸಂಪಾದಕ ಶಕ್ತಿಗಳ ಹೋರಾಟದ ಹಿನ್ನೆಲೆಯನ್ನು ಮನದಟ್ಟುಮಾಡಿಕೊಡುತ್ತದೆ. ಇಲ್ಲಿ ಬಂದಿರುವ 'ಸಾಯಿಯು' ದೇವದೂತಿ ಎಂಬುದನ್ನು ಮರೆಯತಕ್ಕದ್ದಲ್ಲ. ಮನುಷ್ಯನಲ್ಲಿ ಸರ್ವದಾ ಎಚ್ಚತ್ತಿರುವ ಜಾಗೃತಿಗೆ, ಮತ್ತು 'ದೇವ' ಹಿತವನ್ನೇ ಸರ್ವದಾ ಬಯಸಿ ಆಸುರೀ ಶಕ್ತಿಗಳನ್ನು ಕತ್ತಲೆಯಲ್ಲೂ ಪತ್ತೆ ಹಚ್ಚಿ ಬೊಗಳಬಲ್ಲ ಶಕ್ತಿಯುಳ್ಳ ಈ ಸಾಯಿಗೇ ಸಾಂಕೇತಿಕಾರ್ಥವು ಸ್ಪಷ್ಟವಾಗುವದಲ್ಲದೆ ಪ್ರಕೃತಸೂಕ್ತದಲ್ಲಿ ಇದರ ಪಾತ್ರ ಮಹತಿಯೂ ಔಚಿತ್ಯವೂ ಸ್ಪಷ್ಟವಲ್ಲವೆ ?

## ೧೧. 'ಪಣಿ'ಗಳು ಯಾರು? ಎಲ್ಲಿದ್ದಾರೆ? ಅವರ ವೃತ್ತಿಯೇನು?

ಈಗ ಈ ಸಾಂಕೇತಿಕ ಹಿನ್ನೆಲೆಯಲ್ಲಿ ಪರಿಶೀಲಿಸಿದರೆ ಎದ್ದು ಕಾಣುವ ಬಹು ಮುಖ್ಯಾಂಶಗಳನ್ನು ಹೀಗೆ ಸಂಗ್ರಹಿಸಬಹುದು :

ಮೊದಲು ಪಣಿಗಳು ಯಾರು ಎಂಬ ವಿಷಯಕ್ಕೆ ವೇದದಲ್ಲೇ ಬರುವ ವಿವರಣಕ್ಕೆ ಸರಿ ಹೊಂದುವಂತೆ, ಪ್ರಾಚೀನರಾದ ಪೂರ್ವಿಕರೇ ವಿವರಿಸಿರುವ ಅರ್ಥವನ್ನು ಮನಗಾಣಬೇಕು. ಯಾಸ್ಕರು ನಿರುಕ್ತದಲ್ಲಿ (VI–26) ಪಣಿಗಳೆಂದರೆ, "ಪಣೀಂಶ್ಚ ವಣಿಜಃ"— ವ್ಯಾಪಾರ ಮನೋಭಾವವುಳ್ಳವರು ಎಂದು ವಿವರಿಸಿ, ವೇದದಲ್ಲಿಯೇ "ಬೇಕನಾಟಾಃ" ಎಂದು ವೇದ ಪ್ರಸಿದ್ಧರಾದ, ಮತ್ತು "ಕುಸೀದ" ಎಂಬ ಹಣದ ಬಡ್ಡಿಯ ವ್ಯಾಪಾರ ಜೀವನದಿಂದ ಬದುಕುವ, ಒಂದಕ್ಕೆರಡೋ ಬಡ್ಡಿಯನ್ನೋ, ಅಥವಾ ಅಸಲನ್ನೇ ದ್ವಿಗುಣವನ್ನಾಗಿಸುವ ಆಸೆಯುಳ್ಳವರ ಪಟ್ಟಿಯಲ್ಲಿ ಸೇರಿಸಿರುವುದಲ್ಲದೇ ಇಂಥವರು "ಹಗಲಿನಲ್ಲಿ" ಮಾತ್ರ ಕಣ್ಣುಳ್ಳವರೆಂದೂ, ಸೂರ್ಯನ ಬಿಸಿ

ಲಿರುವಷ್ಟೇ ಕಾಲ ವಸ್ತುಗಳನ್ನು ನೋಡಿ, ಹಗಲು ಮುಗಿದ ನಂತರ ವಸ್ತುಗಳೇ ಇಲ್ಲವೆಂದು ವಾದ ಮಾಡುವ ನಾಸ್ತಿಕ, ಚಾರ್ವಾಕರಿಗೆ ಸಮರೆಂದು ವಿವರಿಸಿದ್ದಾರೆ. ಈ ಅರ್ಥಪುಷ್ಟಿಗಾಗಿ ಅವರು ಋಕ್ ಸಂಹಿತೆಯ (VIII-66-10) ಮಂತ್ರವನ್ನು ಉದಾಹರಿಸಿದ್ದಾರೆ.

ಕದೂ ಮಹೀರಧೃಷ್ಟಾ ಅಸ್ಯತವಿಷೀಃ ಕದುವೃತ್ರಘ್ನೋ
ಅಸ್ತೃತಂ ।
ಇಂದ್ರೋ ವಿಶ್ವಾನ್‌ಬೇಕನಾಟಾಂ ಅಹರ್ದೃಶ ಉತಕ್ರತ್ವಾ
ಪಣೀಗ್‌ಂ ರಭಿ ॥

ಇಲ್ಲಿ "ಅಹರ್ದೃಶಃ" ಶಬ್ದಕ್ಕೆ ವ್ಯಾಖ್ಯಾನ ಮಾಡುತ್ತಾ ಶ್ರೀ ಸಾಯಣಾಚಾರ್ಯರು : "ನನು ಸರ್ವೇ ಸೂರ್ಯಂ ಪಶ್ಯಂತಿ ಕೋsತ್ರಾತಿಶಯ ಇತಿ ಉಚ್ಯತೇ । ಇಹೈವ ಜನ್ಮನಿ ಸೂರ್ಯಂ ಪಶ್ಯನ್ತಿ ನ ಜನ್ಮಾಂತರೇ। ಲುಬ್ಧಕಾ ಅಯಷ್ವಾರೋsಂಧೇತಮಸಿ ಮಜ್ಜಂತಿ । ಅಥವಾ ಲೌಕಿಕಾನ್ಯೇವ ಅಹಾನಿ ಪಶ್ಯಂತಿ ನ ಪಾರಲೌಕಿಕಾನ್ಯದೃಷ್ಟಾನಿ । ದೃಷ್ಟಪ್ರಧಾನಾ ಹಿ ನಾಸ್ತಿಕಾಃ ।" ಎಂದು ಸ್ವಾರಸ್ಯವಾಗಿ ಬರೆದಿದ್ದಾರೆ : "ಎಲ್ಲರೂ ಸೂರ್ಯನನ್ನು ನೋಡಬಲ್ಲರಾದುದರಿಂದ ಪಣಿಗಳಿಗೆ ಮಟ್ಟಿಗೆ ಏಕೆ 'ಅಹರ್ದೃಶಃ' ಎಂದು ಅತಿಶಯವಾಗಿ ಹೇಳಿದೆಯೆಂದು ಕೇಳಿದರೆ, ಹೀಗೆ ಹೇಳುತ್ತೇವೆ : ಇವರು (ಪಣಿಗಳು) ಇನ್ನು ಈ ಜನ್ಮವೊಂದರಲ್ಲಿ ಮಟ್ಟಿಗೆ ಸೂರ್ಯನನ್ನು ನೋಡತಕ್ಕವರೇ ಹೊರತು, ಮತ್ತೆ ಮುಂದಿನ ಜನ್ಮಾಂತರಗಳಲ್ಲಲ್ಲ. ಏಕೆಂದರೆ ಕೊಲೆಗಡಕ ವೃತ್ತಿಯ, ಜಿಪುಣರಾದ, ಅಯಜ್ಞಶೀಲರಾದ ಇವರು 'ಅಂಧತಮಸ್ಸೆ'ಂಬ ನರಕದಲ್ಲಿ ಬಿದ್ದು ಮುಳುಗುತ್ತಾತೆಯಷ್ಟೆ! ಆದುದರಿಂದ ಇವರಿಗೆ ಮುಂದೆ ಬರಿಯ 'ಕತ್ತಲೆ' ಕಾದಿದೆ. ಅಥವಾ 'ಲೌಕಿಕವಾದ ಹಗಲನ್ನು' ಮಾತ್ರ ನೋಡತಕ್ಕವರೇ ಹೊರತು, ಪಾರಲೌಕಿಕವಾದ 'ನಿತ್ಯ ಹಗಲ'ನ್ನು, ಈ ವರೆಗೆ ನೋಡದಿದ್ದು, ಮುಂದೆಯೂ ಎಂದೂ ಕಾಣಲಾರರು. ನಾಸ್ತಿಕರಿಗೆ ಕಣ್ಣಿಗೆ ಕಂಡದ್ದಷ್ಟು ಮಾತ್ರವಲ್ಲವೇ ಸತ್ಯ?" ಎಂದು ವಿವರಿಸಿದ್ದಾರೆ, "ಇಂದ್ರರೂಪಿಯಾದ ಭಗವಂತನ ಸೈನ್ಯಗಳು ಮಹಾ ಬಲಿಷ್ಠವಾಗಿ, ಶತ್ರುಗಳಿಗೆ ಎಂದೂ ಸೋಲದೆ ಜಾಗೃತವಾಗಿವೆ. ವೃತ್ರನನ್ನೇ ಸಂಹರಿಸಿದ ಇವನಿಗೆ ಮತ್ತೆ ಯಾವ ದುಷ್ಟ ವಸ್ತುವು ತಾನೇ ಎದುರಾಗಬಲ್ಲದು ? ಹಗಲಿದ್ದಾಗ

**ಮಾತ್ರ ಕಣ್ಣುಳ್ಳ 'ಪಣಿಗಳನ್ನು' 'ಬೇಕನಾಟರನ್ನು' ಇವರ ವರ್ಗದ ಇತರ ವಂಚಕರನ್ನೂ ಸಂಪೂರ್ಣವಾಗಿ ನಾಶ ಮಾಡಬಲ್ಲನು."** ಎಂಬುದು ಈ ಮಂತ್ರದ ಭಾವಾರ್ಥ. 'ಪಣಿ' ಶಬ್ದ ಬಂದಾಗಲೆಲ್ಲ ವೇದದಲ್ಲಿ ಈ ಅರ್ಥವೇ ಉದ್ದಿಷ್ಟವೆಂಬುದಕ್ಕೆ ನಿರ್ವಿವಾದವಾದ ಆಧಾರಗಳೂ ವೇದದಲ್ಲೇ ಹೇರಳವಾಗಿದೆ.

ಯಾಸ್ಕರೇ ಇನ್ನೊಂದೆಡೆಗೆ ನಿರುಕ್ತದಲ್ಲಿ (II-17) **"ಪಣಿಃ ವಣಿಕ್ ಭವತಿ, ಪಣಿಃ ಪಣನಾತ್ ವಣಿಕ್ ಪಣ್ಯಂ ನೇನೇಕ್ತಿ"**ಎಂದರೆ "ಪಣಿಯು ವರ್ತಕನಾಗುತ್ತಾನೆ; ಏಕೆಂದರೆ, ಪದಾರ್ಥಗಳನ್ನು ಹಣಕ್ಕೆ ಮಾರುತ್ತಾನೆ. ಇವನಿಗೆ ಪದಾರ್ಥಕ್ಕಿಂತಲೂ ಸರಿಯಾದ ಬೆಲೆಯು ಬರುವುದೇ ವ್ಯವಹಾರದ ಗುರಿ." ಎಂದು ಅರ್ಥ ಮಾಡಿದ್ದಾರೆ.

ಇದನ್ನೇ ಮುಂದುವರೆಸುವಂತೆ ಶ್ರೀ ಸಾಯಣಾಚಾರ್ಯರು **"ಕಿಂಚ ಪಣಯಃ ವ್ಯಯ ಅಸಹಿಷ್ಣವಃ ವಣಿಜಃ। ಪಣಿಃ ವಣಿಕ್ ಭವತೀತಿ ಯಾಸ್ಕಃ। ಪಣಯಃ ಇತಿ ಲುಬ್ಧಕಾಃ ಅಬುಧ್ಯ ಮಾನಾಃ ಯಾಗಾದೀನಾಂ ಅಕುರ್ವಾಣಾಃ ಅದಾನಶೀಲಾಃ ಅಸ್ಮತ್‌ಶತ್ರವಃ!"** (ಋ.ಸಂ. 1-124-10ರ ಭಾಷ್ಯದಲ್ಲಿ) ಎಂದು ಹೇಳಿದ್ದಾರೆ. "ಪಣಿಗಳೆಂದರೆ ಕೂಡಿಟ್ಟ ಹಣ ಖರ್ಚಾಗುವುದನ್ನು ಸಹಿಸದ, ವರ್ತಕ ಮನೋವ್ಯಾಪಾರದ ಜಿಪುಣರು, ಬುದ್ಧಿಯಿಲ್ಲದವರು, ತಿಳಿಯಲು ಆಸೆಯಿಲ್ಲದವರು, ಯಾಗಾದಿ ವೇದ ಕರ್ಮಗಳನ್ನು ಮಾಡದವರು, ಬುದ್ಧಿ ಇಲ್ಲದವರು, ನಮ್ಮ ಶತ್ರುಗಳು."

ಈ ಮೇಲಿನ ಋಕ್ ಸೂಕ್ತದಲ್ಲಿಯೂ 'ಪಣಿ' ಶಬ್ದ ಬಂದಿರುವುದಲ್ಲದೇ ಸೂಕ್ತಾಭಿಮಾನಿ ದೇವತೆಯಾದ ಉಷೋ ದೇವಿಗೆ ಮಾಡಿರುವ ಪ್ರಾರ್ಥನೆಯೂ ಮಾರ್ಮಿಕವಾಗಿದೆ :

"ಹೇ ದೇವಿ ! ನೀನು ನಮಗೆ ಬೇಡಿದ್ದನ್ನೆಲ್ಲ ಕೊಡತಕ್ಕ ಧನವಂತಳು. ನಾವು ಬೇಡುವುದಾದರೂ ಯಜ್ಞಾರ್ಥವಾದ ಪದಾರ್ಥಗಳನ್ನಷ್ಟೇ ! ಆದ್ದರಿಂದ ಯಾಗ ದಾನಶೀಲರಾದ ಉದಾಲಿಗಳನ್ನು ಪ್ರಬುದ್ಧರನ್ನಾಗಿ ಮಾಡು. ಹಾಗೆಯೇ ಲುಬ್ಧರಾದ, ವಂಚಕರಾದ, ಬುದ್ಧಿಹೀನರಾದ, ನಮ್ಮ ಶತ್ರುಗಳಾದ (ಪಣಿಗಳು) ನಿದ್ದೆ ಹೋಗುವಂತೆ ಮಾಡು. ಹೇ ದೇವಿ, ದಾನಶೀಲನಾದ ಯಜಮಾನನಿಗೆ ಶ್ರೇಯಸ್ಸಾಗುವಂತೆಯೂ ಅನುಗ್ರಹಿಸು. ಅನು

ಗ್ರಹ ಕಟಾಕ್ಷವುಳ್ಳ ದೇವಿ, ಸಕಲಪ್ರಾಣಿಗಳಿಗೂ ಒಂದು ದಿನ ಮುಪ್ಪು ಆಗುವಂತೆ ಮಾಡಬಲ್ಲವಳೇ ನೀನು. ಆದರೆ ಸ್ತೋತ್ರಶೀಲನಾದ ಯಜ್ಞಾಧಿಕಾರಿಗೆ ಸುಖವನ್ನುಂಟು ಮಾಡು,"

ಇಲ್ಲಿಯೂ 'ಪಣಿ' ಶಬ್ದಾರ್ಥ ಸ್ಪಷ್ಟವಾಗಿ ಎದ್ದು ಕಾಣುತ್ತದೆ. ಅಲ್ಲದೆ 'ಪಣಿ' ಶಬ್ದವನ್ನು ಬಹು ವಚನದಲ್ಲಿ ಉಪಯೋಗಿಸಿರುವುದೂ ಸ್ಪಷ್ಟವಾಗಿದೆ. ಹೀಗೆ ನಿರ್ದೇಶಿಸಲ್ಪಟ್ಟ 'ಪಣಿ' ಗಳು ಈಗಲೂ ಸಮಾಜದಲ್ಲಿ ಇರುವುದನ್ನು ಕಾಣುತ್ತೇವೆ. ಇದು ಗತಕಾಲದ ಒಂದು ಜನಾಂಗವನ್ನಷ್ಟೇ ಸೂಚಿಸುವ ಶಬ್ದವಲ್ಲ. ಇವರ ಕೆಲಸವು ಎಲ್ಲೆಲ್ಲಿ ದೇವಹಿತವನ್ನು ಕೋರುವ 'ಗೋ ಸಮೂಹವು' ಕಾಣಬರುವದೋ ಅಲ್ಲೆಲ್ಲಾ. ಅವುಗಳನ್ನು ಅಪಹರಿಸಿ, ಲೋಕಕ್ಕಾಗಲೀ, ದೇವತೆಗಳಿಗಾಗಲೀ, ಕೊನೆಗೆ ತಮಗಾಗಲೀ, ಉಪಯೋಗಬಾರದಂತೆ, ಅವುಗಳನ್ನು ಬಚ್ಚಿಟ್ಟು ತನ್ನ ಕ್ರೂರವಾದ ವ್ಯಾಪಾರ ದೃಷ್ಟಿಯ ಜೀವನ ಕ್ರಮವನ್ನೇ ಸ್ಥಾಪಿಸುವುದು. ಇದು ಇಂದು ನಡೆಯುತ್ತಿಲ್ಲವೆ ? ಶ್ರೇಯೋರೂಪವಾದ ಅಧ್ಯಾತ್ಮ ಜ್ಞಾನವೂ ಇದರ ಮೂರ್ತಸ್ವರೂಪವಾದ ಬ್ರಹ್ಮನಿಷ್ಠರೂ, ಇಂತಹವರಿಗೆ ಉಪದ್ರವ ಕಾರಕಗಳಾದ ವಸ್ತುಗಳು. ಇವರನ್ನೇ 'ಸೆರೆ'ಯಲ್ಲಿಟ್ಟರೆ, ಇವರ ಜ್ಞಾನವನ್ನು ಪ್ರಚಾರವಾಗದಂತೆ 'ಕತ್ತಲೆ'ಯಲ್ಲಿಟ್ಟರೆ ಮಾತ್ರ ಅವರ ದುರ್ವ್ಯಾಪಾರಕ್ಕೂ ನಾಸ್ತಿಕವಾದಕ್ಕೂ ಅವಕಾಶ ಏರ್ಪಡುವುದು.

ಶ್ರೀ ಮದ್ಭಾಗವತದಲ್ಲಿ ಕಂಸನ ಮಂತ್ರಿಗಳು ಈ ಲಕ್ಷಣಗಳನ್ನೇ ಹೊಂದಿದ್ದು, ಇದೇ "ಪಣಿಸಂದೇಶ" ವನ್ನೇ ಕಂಸನಿಗಿತ್ತು, ದೇವತೆಗಳನ್ನೂ ಭಗವಂತನನ್ನೂ 'ನಿಗ್ರಹಿಸಲು' ಇದೇ ಉಪಾಯವನ್ನು ಸೂಚಿಸುತ್ತಾರೆ. (X-4-39-42)

ಮೂಲಂ ಹಿ ವಿಷ್ಣುರ್ದೇವಾನಾಂ ಯತ್ರ ಧರ್ಮಃ ಸನಾತನಃ ।
ತಸ್ಯ ಚ ಬ್ರಹ್ಮ ಗೋವಿಪ್ರಾಃ ತಪೋ ಯಜ್ಞಾಃ ಸದಕ್ಷಿಣಾಃ ॥
ತಸ್ಮಾತ್ ಸರ್ವಾತ್ಮನಾ ರಾಜನ್ ಬ್ರಾಹ್ಮಣಾನ್ ಬ್ರಹ್ಮವಾದಿನಃ ।
ತಪಸ್ವಿನೋ ಯಜ್ಞಶೀಲಾನ್ ಗಾಶ್ಚ ಹನ್ಮೋ ಹವಿರ್ದುಘಾಃ ।

ವಿಪ್ರಾ ಗಾವಶ್ಚ ವೇದಾಶ್ಚ ತಪಃ ಸತ್ಯಂ ದಮಃ ಶಮಃ ।
ಶ್ರದ್ಧಾ ದಯಾ ತಿತಿಕ್ಷಾ ಚ ಕ್ರತವಶ್ಚ ಹರೇಸ್ತನೂಃ ॥
ಸ ಹಿ ಸರ್ವಸುರಾಧ್ಯಕ್ಷಃ ಹ್ಯಸುರದ್ವಿಟ್ ಗುಹಾಶಯಃ ।
ತನ್ಮೂಲಾ ದೇವತಾಃ ಸರ್ವಾಃ ಸೇಶ್ವರಾಃ ಸ ಚತುರ್ಮುಖಾಃ ।
ಅಯಂ ವೈ ತದ್ವಧೋಪಾಯೋ ಯದೃಷೀಣಾಂ ವಿಹಿಂಸನಂ ॥

"ದೇವತೆಗಳಿಗೂ ಸನಾತನ ಧರ್ಮಕ್ಕೂ ಮೂಲವೇ ಶ್ರೀವಿಷ್ಣುವು. ಅವನಿಗೆ ವೇದಗಳೂ, ಗೋವುಗಳೂ, ಬ್ರಾಹ್ಮಣರೂ, ತಪಸ್ಸೂ, ಸದಕ್ಷಿಣಾಕವಾದ ಯಜ್ಞವೂ ವಾಸಸ್ಥಾನಗಳು. ಆದ್ದರಿಂದ ಎಲೆ ರಾಜನೇ! ಬ್ರಾಹ್ಮಣರನ್ನೂ ಬ್ರಹ್ಮವಾದಿಗಳಾದ ಇತರರನ್ನೂ, ತಪಸ್ವಿಗಳನ್ನೂ, ಯಜ್ಞಶೀಲರನ್ನೂ, ಯಜ್ಞಕ್ಕೆ ಹವಿಸ್ಸನ್ನೊದಗಿಸುವ ಗೋವುಗಳನ್ನೂ ಕೊಲ್ಲೋಣ. ವಿಪ್ರರೂ ಗೋವುಗಳೂ, ವೇದಗಳೂ, ತಪಸ್ಸೂ, ಸತ್ಯ, ದಯೆ, ಶಮಗಳೂ, ಶ್ರದ್ಧೆ ದಮೆ, ಸಹನೆ, ಯಜ್ಞಗಳು— ಇವು ಶ್ರೀ ಹರಿಯ ಶರೀರಗಳು. ಅವನು ದೇವಾಧ್ಯಕ್ಷನಾಗಿದ್ದು ಸರ್ವರ ಹೃದಯ ಗುಹೆಯಲ್ಲಿದ್ದರೂ ಅಸುರರನ್ನು ದ್ವೇಷಮಾಡುತ್ತಾನೆಯಷ್ಟೆ! ಚತುರ್ಮುಖನಾದಿಯಾಗಿ ಎಲ್ಲ ದೇವತೆಗಳಿಗೂ ಇವನೇ ಬೇರಾದುದರಿಂದ, ಋಷಿಹಿಂಸೆಯೆಂಬುದೇ ಅವನನ್ನು ಕೊಲ್ಲಲು ಸರಿಯಾದ ಉಪಾಯ."— ಇದು ಪಣಿಗಳ ನಿರಂತರ ಕಾಲಿಕ "ಯೋಜನೆ". ಇಂದೂ ಇದು ನಡೆಯುತ್ತಿಲ್ಲವೇ ? ಎಷ್ಟೊಂದು ನವೀನವೂ ಆಧುನಿಕವೂ ಆಗಿದೆ ಈ ಸಂಚು !

ಆದುದರಿಂದ ವೇದದಲ್ಲಿ ಬಂದಿರುವ 'ಪಣಿ'ಗಳು ಜ್ಞಾನವಿರೋಧ ಶಕ್ತಿಗಳಾಗಿ, ಜ್ಞಾನಿಗಳ ದ್ವೇಷವನ್ನೇ ಮುಖ್ಯ ಗುಣವನ್ನಾಗಿ ಉಳ್ಳ, ಕಣ್ಣಿಗೆ ಕಂಡ ಜಗತ್ತು ಮಾತ್ರ ಸತ್ಯವೆಂದು ನಂಬಿದ, ಇತರರ ರಕ್ತಗಳನ್ನು ಹೀರಿ ಬದುಕುವ, ಶೋಷಿತ ಸಮಾಜ ನಿರ್ಮಾಣವನ್ನೇ ಗುರಿಯನ್ನಾಗಿ ಮುಂದಿಟ್ಟು ಕೊಂಡಿರುವ 'ಸಮಾಜವಾದೀ' ಸೋಗು ಹಾಕುವ ಘಾತಕ ಶಕ್ತಿಗಳು. ಒಂದು ಕಾಲದಲ್ಲಿ ನಮ್ಮ ದೇಶದ ಪೂರ್ವ ನಿವಾಸಿಗಳೇ ಇವರಾಗಿದ್ದರೆಂದೂ, 'ಆರ್ಯರು' ಇವರನ್ನು ಹೊರಗೆ ಅಟ್ಟಿದರೆಂದೂ, ಅರ್ಥಮಾಡುವುದು ಅವಿವೇಕವೂ ದುರುದ್ದೇಶಪೂರಿತವೂ ಆಗಿದೆ. 'ಪಣಿ'ಗಳು ಆರ್ಯ ಕುಲದಲ್ಲೇ ಹುಟ್ಟಬಹುದು, ಆರ್ಯನ ಬಂಧುಗಳೆಲ್ಲ ಹಿಂದಾಗಲಿ ಈಗಾ

ಗಲಿ ಆರ್ಯರೇ ಆಗಿರುವರೆಂದು, ಯಾರೂ ಹೇಳುವ ಅವಶ್ಯವಿಲ್ಲ. ಜಗತ್ತು ಸಾಮಾನ್ಯವಾಗಿ ತುಂಬಿರುವುದೇ 'ಅನಾರ್ಯ'ರಾದ 'ಪಣಿ'ಗಳಂತಹ 'ದಸ್ಯು' ಗಳಿಂದ. ಹಾಗೆ ನೋಡಿದರೆ ದಸ್ಯು ಶಬ್ದವೂ 'ಪಣಿ' ಶಬ್ದದಂತೆ, ದಸ್–ಧಾತುವಿನಿಂದ "ವ್ಯವಸಾಯವನ್ನೇ ಗುರಿಯನ್ನಾಗಿವುಳ್ಳವನು" ಎಂಬರ್ಥವನ್ನು ಹೊಂದಿ, 'ದಾಸ' ಶಬ್ದಕ್ಕೆ ಪರ್ಯಾಯವಾಗಿರುವುದನ್ನು ಯಾಸ್ಕರೇ ನಿರುಕ್ತದಲ್ಲಿ (II–17) "ದಾಸಃ ದಸ್ಯತೇಃ ಉಪದಾಸಯತಿ" ಎಂದು ಹೇಳಿದ್ದಾರೆ. ಅಂದರೆ, ವ್ಯಾಪಾರವಾಗಲೀ, ವ್ಯವಸಾಯವಾಗಲೀ ನಿರುಪಯುಕ್ತವೆಂದು ಭಾವವಲ್ಲ. ಆದರೆ, ಪರಾರ್ಥ, ಪರಮಪುರುಷಾರ್ಥ ಜ್ಞಾನವೇ ಇಲ್ಲದೆ, ಇದು ಸಾಲದೆ ಅದನ್ನೇ ದ್ವೇಷಿಸುತ್ತಾ ಹೊಟ್ಟೆಯೊಂದನ್ನೇ ತುಂಬುವ ಕಸಬನ್ನುಳ್ಳ ಜನರನ್ನು ಪರಮಪುರುಷಾರ್ಥ ದೃಷ್ಟಿಯಿಂದ ತುಚ್ಛರನ್ನಾಗಿ ಕಂಡ ಭಾವ ಈ ಶಬ್ದಗಳಲ್ಲಿ ಅಡಗಿದೆ, ಮತ್ತು ಯುಕ್ತವಾಗಿದೆ. ಈ ಗುಣಗಳನ್ನುಳ್ಳ ಜನಗಳು ಎಲ್ಲಿದ್ದರೂ, ಯಾವಾಗಲೂ, ಅವರು 'ಪಣಿ'ಗಳೇ, ದಾಸರೇ, ದಸ್ಯುಗಳೇ! ಆದುದರಿಂದ ವೇದವು ಇಂಥ ಪ್ರಸಂಗಗಳಲ್ಲಿ ಈ ನಿತ್ಯ ಸತ್ಯವನ್ನೇ ಎತ್ತಿ ಹಿಡಿದು, ಜ್ಞಾನಾಜ್ಞಾನ ಶಕ್ತಿಗಳ ಹೋರಾಟವನ್ನು ಪ್ರತಿಬಿಂಬಿಸಿ ನಿದರ್ಶಿಸುತ್ತದೆ. ಇಂಥ ಅಜ್ಞಾನಿಗಳು ಒಂದೊಂದು ಕಾಲದಲ್ಲಿ (ಈಗಿನಂತೆ) ಬಹು ಸಂಖ್ಯೆಯಲ್ಲಿದ್ದು ವೈದಿಕ ಜ್ಞಾನ ಸಂಪತ್ತಿಗೆ ದೊಡ್ಡ ಗಂಡಾಂತರ ಒದಗಿದ ಪ್ರಸಂಗವು ಇದ್ದರೂ ಇರಬಹುದು. ಆ ಅಜ್ಞಾನಿಗಳು ಯಾವ ಕುಲದವರೇ ಆಗಿದ್ದರೂ, ಯಾವ ಜನಾಂಗದವರೇ ಆಗಿದ್ದರೂ ಅದು ವೇದದಲ್ಲಿ ಮುಖ್ಯ ವಿಷಯವಲ್ಲ. ಅವರು ಜ್ಞಾನ ವಿರೋಧಿಗಳಾಗಿದ್ದದ್ದು ಮಾತ್ರ ಮುಖ್ಯ. ಈ ಕಣ್ಣನ್ನು ಕಳೆದುಕೊಂಡು ವೇದದಲ್ಲಿ ನೋಡುವುದಕ್ಕೆ ಉಳಿದದ್ದೇನು?

## ೧೨. 'ಆಂಗಿರಸರು' ಯಾರು?

ಹೀಗೆ 'ಪಣಿಗಳಿಂದ' ಅಪಹೃತವಾಗಿ ಬಚ್ಚಿಡಲ್ಪಟ್ಟ 'ಗೋವು'ಗಳನ್ನು ಹುಡುಕುವುದರಲ್ಲಿಯೂ, ಇಂದ್ರನಿಗೆ ತಿಳಿಸುವುದರಲ್ಲಿಯೂ ಸಹಾಯಕರಾದ ಆಂಗಿರಸರೆಂಬ ಋಷಿಗಳ ಪ್ರಸ್ತಾಪವು ಈ ಪ್ರಸಂಗದಲ್ಲಿ ಮೇಲಿಂದ ಮೇಲೆ ಬಂದಿರುವದನ್ನು ಹಿಂದೆ ಪ್ರಸ್ತಾಪಿಸಲಾಗಿದೆ. ಇವರ ಪಾತ್ರವೇನು?

ಇಂದ್ರನಿಗೇ ತಿಳಿಯದ 'ಗೋವುಗಳ' ನೆಲೆ ಆಂಗಿರಸರಿಗೆ ತಿಳಿಯಿತೆಂದರೆ ಏನರ್ಥ ? ಇದಕ್ಕೂ ಚಾರಿತ್ರಿಕ ದೃಷ್ಟಿಗೂ ಏನು ಸಂಬಂಧ ? 'ಪಣಿ'ಗಳು ದ್ರಾವಿಡರಾದರೆ, ಈ ಪ್ರಸಂಗದಲ್ಲಿ ಆಂಗಿರಸರೆಂಬ ಬ್ರಾಹ್ಮಣರಿಗೂ ಬ್ರಾಹ್ಮಣ ದ್ವೇಷಿಗಳಾದ ಶೂದ್ರರಿಗೂ ನಡೆದ ಕಲಹವೇ ಇದು ? ವ್ಯವಸಾಯವನ್ನೇ ಮತ್ತು ವ್ಯಾಪಾರವನ್ನೇ ಜೀವನವನ್ನಾಗಿ ಹೊಂದಿದ 'ಪಣಿ'ಗಳ ಬಳಿಯಲ್ಲಿ ತಮ್ಮದೇ ಆದ 'ಗೋವು'ಗಳಿರಲಿಲ್ಲವೇ ? ಉಳಿದವರ 'ಗೋವು'ಗಳನ್ನು ಅಪಹರಿಸಿದರೆಂದರೆ ಏನು ಅರ್ಥ ? ಇವಕ್ಕೆಲ್ಲ ಅಪಾರ್ಥವೇ ಆಗುವುದು !

ಇಂದ್ರನಿಗೆ ಆಂಗಿರಸರ ಸಹಾಯವನ್ನು ಕುರಿತು ವರ್ಣಿಸುವ ಒಂದು ಋಙ್ಮಂತ್ರವು (IX-97-39) ಅವರನ್ನು ಹೀಗೆ ವರ್ಣಿಸಿರುತ್ತದೆ :

"ಯೇನಾ ನಃ ಪೂರ್ವೇ ಪಿತರಃ ಪದಜ್ಞಾಃ ಸ್ವರ್ವಿದೋ ಅಭಿಗಾ ಅದ್ರಿಮುಷ್ಣನ್".

ಇದರರ್ಥ : "ನಮ್ಮ ಪೂರ್ವಜರಾದ, ಪಿತೃಗಳಾದ ಆಂಗಿರಸರು ಸರ್ವಜ್ಞರೂ, ಪರಲೋಕಜ್ಞರೂ ಆಗಿದ್ದು, ಅಪಹೃತವಾದ 'ಗೋವು'ಗಳ ಹೆಜ್ಜೆಗಳ ಗುರುತುಗಳನ್ನು ಅರಿತವರೂ ಆಗಿದ್ದು, ಪರ್ವತದ ಮೇಲಿನಿಂದ 'ಗೋವು'ಗಳನ್ನು ಸುರಕ್ಷಿತವಾಗಿ ಕೆಳಗಿಳಿಸಿ ತಂದವರು" ಎಂದು. 'ಗೋ' ಎಂದರೆ ವೇದೋಕ್ತವಾದ ಅಧ್ಯಾತ್ಮ ವಿದ್ಯೆ ಎಂದು ಹಿಂದೆ ವಿವರಿಸಿದಂತೆ ತಿಳಿದಾಗ ಈ 'ಗೋವು'ಗಳ ಹೆಜ್ಜೆಯ ಗುರುತೆಂದರೆ, ವೇದದ ವಾಕ್ಯಗಳ 'ಪದ'ಗಳ ಮಾರ್ಮಿಕಾರ್ಥಗಳು. ಇದನ್ನು ತಿಳಿದವರೇ 'ಪದಜ್ಞಾಃ' ಎಂಬ ವೇದಾರ್ಥಜ್ಞಾನವುಳ್ಳವರು. ಇಂತಹ ಕಾಮಧೇನುವಾದ ವೇದದ ನಾಲ್ಕು ಪಾದಗಳೇ ಧರ್ಮಾರ್ಥ, ಕಾಮ, ಮೋಕ್ಷಗಳೆಂಬ ಪುರುಷಾರ್ಥಗಳು. ಯಾವ ಯಾವ ವೇದಮಂತ್ರಗಳು ಯಾವ ಯಾವ ಪುರುಷಾರ್ಥವನ್ನು ಅನುಗ್ರಹಿಸಬಲ್ಲವೆಂಬುದನ್ನು ತಿಳಿದು, ಅವುಗಳಲ್ಲಿ ಯಾವುದು ಶ್ರೇಷ್ಠ ಮತ್ತು ಪರಮಪದಪ್ರಾಪ್ತಿಗೆ ಸಾಧಕ ಎಂಬುದನ್ನೂ ತಿಳಿದ 'ಸ್ವರ್ವಿದಃ' ಎಂಬ ಸರ್ವಜ್ಞರಾದವರೇ ನಮ್ಮ ಪೂರ್ವಜರಾದ ಪಿತೃಗಳು. ಅಥವಾ ವೇದವೇ ಹೇಳುವಂತೆ, (ಋಕ್ ಸಂ. I-164-45)

"ಚತ್ವಾರಿವಾಕ್ ಪರಿಮಿತಾ ಪದಾನಿ ತಾನಿವಿದುಃ ಬ್ರಾಹ್ಮಣಾಃ ಯೇ ಮನೀಷಿಣಃ".

ಎಂಬಂತೆ, ಪರಾ ಪಶ್ಯಂತೀ, ಮಧ್ಯಮಾ ಮತ್ತು ವೈಖರೀ ಎಂಬ ವಿಚಿತ್ರವಾದ ನಾಲ್ಕೂ ಬಗೆಯ ದಿವ್ಯ, ವೈದಿಕ ವಾಕ್ಯಗಳ, ಪದಗಳ ಅರ್ಥವನ್ನೂ ಬಲ್ಲವರು, ಈ 'ಪದಜ್ಞರು' 'ಸ್ವರ್ವಿದರು'. (ಈ ನಾಲ್ಕು ರೀತಿಯ ಪಾದಗಳಿಗೂ, ಪದಗಳಿಗೂ, ಪುರುಷಾರ್ಥಗಳಿಗೂ, 'ಚತ್ವಾರಿ ಶೃಂಗಾಃ' ಎಂಬಂತೆ ಪ್ರಸಿದ್ಧವಾದ ಅಗ್ನಿದೇವನ ನಾಲ್ಕು 'ಕೊಂಬು'ಗಳಿಗೂ, ಏನು ಸಂಬಂಧವೆಂಬುದನ್ನು ಯೋಗ ಬಲದಿಂದ ಉಪಾಸಿಸಿ ತಿಳಿಯಬೇಕು.)

ಹೀಗೆ ಸರ್ವಜ್ಞರಾದ ಆಂಗಿರಸರು ವೇದಗಳೆಂಬ 'ಗೋವು'ಗಳನ್ನು 'ಪರ್ವತ'ದ ಮೇಲಿನಿಂದ ಇಳಿಸಿ ತಂದುದಕ್ಕೆ ಏನರ್ಥ ? ಎಂದರೆ "ಸಾಮಾನ್ಯ ಪ್ರಜ್ಞೆಯುಳ್ಳ ಅಥವಾ ದುರುದ್ದೇಶವನ್ನೇ ಉಳ್ಳ 'ಪಣಿ'ಗಳಂತಹ ಕ್ಷುದ್ರ ಮಾನವರ ಕೈಗೆ ಎಟುಕದಷ್ಟು ಎತ್ತರವೇ" ಇಲ್ಲಿ ಪರ್ವತವೆಂಬ ರೂಪಕದಿಂದ ಸಂಕೇತದಿಂದ ಸೂಚಿಸಲ್ಪಟ್ಟಿದೆ. ಇದನ್ನು ಇಳಿಸಿ ತರುವುದು ಪ್ರಯಾಸವೇ· 'ಪಣಿ'ಗಳು 'ಗೋವು'ಗಳನ್ನು ಕೊಂಡೊಯ್ದು ರಹಸ್ಯವಾಗಿ ಅಡಗಿಸಿಟ್ಟಿದ್ದೇನೋ ಆಯಿತು. ಆದರೆ ಅದರಿಂದ ಅವರಿಗೇ ಏನೂ ಲಾಭವಾಗಲಿಲ್ಲ. ಇದರಿಂದ ಆ 'ಗೋವು'ಗಳಿಗೆ ನಷ್ಟವೂ ಏನೂ ಆಗಲಿಲ್ಲ. ಕೆಲಕಾಲ ಈ 'ಗೋವು'ಗಳನ್ನು ನಂಬಿದ್ದವರಿಗೆ ಕಿಂಚಿತ್ ಉಪದ್ರವವೂ ಅಸೌಕರ್ಯವೂ ಆಯಿತು ಮಾತ್ರ.

ಇಲ್ಲಿ ಈ ಅರ್ಥವು ಸ್ಪಷ್ಟವಾಗಿದೆ : ವೇದಾರ್ಥಗಳನ್ನು ತಿಳಿಯದ ಮೂಢನು ತಾನೂ ಸೋಗು ಹಾಕಿ, ವೇದ ಶಬ್ದಗಳನ್ನು ಅಪಹರಿಸಬಹುದು. ಇವನಿಗೆ ಅದರಿಂದೇನೂ ಲಾಭವಿಲ್ಲ. "ವೇದಗಳಿಗೆ ಅರ್ಥವೇ ಇಲ್ಲ" ಎಂದೋ, "ವೇದಗಳಲ್ಲಿರುವುದೆಲ್ಲ ಕ್ಷುಲ್ಲಕವಾದ, ಕ್ಷುದ್ರವಾದ, ವಿಷಯಗಳೇ" ಎಂದೋ ಇವನು ಹೇಳುತ್ತಾ ಬರೆಯುತ್ತಾ ಹೋಗಬಹುದು. ಇದರಿಂದ ತನಗೇನೂ ಲಾಭವಾಗದಿದ್ದರೂ, ವೇದಗಳನ್ನು ನಿಜವಾಗಿ ನಂಬಿ ಅವುಗಳ ಅರ್ಥವೆಂಬ ಹಾಲಿನಿಂದಲೇ ಜೀವನ ನಡೆಸುವ ಪರಮಾರ್ಥ ಸಾಧಕನಿಗೆ ಇಂತಹ 'ಪಣಿ'ಗಳಿಂದ ಸ್ವಲ್ಪಕಾಲ ಉಪದ್ರವ ಆಗುವುದು ಖಂಡಿತ. ಆದರೆ ವೇದಾರ್ಥ ತಿಳಿದ ಆಂಗಿರಸ ಸಮರಾದ, ಮತ್ತು ಸಂಪ್ರದಾಯಜ್ಞಾನವುಳ್ಳ ವೇದಪದಜ್ಞರಾದ ಮಹನೀಯರು ಅಂತಹ ದುಷ್ಕಾಲದಲ್ಲಿ ಬೆಟ್ಟದ

ಮೇಲಿನಿಂದ 'ಗೋವುಗಳನ್ನು' ಇಳಿಸಿದಂತೆ, ಗಾಢವಾದ ವೇದಾರ್ಥವನ್ನು ಯೋಗ್ಯ ಅಧಿಕಾರಿಗಳ ಪಾಲಿಗೆ ಇಳಿಸಿಕೊಟ್ಟು ಭಗವಂತನಾದ ಇಂದ್ರನ ಲೋಕ ನಿರ್ವಹಣ ವ್ಯಾಪಾರಕ್ಕೆ ಸಹಾಯಕರಾಗುವರು.

ಹೀಗೆ ನೋಡಿದಾಗ ಋಷಿಗಳ ಕಾಲದಿಂದೀಚೆಗೆ ಇಂತಹ 'ಪಣಿಗಳ' ಸಂಖ್ಯೆ ಬೆಳೆಯುತ್ತಿದೆ. ವೇದಾರ್ಥವೇ ಇಲ್ಲವೆಂದು ವಾದಿಸಿದ ವೈದಿಕ ಸೋಗಿನ ಕುಮಾರಿಲಭಟ್ಟ ಮುಂತಾದ ಪೂರ್ವಮೀಮಾಂಸಕರೂ, ವೇದದಲ್ಲಿ ಅರ್ಥಕ್ಕಿಂತ ವ್ಯಾಕರಣವೇ ಮುಖ್ಯವೆಂಬ ಧೋರಣೆಯುಳ್ಳವರೂ, ವೇದದ ಹೆಸರಿನಲ್ಲಿ, ವೇದಾಭ್ಯಾಸದ ನೆಪದಲ್ಲಿ ವೇದಾರ್ಥಗಳನ್ನೇ ನಿಂದಿಸಿ ನಾಶ ಮಾಡಲು ಹೊರಟ, 'ಸಂಶೋಧ'ಕರ ಸೋಗು ಹಾಕಿದ, ಕ್ರೈಸ್ತ ಮಿಶನರಿಗಳೂ, ಇವರ ಮಾರ್ಗದರ್ಶನದಲ್ಲೇ ನಡೆದ 'ನಮ್ಮವರೂ', ಈಚೆಗೆ ಕಮ್ಯುನಿಷ್ಟ ಮೊದಲಾದ ಅಪಸಿದ್ಧಾಂತಗಳ ಬಲೆಗೆ ಬಿದ್ದು ವೈದಿಕ ಸನಾತನ ಮೌಲ್ಯಗಳನ್ನು ನಿರಾಕರಿಸಿ ಜೀವನಾಶಕವಾದ ವಿಚಿತ್ರ ದೃಷ್ಟಿಯನ್ನು ಹರಡುತ್ತಿರುವವರೂ, ವಿವಿಧ ರೀತಿಯ ನಾಸ್ತಿಕ ಮತಗಳ ಪ್ರಚಾರದಲ್ಲಿ ತೊಡಗಿರುವವರೂ, (ಜೈನ, ಬೌದ್ಧ ಇತ್ಯಾದಿ) ಆಧುನಿಕ ಲೋಕಾಯತರೂ, ರೂಪಾಂತರಗಳನ್ನಾಶ್ರಯಿಸಿದವರೂ—ಎಲ್ಲರೂ 'ಪಣಿಗಳೇ'! ಇವರೆಲ್ಲರ ಕಾಟದಿಂದ ವೇದಾರ್ಥಗಳನ್ನು ರಕ್ಷಿಸಿಟ್ಟ ಮತ್ತು ರಕ್ಷಿಸುತ್ತಿರುವ 'ಆಂಗಿರಸರ' ಕಾರ್ಯ ಮತ್ತು ವೇದೋದ್ಧಾರದಲ್ಲಿ ಅವರ ಪಾತ್ರ ಬಹು ಮುಖ್ಯವಾದುದು. ಈಗ ಈ ಅಂಗಿರಸರ ಬಗೆಗೆ ಇಷ್ಟಿಷ್ಟು ವಿವರಗಳನ್ನು ನೋಡೋಣ.

## ೩೧. "ಆಂಗಿರಸ" ಶಬ್ದಾರ್ಥ

ಶ್ರೀ ಸಾಯಣರು "ಅಂಗಂತಿ ಗಚ್ಛಂತಿ, ಇತ್ಯಂಗಿರಸೋ ಗಂತಾರಃ" (ಋ. ಸಂ. I-100-4) ಎಂದರೆ "ಸಂಚರಿಸುವವರಲ್ಲೆಲ್ಲಾ ಬಹುವೇಗವಾಗಿ ಸಂಚರಿಸತಕ್ಕವರು, ಶೀಘ್ರಗತಿಯುಳ್ಳವರು," ಎಂಬುದಾಗಿ, 'ಆಂಗಿರಸ' ಶಬ್ದಕ್ಕೆ ಅರ್ಥಮಾಡಿದ್ದಾರೆ. ಶ್ರೀಯಾಸ್ಕರು ನಿರುಕ್ತದಲ್ಲಿ (III-17). "ಅಂಗಾರೇಷು ಅಂಗಿರಾಃ, ಅಂಗಾರಾಃ, ಅಂಕನಾಃ, ಅಂಚನಾಃ" ಎಂದು ಅರ್ಥ ಮಾಡಿದ್ದಾರೆ.

ಇಲ್ಲಿ ಒಂದು ಪೌರಾಣಿಕ ಇತಿಹಾಸವೂ ಇದೆ. ಆಂಗಿರಸರ ಉತ್ಪತ್ತಿಗೆ ಇದು ಸಂಬಂಧಿಸಿದೆ. ಬ್ರಹ್ಮದೇವನ ರೇತಸ್ಸಿನಿಂದ ಇವರು ಉತ್ಪನ್ನರಾದವರು. ಅದು ಪ್ರಜ್ವಲಿತವಾಗಿ 'ಕೆಂಡ'ದಂತೆ ಉರಿಯುತ್ತಿದ್ದಾಗ ಮೊದಲು ಆದಿತ್ಯನೂ ನಂತರ ಆಂಗಿರಸರೂ ಉತ್ಪತ್ತಿಯಾದರಂತೆ. ಅಗ್ನಿಗೂ ಅಂಗಿರಃ ಎಂಬ ಹೆಸರಿದೆ. ಇಟ್ಟ ಜಾಗದಲ್ಲಿ ಗುರುತನ್ನು ಉಂಟು ಮಾಡುವುದರಿಂದ (ಅಂಕ) ಅಗ್ನಿಗೆ ಇದು ಸಾರ್ಥಕವಾದ ಹೆಸರು. ಆಂಗಿರಸ ಋಷಿಗಳು ಎಂದೆಂದೂ ಮರೆಯಲ್ಪಡದೇ ನಮ್ಮ ವ್ಯಕ್ತಿತ್ವದಲ್ಲಿ ತಮ್ಮ ಗುರುತನ್ನು ಇಟ್ಟು ಹೋದವರು ಎಂಬ ವಿಶಾಲಾರ್ಥದ ಹಿನ್ನೆಲೆಯಲ್ಲಿ ಅವರಿಗೂ ಈ ಹೆಸರು ಬಂದಿರುವಂತೆ ತೋರುತ್ತದೆ. ಐತರೇಯ ಬ್ರಾಹ್ಮಣದಲ್ಲಿಯೂ "ಯೇ ಅಂಗಾರಾ ಆಸನ್ ತೇ ಆಂಗಿರಸೋ ಅಭವನ್"—ಯಾರು "ಕೆಂಡಗಳಾಗಿದ್ದಾರೊ ಅವರೇ ಆಂಗೀರಸರಾದರು." ಎಂದು (III–34) ಹೇಳಲ್ಪಟ್ಟಿದೆ. ಇಂತಹ ವ್ಯವಹಾರಗಳು ವೇದವಾಙ್ಮಯದಲ್ಲಿ ಆಂಗಿರಸರ ಬಗೆಗೆ ಆದ್ಯಂತವಾಗಿ ಬಂದಿರುವುದನ್ನು ನೋಡಬಹುದು. ಛಾಂದೋಗ್ಯೋಪನಿಷತ್ತಿನಲ್ಲಿಯೂ "ತಗ್ಂಹ ಆಂಗೀರಾ ಉದ್ಗೀಥ ಉಪಾಸಾಂ ಚಕ್ರೇ ಏತಮು ಏವ ಆಂಗಿರಸಂ ಮನ್ಯಂತೇ ಅಂಗಾನಾಗ್ಂ ಹಿ ಏಷರಸಃ" ಎಂದು ಹೇಳಿದೆ. (I–2–10). ಎಂದರೆ ಶರೀರದ ಅಂಗಗಳು ಪ್ರಾಣಾಧೀನವಾದ ಸ್ಥಿತಿಯನ್ನು ಹೊಂದಿರುವುದರಿಂದ ಮುಖ್ಯ ಪ್ರಾಣವೇ 'ಅಂಗರಸವಾಗಿ' ಆಂಗೀರಸನೆಂದು ಕರೆಯಲ್ಪಡುತ್ತದೆ ಎಂದರ್ಥ. ಹೀಗೆ ಜ್ಞಾನವನ್ನು ಕತ್ತಲೆಯಲ್ಲಿ ಕೂಡಿ ಹಾಕುವ ಪಣಿಗಳೆಂಬ ಶಕ್ತಿಗಳು ನಮ್ಮಲ್ಲಿರುವಂತೆಯೇ ಅವುಗಳನ್ನು ನಿಗ್ರಹಿಸಿ ಜ್ಞಾನ ದೀಪವನ್ನು ಜಾಜ್ವಲ್ಯಗೊಳಿಸುವ ಆಂಗಿರಸರೂ ನಮ್ಮಲ್ಲಿಯೇ ಸರ್ವದಾ ಇರುತ್ತಾರೆಂದು ಇಲ್ಲಿ ಸ್ಪಷ್ಟವಾಗಿದೆ. ಜ್ಞಾನವನ್ನು ಇವರು ಸಂರಕ್ಷಿಸಲು ಆಗಾಗ ಮಾಡಿದ ಪ್ರಯತ್ನಗಳು ಜಗತ್ಪ್ರಸಿದ್ಧವಾಗಿವೆ. ನಾನಾ ಪ್ರಕಾರಗಳಲ್ಲಿ ವೇದಗಳಲ್ಲಿ ಕೊಂಡಾಡಲ್ಪಡುತ್ತವೆ, ಉಪನಯನ ಕಾಲದಲ್ಲಿ ವಟುವು 'ತನಗೆ ಮೇಧಾಶಕ್ತಿ ಉಂಟಾಗಲಿ' ಎಂದು ಪ್ರಾರ್ಥಿಸುವ ಮಂತ್ರದಲ್ಲಿ ಮೊದಲು ತನಗೆ 'ಆಂಗೀರಸರಂತೆ ಮೇಧಾಶಕ್ತಿ ಉಂಟಾಗಲಿ'

ಮೇಧಾಂ ಮಹ್ಯಮಂಗಿರಸೋ ಮೇಧಾಗ್ಂ ಸಪ್ತರ್ಷಯೋದದುಃ ।
ಮೇಧಾಂ ಮಹ್ಯಂ ಪ್ರಜಾಪತಿಃ ಮೇಧಾಮಗ್ನಿರ್ದಧಾತುಮೇ ॥

ಎಂದು ಪ್ರಾರ್ಥಿಸುತ್ತಾನೆ. (ಮಂ. ಪ್ರ. II-4-6). ಅಂದರೆ, ಇದೇ ಸಾಲಿನಲ್ಲಿ ಮುಂದೆ ಸಪ್ತಋಷಿಗಳನ್ನೂ, ಪ್ರಜಾಪತಿಯನ್ನೂ, ಅಗ್ನಿಯನ್ನೂ ಕೂಡಿಸಿದ್ದರೂ, ಅಂಗಿರಸರಿಗೇ ಮೊದಲ ಸ್ಥಾನ ಕೊಟ್ಟಿರುವುದು ಗಮನೀಯ. ಹೀಗೆ ಜಗತ್ಪ್ರಖ್ಯಾತರಾದ ಮೇಧಾವಿಗಳು ಇವರು. ಮನುಸ್ಮೃತಿಯಲ್ಲಿಯೂ (II-151) ಆಚಾರ್ಯನ ಶ್ರೇಷ್ಠತ್ವವನ್ನು ಅದು ವಯಸ್ಸನ್ನಲ್ಲದೆ, ಜ್ಞಾನವನ್ನೇ ಅವಲಂಬಿಸಿರುವುದೆಂದು ನಿರ್ಣಯಿಸುವ ಪ್ರಸಂಗದಲ್ಲಿ—

ಅಧ್ಯಾಪಯಾಮಾಸ ಪಿತೄನ್-ಶಿಶುರಾಂಗಿರಸಃ ಕವಿಃ ।
ಪುತ್ರಕಾ ಇತಿ ಹೋವಾಚ-ಜ್ಞಾನೇನ ಪರಿಗೃಹ್ಯ ತಾನ್ ॥

ಎಂದು ಹೇಳಿದೆ. ಅಂಗಿರಸರು ವಯಸ್ಸಿನಲ್ಲಿ ಶಿಶುವಾಗಿದ್ದಾಗಲೇ ಕವಿಗಳಾಗಿ, ಋಷಿಗಳಾಗಿ, ಬ್ರಹ್ಮ ಸಾಕ್ಷಾತ್ಕಾರವನ್ನು ಪಡೆದು ತನಗಿಂತ ವಯಸ್ಸಾದ ತನ್ನ ಚಿಕ್ಕಪ್ಪ ಮತ್ತು ಅವರ ಮಕ್ಕಳು ಮೊದಲಾದ ಸಕಲ ಜ್ಞಾತಿಗಳಿಗೂ ಆಚಾರ್ಯನಾಗಿ, ಅವರನ್ನು ಶಿಷ್ಯರೆಂದೇ ಪರಿಗ್ರಹಿಸಿ, ಆಗಾಗ ಉಪದೇಶ ಕಾಲದಲ್ಲಿ ಅವರನ್ನು "ಪುತ್ರಕಾಃ", ಮಕ್ಕಳೇ" ಎಂದು ಸಂಬೋಧಿಸುತ್ತಿದ್ದರಂತೆ! ಹೀಗೆ ವೇದ ವಾಙ್ಮಯದಲ್ಲೆಲ್ಲ ಅಂಗಿರಸರ ಜ್ಞಾನ ಪರಾಕಾಷ್ಠೆಯೂ ಅತಿಮಾನುಷಜ್ಞಾನ ಸಾಮರ್ಥ್ಯವೂ ಕೊಂಡಾಡಲ್ಪಟ್ಟಿರುವುದಲ್ಲದೇ ಶ್ರುತಿ, ಇತಿಹಾಸ ಪುರಾಣಗಳಲ್ಲಿಯೂ ಇವರ ನೆನಪು ಎಂದೆಂದೂ ಉಳಿಯುವಂತೆ ಚಿರಸ್ಮರಣೀಯವಾಗಿದೆ.

## ೧೪. ನಾಭಾನೇದಿಷ್ಠನೆಂಬ ಮನುಪುತ್ರನ ವೃತ್ತಾಂತ

ಋಕ್ ಸಂಹಿತೆಯ ಹತ್ತನೇ ಮಂಡಲದ ೬೨ನೇ ಸೂಕ್ತದಲ್ಲಿ ಈ ಅಂಗಿರಸರಿಗೆ ಮುಖ್ಯವಾದ ಕೆಲವು ಸ್ತೋತ್ರಗಳು ಉದ್ದೇಶಿಸಲ್ಪಟ್ಟಿವೆ :

ಯ ಉದಾಜನ್ ಪಿತರೋ ಗೋಮಯಂ ವಸು
ಋತೇನಾಭಿಂದನ್ ಪರಿವತ್ಸರೇ ವಲಂ ।
ದೀರ್ಘಾಯುತ್ವಂ ಅಂಗಿರಸೋ ವೋ ಅಸ್ತು ಪ್ರತಿ ಗೃಭ್ಣೀತ
ಮಾನವಂ ಸುಮೇಧಸಃ ॥ ೨ ॥

ಯ ಋತೇನ ಸೂರ್ಯ ಮಾರೋಹಯನ್ ದಿವ್ಯಪ್ರಥಯನ್
ಪೃಥಿವೀಂ ಮಾತರಂ ವಿ।
ಸುಪ್ರಜಾಸ್ತ್ವಮಂಗಿರಸೋ ವೋ ಅಸ್ತು ಪ್ರತಿಗೃಭ್ಣೀತ
ಮಾನವಂ ಸುಮೇಧಸಃ ॥ ೩ ॥

ವಿರೂಪಾಸ ಇ ದೃಷಯಸ್ತ ಇದ್ಗಂಭೀರವೇಪಸಃ।
ತೇ ಅಂಗಿರಸಃ ಸೂನವಸ್ತೇ ಅಗ್ನೇಃ ಪರಿಜಜ್ಞಿರೇ ॥ ೫ ॥

ಯೇ ಅಗ್ನೇಃ ಪರಿಜಜ್ಞಿರೇ ವಿರೂಪಾಸೋ ದಿವಸ್ಪರಿ।
ನವಗ್ವೋನು ದಶಗ್ವೋ ಅಂಗಿರಸ್ತಮಃ ಸಚಾ ದೇವೇಷು
ಮಂಹತೇ ॥ ೬ ॥

"ಹೇ ಆಂಗಿರಸರೇ ನೀವು ನಮಗೆ ಹಿರಿಯರು. ಪಿತೃವತ್ ಪೂಜ್ಯರು, ಪಣಿಗಳಿಂದ 'ಗೋ'ವುಗಳನ್ನು ಬಿಡಿಸಿ, ಪಣಿಗಳ ಒಡೆಯನಾದ ವಲನೆಂಬ ರಾಕ್ಷಸನನ್ನು ನಾಶಮಾಡಿ, ಪರ್ವತ ಪ್ರದೇಶದಿಂದ 'ಗೋವುಗಳನ್ನು' ಕೆಳಗೆ ಇಳಿಸಿದಿರಿ; ಒಂದು ಸಂವತ್ಸರ ಕಾಲ ಸತ್ರಯಾಗವನ್ನು ನಡೆಸಿದಿರಿ, ನಿಮಗೆ ದೀರ್ಘಾಯುಷ್ಯವುಂಟಾಗಲಿ. ನಿಮ್ಮ ಋತ–ಸತ್ಯ ಬಲದಿಂದ ಅಂತರಿಕ್ಷ ನಲ್ಲಿ ಸೂರ್ಯನನ್ನು ಸ್ಥಾಪಿಸಿದ್ದೀರಿ; ಸಕಲ ಲೋಕಮಾತೆಯಾದ ಪೃಥ್ವಿ ಯನ್ನು ಸಾರ್ಥಕವಾಗಿ ಕೀರ್ತಿವಂತಳನ್ನಾಗಿ ಮಾಡಿದ್ದೀರಿ; ನಿಮ್ಮ ಸಂತತಿಯು ನಿರಂತರವಾಗಿ ಮುಂದೆ ಸಾಗಲಿ. ಹೇ ಅಗ್ನಿ ಪುತ್ರರೇ! ಲೋಕದಲ್ಲಿ ಎಷ್ಟೋ ಋಷಿಗಳು ವರ್ಣ, ರೂಪ, ಆಕಾರಗಳಲ್ಲಿ, ವಿಧವಿಧವಾಗಿರುತ್ತಾರೆ. ನೀವಾದರೆ ನಿಮ್ಮದೇ ರೂಪವನ್ನುಳಿಸಿಕೊಂಡು ಅನ್ವರ್ಥವಾಗಿ, ಅಗ್ನಿಪುತ್ರ ರಾಗಿದ್ದೀರಿ; ನಿಮ್ಮಲ್ಲಿ ಕೆಲವರು, ಒಂದು ವರ್ಷದ ಕಾಲ ಮಾಡಬೇಕಾದ ಯಜ್ಞವನ್ನು ಒಂಭತ್ತೇ ತಿಂಗಳಲ್ಲಿಯೂ ಕೆಲವರು ಹತ್ತೇ ತಿಂಗಳಲ್ಲಿಯೂ ನಡೆಸಿ, ನವಗ್ವಾಃ ದಶಗ್ವಾಃ ಎಂದು ಖ್ಯಾತಿ ಪಡೆದಿದ್ದೀರಿ."

ಈ ಪ್ರಕರಣದಲ್ಲಿ ಈ ಸ್ತುತಿಯನ್ನು ಮಾಡಿದ ಋಷಿಯು ನಾಭಾನೇ ದಿಷ್ಠನೆಂಬ ಮನುಪುತ್ರನಾದ ಸಾವರ್ಣಿ ಮಾನವನು. ಇದರ ಪ್ರಸಂಗವೂ ಬಹು ಮಾರ್ಮಿಕವಾಗಿದೆ. [ವಿಸ್ತಾರಗಳಿಗೆ ಐತರೇಯಬ್ರಾಹ್ಮಣ (22–14)

ಮತ್ತು ತೈತ್ತಿರೀಯ ಸಂಹಿತೆ (III-I-9,-4-7) ಯನ್ನು ನೋಡಬಹುದು.]
ಹಿಂದೆ ಮನುವು ತನ್ನ ಮಕ್ಕಳಿಗೆ ತನ್ನ ಐಶ್ವರ್ಯವನ್ನೆಲ್ಲಾ ಹಂಚಿಕೊಟ್ಟ ಕಾಲದಲ್ಲಿ ಕೊನೆಯವನಾದ ನಾಭಾನೇಧಿಷ್ಠನು ಅಲ್ಲಿರಲಿಲ್ಲ. ಗುರುಕುಲವಾಸಿಯಾಗಿದ್ದ ಅವನನ್ನು ಬಿಟ್ಟು ಉಳಿದ ಸಹೋದರರೇ ಅದನ್ನೆಲ್ಲ ಹಂಚಿಕೊಂಡರು. ಕಾಲಾನಂತರ ಗುರುಕುಲದಿಂದ ಹಿಂದಿರುಗಿದ ಅವನು ತಂದೆಯನ್ನು ತನಗೇಕೆ ಆಸ್ತಿಯ ಭಾಗವನ್ನು ಉಳಿಸಲಿಲ್ಲ ? ಎಂದು ಕೇಳಲಾಗಿ, ಮನುವು ತಾನು ಅವನಿಗೂ ಆಸ್ತಿಯನ್ನು ಉಳಿಸಿ ಇಟ್ಟಿರುವುದಾಗಿಯೂ ಅದು ಅಂಗಿರಸರೆಂಬ ಋಷಿಗಳು ತಮ್ಮ ಯಜ್ಞಕ್ಕಾಗಿ ಸಂಗ್ರಹಿಸಿ, ಉಳಿದಿರುವ 'ಗೋವುಗಳೇ' ಆಗಿವೆಯೆಂದೂ ತಿಳಿಸಿ ಅವರನ್ನು ಪ್ರಸನ್ನ ಮಾಡಿಕೊಳ್ಳಲು ಈ ಮೇಲಿನ ಮಂತ್ರಗಳನ್ನು ಉಪದೇಶಿಸಿದನು.

ನಾಭಾನೇದಿಷ್ಠನು ಅದರಂತೆಯೇ ಹೋಗಿ, ಅವರ ಯಾಗ ಪೂರಣದಲ್ಲಿ ಸಹಕರಿಸಿ, ಸಹಸ್ರ ಗೋವುಗಳನ್ನು ಪಡೆದು ಹಿಂದಿರುಗುತ್ತಿದ್ದಾಗ ರುದ್ರನು, ಮಲಿನಾಂಬರಧಾರಿಯಾಗಿ, ಅವನನ್ನು ಅಡ್ಡಗಟ್ಟಿ, ಅವು ತನಗೆ ಸೇರತಕ್ಕವೆನ್ನಲು, ಮನುಪುತ್ರನು ಸಂಶಯ ಪರಿಹಾರಾರ್ಥವಾಗಿ ತಂದೆಯನ್ನೇ ಕೇಳಿ ಬರಲು, ಅವನೂ ಅವು ರುದ್ರನಿಗೇ ಸೇರತಕ್ಕವೆನ್ನಲು, ಮನುಪುತ್ರನು ಅದರಂತೆ ಅವುಗಳನ್ನು ರುದ್ರನಿಗೇ ಕೊಟ್ಟು, ಹೊರಡುವಷ್ಟರಲ್ಲಿ, ರುದ್ರನು ಬಾಲಕನ ಸತ್ಯಕ್ಕೆ ಮೆಚ್ಚಿ ಆ ಗೋವುಗಳನ್ನು ಅವನಿಗೇ ತಿರುಗಿ ಕೊಟ್ಟನೆಂದು ವೃತ್ತಾಂತ. ಇಲ್ಲಿ ಶ್ರುತಿಯು ಹೀಗೆ ಪ್ರಶಂಸಿಸಿದೆ: "ವಿದ್ವಾಂಸನು ಸರ್ವದಾ ಸತ್ಯವನ್ನೇ ನುಡಿಯಬೇಕು. ಈ ಮಂತ್ರವು ಸಹಸ್ರ ಫಲವನ್ನು ಕೊಡುವುದರಿಂದ ಇದಕ್ಕೆ ಸಹಸ್ರಸನಿಃ ಎಂದು ಪ್ರಸಿದ್ಧಿಯುಂಟು. ಈ ಮಂತ್ರವನ್ನೂ, ಮಂತ್ರಾರ್ಥವನ್ನೂ ತಿಳಿದು ಯಾಗಾನುಷ್ಠಾನ ಮಾಡುವ ಬ್ರಹ್ಮನಿಷ್ಠನು ಇಹ–ಪರಗಳಲ್ಲಿ ಶಾಶ್ವತ ಸುಖವನ್ನು ಪಡೆಯುವನು." (ಐ. ಬ್ರಾ. 22-14). ಅಂದರೆ, ಮನುವಿನ ಪರಂಪರೆಯಲ್ಲಿಯೂ ಆಂಗಿರಸರ ಸಕಲ ಸಂಪತ್ತಾದ 'ಗೋವುಗಳೇ' ಪಾರಂಪರ್ಯವಾದ ಆಸ್ತಿಯಾಗಿ ಕಾಪಾಡಿಕೊಂಡು ಬರಲ್ಪಟ್ಟಿರುವುದು ಇಲ್ಲಿ ಹೇಳಲ್ಪಟ್ಟಿದೆ.

# ೧೫. 'ಘೋರ' ಆಂಗಿರಸರು

ಆಂಗಿರಸರ ಪರಂಪರೆಯ ದೊಡ್ಡತನಕ್ಕೆ ಇನ್ನೂ ಒಂದು ವೇದಪ್ರಸಿದ್ಧವಾದ ನಿದರ್ಶನವನ್ನು ಕೊಡಬಹುದು. ಛಾಂದೋಗ್ಯ ಉಪನಿಷತ್ತಿನ ಮೂರನೆಯ ಪ್ರಪಾಠಕದ ಹದಿನೇಳನೆಯ ಖಂಡದಲ್ಲಿ ಆರನೆಯ ಅನುವಾಕದಲ್ಲಿ ಆಂಗಿರಸ ವಂಶೋದ್ಭವರಾದ 'ಘೋರ'ರೆಂಬ ಋಷಿಗಳು ದೇವಕೀಪುತ್ರನಾದ ಕೃಷ್ಣನಿಗೆ ಪುರುಷವಿದ್ಯೆಯೆಂಬ ಮಹಾವಿದ್ಯೆಯನ್ನು ಉಪದೇಶಿಸಿದರೆಂದು ಉಕ್ತವಾಗಿದೆ. ಈ ಘೋರ ಆಂಗಿರಸರು ಇತರ ವೇದಗಳಲ್ಲಿಯೂ, ಕಲ್ಪಸೂತ್ರಗಳಲ್ಲಿಯೂ ಮಹಾಭಾರತದಲ್ಲಿಯೂ ಪ್ರಸ್ತಾಪಿಸಲ್ಪಟ್ಟಿರುವುದಲ್ಲದೆ, **'ಪೂಜೆಗೆ ಅರ್ಹರು'** ಎಂಬ ಅರ್ಥದಲ್ಲಿ **'ಘೋರ'**ರೆಂದು ವ್ಯವಹರಿಸಲ್ಪಡುತ್ತಾರೆ. ಮಾನವ ಶರೀರದಲ್ಲಿರುವ ಅಂಶಗಳನ್ನೇ ಯಜ್ಞಕ್ಕೆ ಸಾಧನಗಳನ್ನಾಗಿ ಉಪದೇಶಿಸುವುದು ಮತ್ತು ಭಗವಂತನಿಗೆ ಆತ್ಮಾತ್ಮೀಯ ಸಮರ್ಪಣವನ್ನೇ ಹವಿಸ್ಸನ್ನಾಗಿ ವರ್ಣಿಸಿರುವ ಈ **ಪುರುಷವಿದ್ಯೆಯು** ಕೃಷ್ಣ ಯಜುರ್ವೇದದ ತೈತ್ತಿರೀಯೋಪನಿಷತ್ತಿನ (ನಾರಾಯಣೀಯದ) ಕೊನೆಯಲ್ಲಿಯೂ ಉಪದೇಶಿಸಲ್ಪಟ್ಟು, ಬ್ರಹ್ಮಸೂತ್ರದ ಮೂರನೇ ಅಧ್ಯಾಯದಲ್ಲಿ ಒಂದು ಪ್ರಸಿದ್ಧ ಅಧಿಕರಣದಲ್ಲಿಯೂ ಚರ್ಚಿಸಲ್ಪಟ್ಟಿದೆ. ಪ್ರಕೃತ ಛಾಂದೋಗ್ಯ ಉಪನಿಷತ್ತಿನ ಪ್ರಕರಣದಲ್ಲಿ ಇಡೀ ಆಯುಷ್ಯವನ್ನೇ ಯಜ್ಞವನ್ನಾಗಿ ವರ್ಣಿಸಿ ಇಂತಹ ಯಜ್ಞದೀಕ್ಷಿತನಿಗೆ ಹಸಿವು, ಬಾಯಾರಿಕೆ, ಆನಂದದ ಬಯಕೆಗಳೇ ದೀಕ್ಷೆಗಳೆಂದೂ, ಇಂತಹವನು ತಿನ್ನುವುದೆಲ್ಲ, ಕುಡಿಯುವುದೆಲ್ಲ, ಆಹಾರನಿಯತಿಯೊಳಗೇ ಬರುವುದೆಂದೂ. ಇವನ ತಪಸ್ಸು, ದಾನ, ಆರ್ಜವಭಾವ, ಸತ್ಯವಚನಗಳೇ ಈ ಯಜ್ಞಕ್ಕೆ ದಕ್ಷಿಣೆಗಳೆಂದೂ ಮುಂತಾಗಿ ಹೇಳಲ್ಪಟ್ಟಿವೆ. **(ಅಥ ಯತ್ ತಪೋ ದಾನಂ ಆರ್ಜವಂ, ಅಹಿಂಸಾ, ಸತ್ಯವಚನಂ ಇತಿ ತಾ ಅಸ್ಯ ದಕ್ಷಿಣಾಃ).** ಪರಾತ್ಪರನಾದ ಭಗವಂತನೇ ಕೃಷ್ಣಾವತಾರ ಕಾಲದಲ್ಲಿ ಆಂಗಿರಸರ ಶಿಷ್ಯನಾದನೆಂದರೆ ಇವರ ಮಹತಿಯನ್ನು ಎಷ್ಟೆಂದು ವರ್ಣಿಸಲು ಸಾಧ್ಯ ?

ಶ್ರೀಮದ್ಭಾಗವತದ ಸುದಾಮೋಪಾಖ್ಯಾನದಲ್ಲಿ (X-80) ಭಗವಂತನು ತನ್ನ ಈ ಗುರುವನ್ನು ಕೊಂಡಾಡುವ ಪ್ರಸಂಗ ಅತ್ಯಂತ ಹೃದಯ

ಸ್ಫರ್ಶಿಯಾಗಿದೆ. ಕೃಷ್ಣಸುದಾಮರು ಗುರುವಿಗೆ ಶುಶ್ರೂಷೆ ಮಾಡುತ್ತಾ ಕಟ್ಟಿಗೆಯನ್ನು ತರಲು ಕಾಡಿಗೆ ಹೋಗಿದ್ದಾಗ, ಸಂಜೆ ಬಲವಾದ ಗಾಳಿಯೂ, ಮಳೆಯೂ ಅನಿರೀಕ್ಷಿತವಾಗಿ ಹಿಡಿದು, ದಿಕ್ಕುಗಾಣದೇ ಕೈ ಕೈ ಹಿಡಿದು, ಕಟ್ಟಿಗೆಯ ಭಾರವನ್ನು ಹೊತ್ತು, (ಪರಸ್ಪರಂ ವನೇ ಗೃಹೀತಹಸ್ತಾಃ) ನಡೆದು ಬರುವಷ್ಟರಲ್ಲಿ ರಾತ್ರಿ ಕಳೆದು ಸೂರ್ಯೋದಯವಾಗಲು, ಆ ಹೊತ್ತಿಗೆ ಗುರುಗಳೂ ಶಿಷ್ಯರನ್ನು ಹುಡುಕುತ್ತಾ ಬಂದು ಅವರನು ಕಂಡು ವಾತ್ಸಲ್ಯದಿಂದ ಹೇಳಿದ ಮಾತುಗಳಲ್ಲಿಯೂ ಒಂದು ದಿವ್ಯ ಸಂದೇಶವಿದೆ:

ಅಹೋ ಹೇ ಪುತ್ರಕಾ ಯೂಯಂ ಅಸ್ಮದರ್ಥೇಽತಿ ದುಃಖಿತಾಃ ।
ಆತ್ಮಾ ವೈ ಪ್ರಾಣಿನಾಂ ಪ್ರೇಷ್ಠಃ ತಮನಾದೃತ್ಯ ಮತ್ಪರಾಃ ॥
ಏತದೇವ ಹಿ ಸಚ್ಛಿಷ್ಯೈಃ ಕರ್ತವ್ಯಂ ಗುರುನಿಷ್ಕೃತಂ
ಯದ್ವೈ ವಿಶುದ್ಧ ಭಾವೇನ ಸರ್ವಾರ್ಥಾತ್ಮಾರ್ಪಣಂ ಗುರೌ ॥
ತುಷ್ಟೋಽಹಂ ಭೋ ದ್ವಿಜಶ್ರೇಷ್ಠಾಃ ಸತ್ಯಾಃ ಸನ್ತು ಮನೋರಥಾಃ ।
ಛಂದಾಂಸ್ಯಯಾತಯಾಮಾನಿ ಭವಂತ್ವಿಹ ಪರತ್ರ ಚ ॥ (೪೦–೪೨)

"ಎಲೆ ಮಕ್ಕಳಿರಾ ! ನಮ್ಮ ಕೆಲಸದಲ್ಲಿ ತೊಡಗಿ ನಿಮಗೆ ಈ ಶ್ರಮವಾಯಿತು. ಪ್ರಾಣಿಗಳಿಗೆ ತಮ್ಮ ತಮ್ಮ ಪ್ರಾಣಗಳೇ ಪ್ರಿಯತಮವಾದುವು. ನೀವು ಆ ಪ್ರಾಣಗಳನ್ನೂ ಅನಾದರಿಸಿ, ನಮ್ಮಲ್ಲಿ ಹೆಚ್ಚು ಪ್ರೀತಿಯನ್ನು ತೋರಿಸಿರುವಿರಿ. ಸಚ್ಛಿಷ್ಯರು ಮಾಡಬೇಕಾದ ಕರ್ತವ್ಯ ಇದೇ ಅಲ್ಲವೆ ! ಗುರುಸೇವೆಯೆಂಬುದು, ವಿಶುದ್ಧಭಾವದಿಂದ, ಸಂಪೂರ್ಣ ಆತ್ಮಸಮರ್ಪಣ ಭಾವದಿಂದ ಗುರುವಿನಲ್ಲಿ ಶಿಷ್ಯನು ತನ್ನನ್ನೇ ಅರ್ಪಿಸಿಕೊಳ್ಳತಕ್ಕದ್ದು. ಎಲೈ ದ್ವಿಜರೇ ! ನಿಮ್ಮ ಸೇವೆಯಿಂದ ಸಂತುಷ್ಟನಾಗಿದ್ದೇನೆ. ನಿಮ್ಮ ಮನೋರಥಗಳು ಸತ್ಯವಾಗಲಿ. ನನ್ನಲ್ಲಿ ನೀವು ನಡೆಸಿದ ಅಧ್ಯಯನವು ಸಾರವತ್ತಾಗಿ ಸಫಲವಾಗಲಿ. ಇಹ–ಪರಗಳಲ್ಲಿ ಸಾರ್ಥಕವಾಗಲಿ."

ಇಲ್ಲಿ ಶರಣಾಗತಿಧರ್ಮದ ಪ್ರಭೇದವಾದ ಆಚಾರ್ಯಪ್ರಪತ್ತಿ ಧರ್ಮವು ಉಪದೇಶಿಸಲ್ಪಟ್ಟಿರುವುದು ಗಮನೀಯ. ಭಗವಂತನೂ ಇದೇ ಸಂದೇಶವನ್ನೇ ಭಗವದ್ಗೀತೆಯಲ್ಲಿ ಕೊಟ್ಟಿರುವುದಲ್ಲದೇ, ಇಲ್ಲಿಯೂ ಸ್ಪಷ್ಟವಾಗಿಯೇ ನೀಡಿದ್ದಾನೆ :

ನಾಹಂ ಇಜ್ಯಾ ಪ್ರಜಾತಿಭ್ಯಾಂ ತಪಸಾ ಉಪಶಮೇನ ವಾ ।
ತುಷ್ಯೇಯಂ ಸರ್ವಭೂತಾತ್ಮಾ ಗುರುಶುಶ್ರೂಷಯಾ
ಯಥಾ ॥ (೪೪)

"ಗುರುಶುಶ್ರೂಷೆಯಿಂದ, ಸರ್ವಭೂತಾತ್ಮನಾದ ನಾನು ತೃಪ್ತನಾಗುವ ಪಂಚ ಮಹಾಯಜ್ಞಗಳಿಂದಾಗಲೀ, ಕುಲವೃದ್ಧಿ ಕಾರಕವಾದ ಸತ್ಸಂತಾನ ಪ್ರಾಪ್ತಿಯಿಂದಾಗಲೀ, ತಪಸ್ಸು, ದಮಶಮಾದಿ ಗುಣಸಂಪಾದನೆಯಿಂದಾಗಲೀ ತೃಪ್ತಿಹೊಂದಲಾರೆನು."

ಗುರೋರನುಗ್ರಹೇಣೈವ ಪುಮಾನ್ ಪೂರ್ಣಃ
ಪ್ರಶಾಂತಯೇ ॥ (೪೫)

"ಗುರುವಿನ ಅನುಗ್ರಹ ಒಂದರಿಂದ ಮಾತ್ರವೇ ಪುರುಷನು ಶಾಶ್ವತ ಶಾಂತಿ ಸ್ವರೂಪವಾದ ಮೋಕ್ಷಕ್ಕೂ ಪೂರ್ಣತ್ವಕ್ಕೂ ಅರ್ಹನಾಗುವನು." ಆತ್ಮಾ ರ್ಪಣರೂಪವಾದ ಪುರುಷವಿದ್ಯೆಯು ಆಚಾರ್ಯಪ್ರಪತ್ತಿಯನ್ನು ಒ ಗೊಂಡಿದೆಯೆಂದು ಇಲ್ಲಿ ಉಕ್ತವಾಗಿರುವುದು ಗಮನೀಯ. ಇವಲ್ಲದೆ ಲೌಕಿಕ ಮರ್ಯಾದೆಯನ್ನು ಅನುಸರಿಸಿ ಶಿಷ್ಯಭಾವದಿಂದ ಭಗವಂತನೂ ಈ ಗುರೂಪದೇಶವನ್ನೇ ತಾನೂ ಅನುಷ್ಠಾನ ಮಾಡಿದುದಲ್ಲದೇ, ತನ್ನ ಶಿಷ್ಯರಾದ ಅರ್ಜುನ, ಉದ್ಧವ, ಮುಂತಾದವರಿಗೆ ಭಗವದ್ಗೀತೆಯಲ್ಲೂ ಶ್ರೀ ಭಾಗವತದ ಉದ್ಧವ ಗೀತೆಯಲ್ಲಿಯೂ ಸಾಂಗವಾಗಿ ಆದ್ಯಂತಾಗಿ ವಿವರಿಸಿರು ವುದರಿಂದ ಭಗವದ್ಗೀತೆಯೂ, ಭಾಗವತವೂ ಈ ದೃಷ್ಟಿಯಿಂದ ಆಂಗಿರಸರ ಜ್ಞಾನಪ್ರವಾಹವೇ ! ಇದೇ ಆಂಗಿರಸರು ಬಿಡಿಸಿ ತಂದ 'ಗೋವು'. ವೇದಗಳೇ 'ಗೋವು'ಗಳೆಂದೂ, ಹಾಲು ಕರೆಯುವವನೇ 'ಗೋಪಾಲನಾದ' ಭಗವಂತನೆಂದೂ ಗೀತಾ ಪ್ರಶಂಸೆಯಲ್ಲಿ ಹೇಳಿರುವುದು ಇದೇ ಅರ್ಥದಲ್ಲಿ. ಒಟ್ಟಿನಲ್ಲಿ ಹೇಗೆ ಹೇಗೆ ನೋಡಿದರೂ ವೈದಿಕ ಜ್ಞಾನ ಭಂಡಾರವನ್ನು ಸಂರಕ್ಷಿಸುವ ಮಹಾ ಪ್ರಯತ್ನದಲ್ಲಿ ಆಂಗಿರಸರ ಪಾತ್ರ ಪ್ರತಿ ವೈದಿಕನ ಮನಃ ಪಟಲದಲ್ಲಿ ಅವಿಸ್ಮರಣೀಯವಾಗಿ ಉಳಿಯುವಂತೆ, ಈ ಮೇಲಿನ ಆಂಗಿರಸ ಪ್ರಸ್ತಾಪಗಳು ಮಾಡಿರುತ್ತವೆ.

ಸ್ವಯಂ ಆಂಗಿರಸರೇ ದೇವತೆಗಳನ್ನು ಸ್ತುತಿಸಿ ಯಜ್ಞಾರ್ಥವಾಗಿ 'ಕಾಮಧೇನುವನ್ನು' ಪಡೆದರೆಂದೂ ಇದರಿಂದ ಅರ್ಯಮನೆಂಬ ಭಗವದಂಶ ಭೂತನಾದ ದೇವತೆಯೇ ಇವರಿಗಾಗಿ 'ಗೋಕ್ಷೀರ'ವನ್ನುಕರೆದುಕೊಟ್ಟನೆಂದೂ ಇರುವ ವೃತ್ತಾಂತವನ್ನು ಋಕ್ಸಂಹಿತೆಯ ಪ್ರಥಮ ಮಂಡಲದ ೧೩೯ನೆಯ ಸೂಕ್ತದ ಏಳನೇ ಮಂತ್ರದ ಭಾಷ್ಯದಲ್ಲಿ ಶ್ರೀ ಸಾಯಣರು ಸಂಗ್ರಹಿಸಿದ್ದಾರೆ. ಆಂಗಿರಸರು ವೈದಿಕರ ಸನಾತನ ಪಿತೃಗಳೆಂದೂ, ದೇವಪುತ್ರರೆಂದೂ, ದೇವತೆಗಳೊಡನೆಯೇ ಕೆಲವು ಕಡೆಗಳಲ್ಲಿ ಸ್ತುತರಾಗಿರುವುದೂ ಉಂಟು. ಅಡವಿಯಲ್ಲಿ ಅಡಗಿಕೊಂಡಿದ್ದ 'ಅಗ್ನಿಯನ್ನು' ಕಂಡು ಹಿಡಿದವರೇ ಇವರೆಂದೂ (ಋ. ಸಂ. (V–11–6) ಮತ್ತು ಯಾಗನಿಯಮಾವಳಿಯ ಪ್ರಥಮ ರಹಸ್ಯವನ್ನು ಕಂಡು ಹಿಡಿದವರೇ ಇವರೆಂದೂ (X–67–2), ಇಂದ್ರನೇ ಪ್ರತ್ಯೇಕವಾಗಿ ಇವರಿಗಾಗಿ, 'ಗೋಶಾಲೆ'ಗಳ ದ್ವಾರಗಳನ್ನು ತೆರೆದನೆಂದೂ (I–51–3) ಆಂಗಿರಸರ ಸ್ತುತಿಗಳಿಗೆ ಉಳಿದೆಲ್ಲ ಋಷಿಗಳ ಸ್ತುತಿಗಿಂತಲೂ ವೈಶಿಷ್ಟ್ಯ ಉಂಟೆಂದೂ (I–107–2) ತಮ್ಮ ಯಾಗಬಲದಿಂದಲೇ ಕಲ್ಲುಗಳನ್ನೂ ಬೆಟ್ಟಗಳನ್ನೂ ಸೀಳಿ, ಗುಹೆಗಳಲ್ಲಡಗಿದ್ದ 'ಗೋವುಗಳನ್ನು' ಬಿಡಿಸಿ, ಮುಕ್ತರಾದ 'ಗೋವು'ಗಳೊಡಗೂಡಿ ತಾವೂ ಗಟ್ಟಿಯಾಗಿ, ಕಿರುಚಿಕೊಂಡರೆಂದೂ (ವೇದ ಘೋಷ ಮಾಡಿದರೆಂದೂ), ಇತ್ಯಾದಿ ಅನೇಕ ಪ್ರಸ್ತಾಪಗಳು ವೇದ ವಾಙ್ಮಯದ ತುಂಬ ಎರಚಾಡಲ್ಪಟ್ಟಿವೆ.

ಇದೇ ವಂಶದಲ್ಲಿ ದೇವಗುರುವಾದ ಬೃಹಸ್ಪತಿಯೂ, ಭೃಗು, ಜಮದಗ್ನಿಯೂ, ಶೌನಕರೆಂಬ ಮಹಾಗೃಹಸ್ಥರೂ, ಚ್ಯವನರೂ, ವಾಲ್ಮೀಕಿ ಮಹರ್ಷಿಗಳೂ, ಸಾಂದೀಪನೀ ಗುರುಗಳೂ ಮುಂತಾದವರು ಜಗತ್ಪ್ರಸಿದ್ಧರು. ಇವರೆಲ್ಲರೂ ತಮ್ಮ ತಮ್ಮ ಕಾಲಗಳಲ್ಲಿ ಹರಡಿಕೊಂಡಿದ್ದ 'ಪಣಿ'ಗಳನ್ನು ನಿಗ್ರಹಿಸಿ 'ಗೋವು'ಗಳನ್ನು ಸೆರೆ ಬಿಡಿಸಿದರು ಎಂದು ಇತಿಹಾಸವೇ ತಿಳಿಸುತ್ತದೆ. ಈ ಸಮ್ಮ ಕಾಲದಲ್ಲಿ ಈ ಕೆಲಸ ಮುಂದುವರೆಯಬೇಕಾಗಿದೆ.

ಇಂತು ಚರಿತ್ರೆಯ ದೃಷ್ಟಿಯಿಂದ ನೋಡಿದರೂ, ಸಹ, 'ಗೋವು'ಗಳಿಗೂ 'ಪಣಿ'ಗಳಿಗೂ 'ಆಂಗಿರಸ'ರಿಗೂ ಸಾಂಕೇತಿಕ ಮಹತ್ವ ಇದ್ದೇ ಇದೆ. ಜ್ಞಾನಾರ್ಥಿಯಾದವನ ಅಂತರಂಗ ಜೀವನದಲ್ಲಂತೂ ಇವರೆಲ್ಲರೂ ನಿತ್ಯರೇ ಆಗಿದ್ದು 'ಗೋವು'ಗಳ ಸೆರೆ ಮತ್ತು ವಿಮೋಚನೆ ನಡೆಯುತ್ತಲೇ ಇದೆ.

## ೧೬. 'ಸರಮೆ'ಯು ಯಾರು? ಇವಳ ಕೆಲಸವೇನು?

ಈಗ ಮೇಲಿನ ಕಥೆಯಲ್ಲಿ 'ಸರಮೆ'ಯ ಪಾತ್ರದ ಸಾಂಕೇತಿಕ ಮಹತಿಯನ್ನು ತಿಳಿಯೋಣ.

ಶ್ರೀ ಸಾಯಣಾಚಾರ್ಯರು 'ಸರಮೆ' ಎಂಬ ಶಬ್ದಕ್ಕೆ "ಸರಮಾ ವಾಕ್ ದೇವಶುನೀ ವಾ" ಎಂದು ಅರ್ಥ ಮಾಡಿದ್ದಾರೆ. (V–46–8). ಅಂದರೆ 'ವಾಕ್' ಶಕ್ತಿಗೆ ಸರಮೆ ಎಂದು ಸಾಂಕೇತಿಕ ಅರ್ಥವೆಂಬ ಅಭಿಪ್ರಾಯ. ಯಾಸ್ಕರು ನಿರುಕ್ತದಲ್ಲಿ (XI-25). "ಸರಮಾ ಸರಣಾತ್" ಎಂದರೆ "ಶೀಘ್ರವಾಗಿ ನಡೆಯುವವಳು, ಸಂಚರಿಸುವವಳು" ಎಂದು ಅರ್ಥ ಮಾಡಿದ್ದಾರೆ. ವೇದ ಪ್ರಸಿದ್ಧವಾದ ಮಾಧ್ಯಮಿಕ ವಾಕ್ ತತ್ವವನ್ನು ನೈರುಕ್ತ ಪಕ್ಷದಲ್ಲೂ, ದೇವ ಶುನಿ ಎಂಬ ಅರ್ಥವನ್ನು ಐತಿಹಾಸಿಕ ಪಕ್ಷದಲ್ಲೂ ಗ್ರಹಿಸುವುದು ವಾಡಿಕೆ. ಹೀಗೆ ಸರಮೆಗೆ ಸಾಂಕೇತಿಕ ಅರ್ಥವು ಸ್ಪಷ್ಟವೂ, ಪ್ರಾಚೀನವೂ, ಸಂಪ್ರದಾಯಪರಿಗ್ರಹೀತವೂ ಆಗಿದೆ.

ಸರಮೆಯ ಬಗೆಗೆ ಇನ್ನಷ್ಟು ವಿವರಗಳನ್ನು ವೇದಗಳಿಂದಲೇ ಈಗ ಗ್ರಹಿಸೋಣ. ಮೇಲೆ ಉಕ್ತವಾದ ಒಂದು ಋಙ್ಮಂತ್ರದಲ್ಲಿ (V–46–8) ಸರಮೆಯ ಪ್ರಶಂಸೆಯನ್ನು ಹೀಗೆ ಮಾಡಲಾಗಿದೆ.

"ವಿಶ್ವೇ ಅಸ್ಯಾ ವ್ಯುಷಿ ಮಾಹಿನಾಯಾಃ
ಸಂಯದ್ಗೋಭಿರಂಗಿರಸೋ ನವಂತ ।
ಉತ್ಸ ಆಸಾಂ ಪರಮೇ ಸದಸ್ಥ ಋತಸ್ಯ ಪಥಾ ಸರಮಾ
ವಿದದ್ಗಾಃ ।"

"ಸಮಸ್ತ ಆಂಗಿರಸರೂ ಪೂಜ್ಯಳಾದ ಉಷೋದೇವಿಯ ಉದಯ ಕಾಲದಲ್ಲಿ ಗೋವುಗಳೊಡನೆ ಕೂಡಿಕೊಂಡರು. ಆಗ ಈ ಗೋವುಗಳ ಕ್ಷೀರ ಪ್ರವಾಹವೂ ಯಜ್ಞದ ಉತ್ಕೃಷ್ಟ ವೇದಿಕೆಯಲ್ಲಿ ಅರ್ಪಿತವಾಯಿತು. ಋತದ ದಾರಿಯಲ್ಲಿ ಸರಮೆಯು ಗೋವುಗಳನ್ನು ಕಂಡು ಹಿಡಿದು, ಪಡೆದಳು".

ಇಲ್ಲಿ 'ಗೋವು'ಗಳೆಂದರೆ ದಿವ್ಯಜ್ಞಾನವೆಂದೂ ಅವು 'ಗೋಚರಿಸುವ' ಕಾಲವೇ, 'ಜ್ಞಾನೋದಯ' ಕಾಲವೇ, ಉಷಃಕಾಲವೆಂದೂ, ಇದನ್ನು

ಆಂಗಿರಸರು ಪಡೆಯಲು 'ಸರಮೆ'ಯು ಕಾರಣವಾದಳು, ಈ 'ಸರಮೆಯು' ಋತಸತ್ಯದ ದಾರಿಯಲ್ಲಿ ಎಲ್ಲರಿಗಿಂತ ಮುಂದೆ ಶೀಘ್ರವಾಗಿ ನಡೆದು ಜ್ಞಾನರೂಪವಾದ ಗೋವುಗಳನ್ನು ಪತ್ತೆಹಚ್ಚಿದಳೆಂದೂ ಹೇಳಲ್ಪಟ್ಟಿದೆ. ಹೀಗೆ ಸರಮೆಯು ಋತಪಥ (ಸತ್ಯದದಾರಿ) ದಲ್ಲಿಯೇ ವೇಗವಾಗಿ ಸಂಚರಿಸ ತಕ್ಕವಳು ಮತ್ತು ಜ್ಞಾನದ ಗೂಢ ಪ್ರದೇಶವನ್ನು ಅವುಗಳ (ಶ್ರುತಿಪರಿಮಳ ದಿಂದಲೇ) ಸುವಾಸನೆಯಿಂದಲೇ ಎಷ್ಟೇ ದೂರದಲ್ಲಿದ್ದರೂ ಪತ್ತೆ ಹಚ್ಚ ತಕ್ಕವಳು.

ಇದರ ಹಿಂದಿನ ಮಂತ್ರದಲ್ಲಿಯೂ ಸರಮೆಯ ಇದೇ ಕಾರ್ಯವನ್ನು ವರ್ಣಿಸಲಾಗಿದೆ.

**"ಋತಂ ಯತೀ ಸರಮಾ ಗಾ ಅವಿಂದತ ವಿಶ್ವಾನಿ ಸತ್ಯಾ ಅಂಗಿ ರಾ: ಚಕಾರ"**

"ಸರಮೆಯು ಋತರೂಪವಾದ ಯಜ್ಞವನ್ನು ಹೊಂದಿ, ಪ್ರವೇಶಿಸಿ, (ಮುನ್ನುಗ್ಗಿ) ಗೋವುಗಳನ್ನು ಕಂಡುಹಿಡಿದಳು. ಹೀಗೆ ಆಂಗಿರಸರು ತಮ್ಮ ಎಲ್ಲ ಯಜ್ಞಗಳನ್ನೂ ಸತ್ಯವಾಗುವಂತೆ ಮಾಡಿಕೊಂಡರು."

ಇಲ್ಲಿಯೂ ಯಜ್ಞತತ್ತ್ವಕ್ಕೂ, ಋತ ಸತ್ಯಗಳ ಪ್ರಾಪ್ತಿಗೂ, ಸರಮೆಗೂ ಆಂಗಿರಸರ ಜ್ಞಾನತಪಸ್ಸಿದ್ಧಿಗೂ ಸರಮೆಗೂ ದಿವ್ಯ ಸಂಬಂಧವಿದೆ. ಶ್ರೀ ಸಾಯಣರು ಈ ಮಂತ್ರದ ಭಾಷ್ಯದಲ್ಲಿ "ಸರಮಾ–ಸರಣಶೀಲಾ ಸ್ತುತಿ ರೂಪಾವಾಕ್" ಎಂದು ಅರ್ಥಮಾಡಿದ್ದಾರೆ. ಸುಪ್ರಸಿದ್ಧವಾದ ವಾಕ್ ಸೂಕ್ತದಲ್ಲಿ ["ಚತ್ವಾರಿವಾಕ್......ಗುಹಾ ತ್ರೀಣಿ ನಿಹಿತಾ ನೇಂಗಯಂತಿ" ಎಂಬಲ್ಲಿ] ವಾಕ್ ತತ್ತ್ವದ ಮೇಲಿನ ಮೂರರ್ಧಗಳು. 'ಪದಗಳು' ಹೃದಯ ಗುಹೆಯಲ್ಲಿಯೇ ಅಡಗಿಕೊಂಡಿರುವುವೆಂದು ಹೇಳಲ್ಪಟ್ಟಿರುವುದಷ್ಟೆ ! ಪ್ರಾಯಶಃ ಇವೇ "ಗುಹೆಯಲ್ಲಿ ಬಚ್ಚಿಡಲ್ಪಟ್ಟ ಗೋವುಗಳು". ಇವು ಇರುವ ಪ್ರದೇಶ ಉನ್ನತವಾದ ಪರ್ವತ ! ಜ್ಞಾನಿಗಳಾದ ಋಷಿಗಳು ಇವು ಗಳನ್ನು ಪಡೆಯುವುದು ಹೇಗೆ ? ಎಂದರೆ ದಿವ್ಯವಾದ ವೈದಿಕ ವಾಕ್ಕಿಗೆ ಒಂದು ವಿಶೇಷ ಶಕ್ತಿ ಇದೆ. ಸತತವಾಗಿ ಶ್ರುತಿ ಪಾರಾಯಣದಲ್ಲಿ ತೊಡಗಿದ ಜ್ಞಾನಿಗೆ, ಒಂದು ಕಾಲದಲ್ಲಿ 'ಗೋಚರಿಸದ' ಉತ್ಕೃಷ್ಟವಾದ 'ಪರಮಾರ್ಥ'ವು ಅದೇ ವೈದಿಕ ವಾಕ್ಕಿನ ಅತೀಂದ್ರಿಯಶಕ್ತಿಯೊಂದರಿಂದಲೇ ಕಾಲಾಂತರ

ದಲ್ಲಿ ವೈದಿಕನ (ಆಂಗಿರಸರಂತಹ ರೀತಿಯ) ತಪಸ್ಸಾಧನೆಗನುಗುಣವಾಗಿ ಗೋಚರಿಸುವುದು. ಹೀಗೆ ಮಿಂಚಿನ ವೇಗದಲ್ಲಿ ವೇದವಾಕ್ಯಗಳಲ್ಲಿರುವ ದಿವ್ಯಾರ್ಥಗಳನ್ನು ನಮ್ಮ 'ಕಣ್ಣಿಗೆ' ಗೋಚರಿಸುವಂತೆ ಪತ್ತೆ ಮಾಡಿ ಹಿಡಿದುಕೊಡುವ ಅದೇ ವೇದವಾಕ್ಯಾವಲಂಬಿಯಾದ ಅತೀಂದ್ರಿಯ ಶಕ್ತಿಗೆ ಸರಮಾ' ಎಂದು ಹೆಸರು. ಅಂದರೆ ಜ್ಞಾನವು ಶ್ರುತಿ ಪರಿಮಳ ವಾಗಿ ಇದರ ಅತೀಂದ್ರಿಯ ಶಕ್ತಿಗೆ ಪತ್ತೆ ಹತ್ತುವುದು .ಶ್ವಾನದ' ಘ್ರಾಣ-ವ್ಯಾಪಾರಕ್ಕೆ ಹೋಲಿಸಲ್ಪಟ್ಟಿದೆ.

ಋಕ್‌ಸಂಹಿತೆಯ ಮೂರನೇ ಮಂಡಲದ ೩೧ನೇ ಸೂಕ್ತದಲ್ಲೂ ಸರಮೆಯ ಇದೇ ಕೆಲಸವು ಇನ್ನಷ್ಟು ವಿಸ್ತಾರವಾಗಿ ವಿವರಿಸಲ್ಪಟ್ಟಿದೆ. ವಿಶೇಷವಾಗಿ ೫-೬-೭-೮ನೆಯ ಮಂತ್ರಗಳಲ್ಲಿಯೂ ಸರಮೆಯ ಸಹಾಯ ವನ್ನು ವರ್ಣಿಸಲಾಗಿದೆ. ಆಂಗಿರಸ ಋಷಿಗಳಿಂದ ಸ್ತುತನಾದ ಇಂದ್ರನು ಮರುದ್ಗಣಗಳೊಡನೆ .ಗೋವುಗಳು' ಅಡಗಿಕೊಂಡಿದ್ದ ಪರ್ವತದ ಬಳಿಗೆ ಬಂದಾಗ "ಮಹಾಜ್ಞಾನಿಗಳಾದ ಸಪ್ತ ಆಂಗೀರಸ್ಸುಗಳೂ ಆ ವೇಳೆಗೆ .ಗೋವುಗಳು' ಅಲ್ಲೇ ಇರುವುವೆಂಬುವನ್ನು ತಿಳಿದು ದೃಢ ಮನಸ್ಕರಾಗಿ, ಇಂದ್ರನನ್ನು ಸ್ತುತಿಸಿ, ನಂತರ ಮೌನವಾಗಿದ್ದರು. ಇಂದ್ರನು ಆಂಗಿರಸರ ಸ್ತುತಿಗಳಿಂದ ತೃಪ್ತನಾಗಿ ಪರ್ವತದ ಗುಹೆಯನ್ನು ಪ್ರವೇಶಿಸಿದನು, ಆಗ ಅವನ ಮುಂಭಾಗದಲ್ಲಿ ಅವನಿಗಿಂತಲೂ ಮುಂಚಿತವಾಗಿಯೇ ಗುಹಾದ್ವಾರ ದಲ್ಲಿ ಸರಮೆಯು ಹೋಗಿ ನಿಂತಿದ್ದಳು. ಹೀಗೆ ಗುಹಾದ್ವಾರದಲ್ಲಿ ನಿಂತಿದ್ದ ಸರಮೆಯು "ಸುಪದೀ" ಎನಿಸಿ "ಭದ್ರವಾದ ಪಾದವುಳ್ಳವಳಾಗಿ", [ಈ .ನಾಯಿಗೆ' ತಪ್ಪು ಹೆಜ್ಜೆ ಇಡುವುದೇ ಗೊತ್ತಿಲ್ಲವೆಂದೂ ದೃಢವಾದ ಹೆಜ್ಜೆ ಗಳಿಂದಲೇ ಮಾರ್ಗದರ್ಶನ ಮಾಡುವಳೆಂದೂ ಅರ್ಥ.] ವೇದರಾಶಿಗಳೆಂಬ .ಗೋವುಗಳ' ಅಕ್ಷರ ಸಮೂಹಕ್ಕೆ ಮುಂದುಗಡೆಯಲ್ಲಿಯೇ ("ಅಕ್ಷರಾಣಾಂ ಅಗ್ರಂ") ನಿಂತಿದ್ದಾಳೆಂದೂ ಸೂಕ್ತದಲ್ಲಿ ಹೇಳಿದೆ. 'ಗೋವುಗಳ ಬಗೆಗೂ ಸರಮೆಯ ಬಗೆಗೂ ಅರ್ಥದಲ್ಲಿ ಇನ್ನೂ ಸಂದೇಹ ಇರುವವರಿಗೆ ಈ ಮಂತ್ರ ಒಂದೇ ನಿದರ್ಶನ ಸಾಕು. ವೇದಾಕ್ಷರಗಳಲ್ಲಿ ಅಡಗಿಕೊಂಡಿ ರುವ ದಿವ್ಯಾರ್ಥವನ್ನು ವೈದಿಕನಿಗೆ ಅನುಭವದಲ್ಲಿ ಹಿಡಿದು, ಹಿಡಿದು, ಪತ್ತೆಮಾಡಿಕೊಡುವ ವಾಕ್ ಶಕ್ತಿಯೇ 'ಸರಮೆ'. ಇನ್ನೂ ವಿಶೇಷ

ವೇನೆಂದರೆ, ಆಗ ಇಂತಹ ಮೇಧಾವಿಯೂ, ಋಷಿಗಳ ಸ್ನೇಹಿತನೂ ಆದ ಇಂದ್ರನ ಕೂಡ ಸ್ನೇಹವನ್ನು ಬಯಸಿ "ಆ ಪರ್ವತವೇ ತನ್ನ ಗರ್ಭದಲ್ಲಿದ್ದ ಗೋವುಗಳನ್ನು ಶ್ರೇಷ್ಠ ಕರ್ಮಕರ್ತನಾದ ಇಂದ್ರನಿಗೇ ಒಪ್ಪಿಸಿತು"— "ಅದ್ರಿಃ ಸುಕ್ರತೇ ಗರ್ಭಂ ಅಸೂದಯುತ"– ಎಂದು ಹೇಳಿದೆ.

ಹೀಗೆ ತಮ್ಮ 'ಗೋ ಧನ'ವನ್ನು ಪುನಃ ಪಡೆದುಕೊಂಡ ಆಂಗಿರಸರು, ಹರ್ಷಗೊಂಡುದಲ್ಲದೆ ಆ 'ಗೋವುಗಳ' ರಕ್ಷಣೆಗಾಗಿ ಮಹಾವೀರರನ್ನೂ ನಿರ್ಮಿಸಿದರೆಂದೂ ವೇದವೇ ಹೇಳಿದೆ. ("ನಿಷ್ಕ್ರಾಂ ಅಧಘುಃ ಗೋಷು ವೀರಾನ್"(. (ಇದೇ ಸೂಕ್ತದ ೧೦ನೇ ಮಂತ್ರದಲ್ಲಿ). ಇದರರ್ಥ ವೇದ ಮಂತ್ರಗಳ ಅತ್ಯುಚ್ಚ ಪರಮಾರ್ಥ ಜ್ಞಾನವು. ಮಹಾಜ್ಞಾನಿಯಾದ ಋಷಿಗೂ ಒಮ್ಮೊಮ್ಮೆ ಮರೆತು ಹೋಗಿ, ಲುಪ್ತವಾಗುವುದೆಂದೂ, ಅವುಗಳು ಪುನಃ ದೊರೆಯುವುದೇ ದೈವಕೃಪೆಯಿಂದಲೇ, ವೇದವಾಕ್ಕಿನ ಉಪಾಸನಾಬಲ ದಿಂದಲೇ ಎಂದೂ, ಹೀಗೆ ಉಪಲಬ್ಧವಾದ ಅರ್ಥಕ್ಕೆ ಸಂರಕ್ಷಣೆಗಾಗಿ ಅವರು ಪ್ರಯತ್ನಗಳನ್ನು ಮಾಡುವರೆಂದೂ, ಇದು ವೈದಿಕ ಜೀವನದ ಅತಿದೊಡ್ಡ ಸಾಹಸವೆಂದೂ ಭಾವ. ವೇದಾರ್ಥಾಪಹಾರಕರಾದ ದ್ರೋಹ ಶಕ್ತಿಗಳೇ ನಮ್ಮಲ್ಲಿರುವ ತಮೋಗುಣದ ಸಾಂಕೇತಿಕ ಶಕ್ತಿಗಳು. ಇವು ಪ್ರಭಾವಶಾಲಿ ಗಳಾಗಿರುವತನಕ ಬಾಯಲ್ಲಿ ವೇದಾಕ್ಷರಗಳಿದ್ದರೂ, ಅವುಗಳಿಂದ ಅರ್ಥ ಪ್ರಾಪ್ತಿಯಿಲ್ಲ. ಭಗವದನುಭೂತಿಯಂತೂ ದೂರದ ಮಾತೇ ಆಯಿತು ! ಇವೇ ದುರ್ಗಮವಾದ ಬೆಟ್ಟಗಳು, ಅವುಗಳ ಮೇಲಿನ ಕೋಟೆಗಳು. ಆಗ ಇವುಗಳನ್ನು ಸೀಳಿ ಹಾಕಿ, 'ಬೆಟ್ಟ'ಗಳನ್ನು ಕಡಿದು, ಒಳಗಿನ 'ಗೋವುಗಳನ್ನು' ಬಿಡಿಸುವುದೇ ಇಂದ್ರನ ಕೆಲಸ. ಇಂದ್ರನಿಗೆ 'ಗೋತ್ರಭಿತ್' 'ಗೋವಿತ್' 'ಗೋಪತಿ' ಇತ್ಯಾದಿ ವಿಶೇಷಣಗಳು ಬಂದಿರುವುದು ಈ ಅರ್ಥದಲ್ಲೇ. ಭಗವತ್ಕೃಪೆಯಿಲ್ಲದೆ ಜ್ಞಾನಲಾಭವಿಲ್ಲ.

## ೧೭. 'ಇಂದ್ರ'ನು ಏಕೆ 'ಗೋತ್ರಭಿತ್' 'ಗೋವಿತ್' ಆದನು ?

ಈಗ ಈ ವಿಷಯವನ್ನು ಇನ್ನಷ್ಟು ವಿವರವಾಗಿ ನೋಡೋಣ ಗೋತ್ರವೆಂದರೆ' "ಗಾಃ ತ್ರಾಯಂತೇ, ರಕ್ಷಂತೀತಿ ಗೋತ್ರಾಃ"-

ಎಂಬಂತೆ "ಗೋವುಗಳನ್ನು ಕಾಪಾಡುತ್ತವೆ ಎಂಬ ಅರ್ಥದಲ್ಲಿ, **ಗೋವುಗಳಿಗೆ ಆಶ್ರಯವಾದ ಸ್ಥಾನ.** ಇಂದ್ರನು ಮಳೆಯನ್ನೂ ಕೊಡುವವನಾದುದರಿಂದ, 'ಗೋ' ಎಂದರೆ ನೀರು ಎಂದು ಅರ್ಥವಾದಾಗ, ಅವು ಅಡಗಿಕೊಂಡಿರುವ ಮೋಡಗಳೇ 'ಗೋತ್ರಗಳೆನಿಸಿ, ಇವುಗಳನ್ನು ಕಡಿದು ಕತ್ತರಿಸಿ, ಮಳೆ ಸುರಿಸುವುದೇ ಇಂದ್ರನು 'ಗ್ರೋತ್ರಭಿತ್' ಆದುದಕ್ಕೆ ಅರ್ಥ, ಎಂದು ಶ್ರೀ ಸಾಯಣರು ಅನೇಕ ಕಡೆಗಳಲ್ಲಿ ಹೇಳಿದ್ದಾರೆ. ಆದರೆ ಈ ಅರ್ಥವು ಮೇಲಿನ ಪ್ರಸಂಗದಲ್ಲಿ ಹೊಂದುವದಿಲ್ಲ. ಆಂಗಿರಸರ ಪ್ರಸ್ತಾಪವೂ, ಗೋವುಗಳೂ ಬಂದು, ಇಂದ್ರನ ಕ್ರಿಯೆಯು ಹೇಳಲ್ಪಟ್ಟಾಗ, ಗೋತ್ರ ಶಬ್ದಕ್ಕೆ— **ಶ್ರೀ ಸಾಯಣರೇ ಅಲ್ಲಲ್ಲಿ ಸೂಚಿಸಿರುವಂತೆ** (ಈ ಲೇಖನದಲ್ಲಿ ಈ ವರೆಗೆ ವಿವೇಚಿಸಿರುವಂತೆಯೇ) ಅರ್ಥ ಮಾಡಬೇಕಾಗುತ್ತದೆ.

ಉದಾಹರಣೆಗೆ ಋಕ್ಸಂಹಿತೆ II-17-1 ರಲ್ಲಿ ಇಂಥದೊಂದು ಪ್ರಸಂಗ ಇದೆ. ಅಲ್ಲಿ ಬರುವ 'ಗೋತ್ರ' ಶಬ್ದಕ್ಕೆ **"ಗೋವೃಂದವೆಂದೂ" "ಗಾಂ ಪಶುಜಾತಿಂ ತ್ರಾಯತೇ"** ಎಂದೂ, ಆದುದರಿಂದ ಗೋವುಗಳು ಅಡಗಿರುವ, ಆಶ್ರಯಭೂತವಾದ ಪರ್ವತ ಬಿಲವೆಂದೂ ಸಾಯಣರೇ ಅರ್ಥ ಮಾಡಿದ್ದಾರೆ! ಅಲ್ಲದೆ, ಋಕ್‌ಸಂಹಿತ್ X-103-6-7ರಲ್ಲಿ ಸುಪ್ರಸಿದ್ಧವಾದ ಇಂದ್ರಸೂಕ್ತದಲ್ಲಿ. ಇಂದ್ರನನ್ನು **'ಗೋತ್ರಭಿತ್ ಗೋವಿತ್'** ಎಂದು ಒಟ್ಟಿಗೇ ಕರೆಯಲಾಗಿದೆ. ಇಲ್ಲಿಯೂ, 'ಗೋ' ಎಂದರೆ ಮೇಲಿನ ಜ್ಞಾನಾರ್ಥವನ್ನು ಪರಿಗ್ರಹಿಸುವುದೇ ಪ್ರಸಂಗಕ್ಕೆ ಹೊಂದುವುದು. ಜ್ಞಾನವನ್ನು ಕೊಡುವವನು ಭಗವಂತನೇ ಆದುದರಿಂದ, ಮಾನವನಿಗೆ ದೊರೆಯದ ದಿವ್ಯಜ್ಞಾನವು ಎಲ್ಲಿರುವುದೆಂಬುದು ಅವನಿಗೆ ತಾನೇ ತಿಳಿದಿರಬೇಕು? ಹೀಗೆ ಅವನು 'ಗೋವಿತ್'. ಜ್ಞಾನವು ಹೊರಗೆ ಕಣ್ಣಿಗೆ ಕಾಣದಂತೆ ಎಲ್ಲಿದ್ದರೂ, ಆ ಕೋಟೆಗಳನ್ನು ನಿಗ್ರಹಿಸಿ ಜ್ಞಾನಭಂಡಾರವನ್ನು ಜ್ಞಾನಿಗಳಿಗೆ ತೆರೆಯುವುದೇ ಇವನ ಮುಖ್ಯ ಕರ್ತವ್ಯವಾದುದರಿಂದ **ಗೋತ್ರಬೇಧನನೆಂಬ** ಸಾಂಕೇತಿಕ ಪರ್ವತಗಳ ಭೇದನವು ಯುಕ್ತವೇ ಆಯಿತು. ('ಗೋ' ಎಂದರೆ ಭೂಮಿ ಎಂದೂ ಇದನ್ನು ಕಾಪಾಡುವದರಿಂದ ಬೆಟ್ಟಗಳಿಗೇ **ಗೋತ್ರವೆಂದೂ** ಇರುವ ಅರ್ಥವು ವೇದದಲ್ಲಿ ಗೌಣವಾಗಿರುವಂತೆ ತೋರುತ್ತದೆ. ಬೆಟ್ಟಗಳಿಗೆ ಪರ್ಯಾಯ ಶಬ್ದಗಳಾದ ಗಿರಿ, ಅದ್ರಿ, ಪರ್ವತ, ಶಬ್ದಗಳೂ ಅನೇಕ ಕಡೆಗಳಲ್ಲಿ ಇಂಥ

ಪ್ರಸಂಗಗಳಲ್ಲಿಯೂ ಬಂದಿದ್ದರೂ, ವೇದದ ಭಾಷೆಯು ಹೊರಗಣ್ಣಿಗೆ ಕಾಣುವುದಕ್ಕೆ ಒಂದು ಸುಂದರ ಕಥೆಯನ್ನೂ ಒಳಗಣ್ಣಿಗೆ ಮಾತ್ರ ಕಾಣುವುದಕ್ಕೆ ಮೇಲೆ ವಿವರಿಸಿದ ಅರ್ಥವನ್ನೂ ಏಕಕಾಲಕ್ಕೆ ಕೊಡುವಂತೆ ಇದೆ.)

ಇದೂ ಅಲ್ಲದೆ ಇಂದ್ರನು 'ಹೆಣ್ಣುಕುದುರೆಯೊಂದನ್ನು' 'ಗೋ' ಮಾತೆಯನ್ನಾಗಿ ಪರಿವರ್ತಿಸಿದನೆಂಬ, ಅವನ ಸಾಹಸ ಸೂಚಕವಾದ ವೃತ್ತಾಂತವೂ ವೇದದಲ್ಲೇ (ಋ. ಸಂ. I-121-2 ಬಂದಿದೆ. ಇದರರ್ಥ ವೇನು ? ವೇದ ಕಾಲದಲ್ಲಿ ಪ್ರಾಣಿಯೋನಿಗಳ ಬದಲಾವಣೆಯ ಗುಟ್ಟು ಕೆಲವರಿಗೆ ತಿಳಿದಿತ್ತೆಂದು ಅರ್ಥವೇ? ಇಲ್ಲಿ ಪಶುಸಂಗೋಪನ ಶಾಸ್ತ್ರಪ್ರಕ್ರಿಯೆಯನ್ನು (The application of animal husbandry), ನೋಡುವ ಮೂಢನಿಗೆ ವೇದವು ತಿಳಿಸುವುದೇನಿದೆ ? ಕುದುರೆಯು ವೇದದಲ್ಲಿ ಅಲ್ಲಲ್ಲಿ ಕ್ಷಾತ್ರ ಶಕ್ತಿಗೆ ಸಂಕೇತ. 'ಗೋ'ವು ಬೆಳಕಿಗೂ, ಬ್ರಹ್ಮತೇಜಸ್ಸಿಗೂ, ಬ್ರಹ್ಮವಿದ್ಯೆಗೂ ಸಂಕೇತ. ಹೀಗೆ, ಹೆಣ್ಣು ಕುದುರೆಯಲ್ಲಿ ಗೋ ಮಾತೆಯನ್ನೂ ಇಂದ್ರನು ಹುಟ್ಟಿಸಿದನೆಂದರೆ (ಮೇನಾಂ ಅಶ್ವಸ್ಯ–ಪರಿ ಮಾತರಂ ಗೋಃ) ಎಂದರೆ ಕ್ಷತ್ರಿಯ ಯೋನಿಯಲ್ಲೂ ಬ್ರಹ್ಮಜ್ಞಾನವನ್ನು ಉತ್ಪಾದಿಸಿದನೆಂದು ಅರ್ಥ (ಅಥವಾ ಕ್ಷತ್ರ ಯೋನಿಯಲ್ಲಿ ಹುಟ್ಟಿದ ಕೌಶಿಕನು, ತಪಸ್ಸಿನಿಂದ ಮತ್ತು ದೈವಕೃಪೆಯಿಂದ ಬ್ರಾಹ್ಮಣನಾಗಿ, ವಿಶ್ವಾಮಿತ್ರನಾದ, ಅಭೂತಪೂರ್ವ ಘಟನೆಯನ್ನು ಅವಿಸ್ಮರಣೀಯವನ್ನಾಗಿ ನಮ್ಮ ಸ್ಮೃತಿಯಲ್ಲಿ ಉಳಿಸಲು ಬಂದಿರುವ ವೇದವಾಕ್ಯವೇ ಇದಾಗಿರಬೇಕು), ಇಲ್ಲೂ ಇಂದ್ರನನ್ನು "ನರೋ-ಗೋಃ" ಎಂಬಂತೆ, ಗೋವುಗಳ ನಾಯಕನೆಂದು ಹೇಳಿರುವುದೂ ಗಮನೀಯ.

ಹೀಗೆ ವೇದದ ಕಥೆಯೆಲ್ಲಾ ಒಂದು ದೃಷ್ಟಿಯಿಂದ 'ಗೋವಿನ' ಕಥೆಯೇ. ಕುದುರೆಯು ಕ್ಷತ್ರತತ್ತ್ವಕ್ಕೂ, ಗೋವು ಬ್ರಹ್ಮತತ್ತ್ವಕ್ಕೂ ಸಂಕೇತವೆಂಬುದನ್ನೇ ಸಮರ್ಥಿಸುವಂತೆ, ಇನ್ನೂ ಒಂದು ಪ್ರಸಿದ್ಧ ಉದಾಹರಣೆಯನ್ನು ಈಗ ಕೊಡಬಹುದು.

## ೧೮. ಮಹಾಭಾರತದಲ್ಲಿ ಒಂದು ಸ್ವಾರಸ್ಯಾಂಶ

ರಾಜನು ಹೊಸದಾಗಿ ರಾಜ್ಯಭಾರವನ್ನು ವಹಿಸಿಕೊಂಡು ಪಟ್ಟಾಭಿಷಿಕ್ತನಾಗುವ ಸಮಯದಲ್ಲಿ ಹದಿನಾರು ಗೋವುಗಳಿಂದ ಎಳೆಯಲ್ಪಟ್ಟ ರಥದಲ್ಲಿ ಆಸೀನನಾಗಿ ಪುರ ಪ್ರದಕ್ಷಿಣೆಯನ್ನು ಮಾಡಿ, ನಂತರ ಸಿಂಹಾಸನವನ್ನು ಏರಬೇಕೆಂಬ ಪದ್ಧತಿಯು ಧರ್ಮರಾಜನಿಂದ ಅನುಷ್ಠಿಸಲ್ಪಟ್ಟಿರುವದೆಂಬುದನ್ನು ಮಹಾಭಾರತದಲ್ಲಿ ಕಾಣುತ್ತೇವೆ.

"ತತೋ ನವಂ ರಥಂ ಶುಭ್ರಂ ಕಂಬಳಾಜಿನ ಸಂವೃತಂ ।
ಯುಕ್ತಂ ಷೋಡಶಭಿಃ ಗೋಭಿಃ ಪಾಂಡುರೈಃ ಶುಭ ಲಕ್ಷಣೈಃ ॥
ಮಂತ್ರೈಃ ಅಭ್ಯರ್ಚಿತಂ ಪುಣ್ಯೈಃ ಸ್ತೂಯಮಾಂಶ್ಚ ವಂದಿಭಿಃ ।
ಆರುರೋಹ ಯಥಾದೇವಃ ಸೋಮೋ ಅಮೃತಮಯಂ ರಥಂ ॥
(ಶ್ರೀ ಮ. ಭಾ. ಶಾಂತಿ, 37–32–33).

ಈ ಶ್ಲೋಕಗಳಿಗೆ ವ್ಯಾಖ್ಯಾನ ಮಾಡುವಾಗ ನೀಲಕಂಠದೀಕ್ಷಿತರು. ಈ ಕೆಳಗಿನ ಋಙ್ಮಂತ್ರವನ್ನು ಪ್ರಮಾಣವನ್ನಾಗಿ ಉದಹರಿಸಿರುತ್ತಾರೆ.

**ಸಂ ಗೋಭಿರಾಂಗಿರಸೋ ನಕ್ಷಮಾಣೋ ಭಗ**
**ಇವೇದರ್ಯಮಣಂ ನಿನಾಯ ।**
**ಜನೇ ಮಿತ್ರೋನ ದಂಪತೀ ಅನಕ್ತಿ ಬೃಹಸ್ಪತೇವಾಜಯಾ**
**ಶೂರಿವಾಜೌ ॥**

ಲೋಕದಲ್ಲಿ ಸ್ನೇಹಿತನು ತನ್ನ ಮಿತ್ರನಿಗೆ ಶ್ರೇಯಸ್ಸಾಗಲೆಂದೂ, ತಮ್ಮಲ್ಲಿ ಅನ್ಯೋನ್ಯ ಸಂಬಂಧವಾಗಲೆಂದೂ, ಬಂಧು ಜನರಿಂದ ಅವನಿಗೆ ಹೇಗೆ ವಿವಾಹ ಮಾಡಿಸುವನೋ, ಹಾಗೆಯೇ, ಪುರೋಹಿತನು ನಗರಗತವಾದ ಐಶ್ವರ್ಯ ಲಕ್ಷ್ಮಿಯನ್ನು ರಾಜನಿಗೆ ವಿವಾಹ ಮಾಡಿಸಿ, ಗೋರಥದಿಂದ ನಗರ ಪ್ರವೇಶವನ್ನು ಮಾಡಿಸಬೇಕೆಂದು ಶ್ರುತಿಯ ಆದೇಶ ಎಂದು ವ್ಯಾಖ್ಯಾನಸಾರ. ಹಿಂದೆ ಆಂಗಿರಸಪುತ್ರನಾದ ಬೃಹಸ್ಪತಿಯು ಅರ್ಯಮನೆಂಬ ದೇವತೆಯನ್ನು ಹೀಗೆಯೇ ಗೋರಥದಲ್ಲಿ ಕೂಡಿಸಿ, ಅವನಿಗೆ ಪಟ್ಟಾಭಿಷೇಕ ಮಾಡಿದನೆಂದೂ, ಇದು ಮಿತ್ರನು ದಂಪತಿಗಳನ್ನು ಒಟ್ಟು ಸೇರಿಸಿದಂತೆ ಎಂದೂ ಶ್ರುತಿತಾತ್ಪರ್ಯ. ಹಿಂದೆ ದಭೀತಿ ಎಂಬ ರಾಜರ್ಷಿಯು

ದಸ್ಯುಜನರೊಡನೆ ಯುದ್ಧ ಮಾಡಿ ಅವರಿಂದ ತಾನೂ ಭಂಗಪಟ್ಟಾಗ ಇಂದ್ರನು ಅವನನ್ನು ಸಂರಕ್ಷಿಸಿ, ಅವನ ಶತ್ರುಗಳನ್ನು ಸೋಲಿಸಿ, ಅವನಿಗೂ, 'ಗೋ ಅಶ್ವರಥಗಳ' ಸಂಯೋಗ ಉಂಟಾಗುವಂತೆ ಮಾಡಿದನು, ಎಂಬ ವೃತ್ತಾಂತವು ಋಙ್ಮಂತ್ರ II-15-14 ರಲ್ಲಿ ಹೇಳಲ್ಪಟ್ಟಿದೆ. (ಸಂ ಗೋಭಿಃ ಅಶ್ವೈಃ ಅಸೃಜತ ರಥೇಭಿಃ). ಹೀಗೆ 'ಗೋ ರಥ'ವು ಪ್ರಸಿದ್ಧ ಸಾಂಕೇತಿಕ ಅರ್ಥವನ್ನು ಪಡೆದಿದೆ.

## ೧೯. ಬೃಹಸ್ಪತಿ ವರ್ಣನೆಯ ಸ್ವಾರಸ್ಯ

ಇನ್ನೊಂದು ಋಕ್-ಸೂಕ್ತದಲ್ಲಿ ಗೋವು ಮತ್ತು ಪಣಿಗಳ ಅರ್ಥವನ್ನೇ ಮತ್ತಷ್ಟು ಸ್ಪಷ್ಟವಾಗಿಸುವಂತೆ ಹೀಗೆ ವರ್ಣಿಸಿದೆ:

ಆ ವಿಬಾಧ್ಯಾ ಪರಿರಾಪಸ್ತಮಾಂಸಿ ಚ ಜ್ಯೋತಿಷ್ಮಂತಂ
ರಥಮೃತಸ್ಯ ತಿಷ್ಠಸಿ ।
ಬೃಹಸ್ಪತೇ ಭೀಮಮಮಿತ್ರದಂಭನಂ ರಕ್ಷೋಹಣಂ
ಗೋತ್ರಭಿದಂ ಸ್ವರ್ವಿದಂ ॥

ಇಲ್ಲಿ ಬೃಹಸ್ಪತಿಯನ್ನು 'ರಾಕ್ಷಸನಾಶಕ'ನೆಂದೂ, 'ಗೋತ್ರ'ಗಳನ್ನು ಸೀಳುವವನೆಂದೂ, 'ಸ್ವರ್ವಿದ'ನೆಂದೂ, ವರ್ಣಿಸಿರುವುದು ಗಮನೀಯ. ಎಂದರೆ ಗೋವುಗಳನ್ನು ಕಟ್ಟಿಹಾಕಿದ ರಾಕ್ಷಸರನ್ನು ನಿಗ್ರಹಿಸಿ, ಅವುಗಳನ್ನು ಬಿಡಿಸಿ ಅವುಗಳ ದಿವ್ಯಸ್ಥಾನಕ್ಕೆ ಸೇರಿಸುವವನು ಎಂದು ಅರ್ಥ. ಹಾಗೆಯೇ 'ಪರಿರಪಃ' ಎಂದರೆ 'ಪರಿತೋ ರಪಃ ಪಾಪರೂಪಂರಕ್ಷಃಯುದ್ಧ್ವಾ.... ಪರಿವದತೋ ನಿಂದಕಾನ್' ಎಂದು ಸಾಯಣರು ಅರ್ಥಮಾಡಿ, "ಸುತ್ತಲೂ ಇರುವ ಪಾಪಸ್ವರೂಪರಾದ ರಾಕ್ಷಸರನ್ನು ಅಥವಾ ವೇದನಿಂದಕರಾದ ಘಾತಕರನ್ನೂ" ಎಂಬಂತೆ, ಪಣಿಗಳಿಗೇ ಅನ್ವಯಿಸುವಂತೆ ಮಾಡಿದ್ದಾರೆ. ಹೀಗೆ ಜ್ಯೋತಿಷ್ಮಂತವಾದ ರಥದಲ್ಲಿ ಕುಳಿತ ಬೃಹಸ್ಪತಿಯೂ ಕತ್ತಲೆಯನ್ನು ಹೋಗಲಾಡಿಸಿ (ತಮಾಂಸಿವಿಬಾಧ್ಯ) ಶತ್ರು ಭಯಂಕರನಾಗಿರುವನೆಂಬುದನ್ನು ಇಲ್ಲಿ ವರ್ಣಿಸಲಾಗಿದೆ. ಬೃಹಸ್ಪತಿಯೂ ಆಂಗಿರಸನಾದುದರಿಂದ ಇಲ್ಲಿಯೂ ಹಿಂದಿನದೇ ಪ್ರಸಂಗ.

## ೨೦. 'ಗೋ' ನಾಮಗಳು

ಯಾಸ್ಕರು ನಿರುಕ್ತದಲ್ಲಿ (III-9) ಒಂಭತ್ತು ವೇದೋಕ್ತ ಗೋನಾಮಗಳನ್ನು ಒಟ್ಟಿಗೆ ಸೇರಿಸಿದ್ದಾರೆ. ೧. ಅಘ್ನ್ಯಾ, ೨. ಉಸ್ರಾ, ೩. ಉಸ್ರಿಯಾ, ೪. ಅಹೀ, ೫. ಮಹೀ, ೬. ಅದಿತಿಃ ೭. ಇಲಾ, ೮. ಜಗತೀ, ೯. ಶಕ್ವರೀ ಇವುಗಳಿಗೆ ಆಯಾ ಸೂಕ್ತಗಳನ್ನೇ ಉದಹರಿಸಿ ಹೀಗೆ ಮಾಡಿದ್ದಾರೆ.

೧. ಅಘ್ನ್ಯಾ ಎಂದರೆ "ಕೊಲ್ಲಲ್ಪಡದ ಪ್ರಾಣಿ"ಅಥವಾ "ದುರ್ಭಿಕ್ಷವನ್ನು ನಿವಾರಿಸುವುದು", (ಅಹಂತವ್ಯಾ ಭವತಿ ಇತಿ ಅಘಘ್ನೀ ಇತಿವಾ XI-43.)

೨. ಉಸ್ರಾ : "ಉತ್ತಮವಾದ ಹಾಲು ಮೊಸರು ಬೆಣ್ಣೆ ತುಪ್ಪ ಎಂಬ ಭೋಗಸಾಧನಗಳು ಇದರಲ್ಲಿ ಇವೆ ಆದುದರಿಂದ." (ಉತ್‌ಸ್ರಾವಿಣೋ ಅಸ್ಯಾ ಭೋಗಾ ಉಸ್ರೇತಿಚ (I-V-19)

ಹೀಗೆಯೇ "ಮಹ್ಯತೇ ಇತಿ ಮಹೀ" ಎಂಬಂತೆ, ಸರ್ವದೇವತಾಸ್ವರೂಪಳಾಗಿ ದೇವತೆಗಳಿಂದಲೂ ಪೂಜಿಸಲ್ಪಡುವವಳು ಎಂದೂ,

"ನದ್ಯತಿ ಇತಿ ಅದಿತಿಃ" ಎಂಬಂತೆ ಕ್ಷಯವಿಲ್ಲದವಳು ನಾಶರಹಿತಳು ಎಂದೂ,

"ಈಡ್ಯತೇ ಇತಿ ಇಳಾ" ಎಂಬಂತೆ ಸ್ತುತಿಸಲ್ಪಡುವವಳು ಎಂದೂ. ಇತ್ಯಾದಿ ಸಮಸ್ತ ವರ್ಣನೆಗಳೂ. ಪಶುವಾದ ಗೋವಿಗೂ, ಇದು ಸಂಕೇತಿಸುವ ಜ್ಞಾನಗೋವಿಗೂ ಒಂದೇ ಕಾಲಕ್ಕೆ ಹೊಂದುತ್ತವೆ.

ಅಲ್ಲದೇ ಗೋ ಶಬ್ದಕ್ಕೆ ಪರ್ಯಾಯವಾದ "ಧೇನು" ಶಬ್ದವೂ ನಿರುಕ್ತದಲ್ಲಿ (XI-42) "ಧೇನುಃ ಧಯತೇರ್ವಾ, ಧಿನೋತೇರ್ವಾ, ಧಯತೇಸೌ ವತ್ಸೇನ ಇತಿ, ತರ್ಪಯತ್ಯಸೌ ಪಯಸಾ" ಎಂಬುದಾಗಿ ವ್ಯಾಖ್ಯಾನ ಮಾಡಲ್ಪಟ್ಟಿದೆ. "ಕರುವಿನಿಂದ ಹಾಲು ಹೀರಲ್ಪಡುತ್ತದೆ, ಹಾಲನ್ನು ಕೊಟ್ಟು ತೃಪ್ತಿಪಡಿಸುತ್ತದೆ." ಎಂಬ ಅರ್ಥದಲ್ಲಿ ಧೇನು ಶಬ್ದವಿದೆ. ಇದು ಸಾಂಕೇತಿಕವಾಗಿ, ವೇದವಾಕ್ಕಿಗೂ ಅನ್ವಯವೆಂದು ಯಾಸ್ಕರೇ ನಿರುಕ್ತದಲ್ಲಿ (XI-43) "ವಾಗೇಷಾ ಮಾಧ್ಯಮಿಕಾ ಧರ್ಮಧುಕ್ ಇತಿಯಾಜ್ಞಿಕಾಃ"

ಎಂದು ವಿವರಿಸಿದ್ದಾರೆ. ಇದಕ್ಕೆ ಉದಾಹರಣಾರ್ಥವಾಗಿ ಋಕ್-ಸಂಹಿತೆಯ II-3-19 ಮಂತ್ರವನ್ನು ಎತ್ತಿ ತೋರಿಸಿದ್ದಾರೆ.

ಇದರರ್ಥ "ಉತ್ತಮವಾದ ಹಾಲನ್ನು ಕೊಡುವ ಈ ಕಾಮಧೇನುವನ್ನು ನಾನು ಸ್ತೋತ್ರದಿಂದ ಆಹ್ವಾನಿಸುತ್ತೇನೆ. ಉತ್ತಮವಾದ ಹಸ್ತವುಳ್ಳ ನಮ್ಮ ಅಧ್ವರ್ಯುವು ಈ ಗೋವಿನಿಂದ ಹಾಲನ್ನು ಕರೆಯುತ್ತಾನೆ. ಹೀಗೆ ಶ್ರೇಷ್ಠವಾದ ಯಜ್ಞಾರ್ಹವಾದ ಈ ಹಾಲನ್ನು ಭಗವಂತನಾದ ಸವಿತೃವು ಅನುಗ್ರಹಿಸಲಿ. ಈ ಸವಿತೃವಿನ ಪ್ರವರ್ಗ್ಯವು ಉಜ್ವಲವಾಗಿದೆ. ಆದುದರಿಂದ ವಿಶೇಷ ರೀತಿಯಿಂದಲೇ ನಾನು ಈ ಧೇನುವನ್ನು ಆಹ್ವಾನಿಸುತ್ತೇನೆ !"

ಇಲ್ಲಿ ಶ್ರುತಿಯನ್ನು ಧೇನು ಎಂದು ಕರೆದಿರುವದಲ್ಲದೇ ಇದರ ಮಥಿತಾರ್ಥವಾದ ಕ್ಷೀರಕ್ಕಾಗಿ, ಕೈಹಚ್ಚುವ ಮಹಾನುಭಾವರು ಶುದ್ಧಹಸ್ತನಾಗಿರಬೇಕೆಂಬ ಆದೇಶವಿರುವಂತಿದೆ. (ಕ್ರೈಸ್ತ ಮಿಶನರಿಗಳಂತೆ ಅಥವಾ ಯಾವುದೇ ವಿಧವಾದ ವೇದ ದೂಷಕರಂತೆ ಕೈಹಚ್ಚಿದರೆ ಪ್ರಯೋಜನವಿಲ್ಲ ಎಂದರ್ಥ !)

ಋಗ್ವೇದದಲ್ಲೇ ದೈವೀವಾಕ್ ಆಗಿರುವ ಶ್ರುತಿಗೂ, ಧೇನುವಿಗೂ ಸ್ಪಷ್ಟವಾಗಿಯೇ ಸಮಾನಾರ್ಥವನ್ನು ಹೇಳುವ ಇನ್ನೊಂದು ಮಂತ್ರವೂ ಇದೆ. (VIII-100-11) ಇದೇ ಸುಪ್ರಸಿದ್ಧವಾದ ವಾಕ್ ಸೂಕ್ತ.

ದೇವೀಂ ವಾಚಮಜನಯಂತ ದೇವಾಸ್ತಾಂ ವಿಶ್ವರೂಪಾಃ
ಪಶವೋ ವದಂತಿ ।
ಸಾನೋಮಂದ್ರೇಷಮೂರ್ಜಂ ದುಹಾನಾ ಧೇನುರ್ವಾ
ಗಸ್ಮಾನುಪಸುಷ್ಟುತೈತು ॥

## ೨೧. ಪಂಚ'ಗವ್ಯ'ಗಳು–ಅವುಗಳ ಮಹಿಮೆ

ಇನ್ನು ಈ ಗೋವಿನಿಂದ ಉದಿಸಿದ ಗವ್ಯ ವಸ್ತುಗಳು, ಹೇಗೆ ಸಾಂಕೇತಿಕಾರ್ಥವುಳ್ಳವು ? ಎಂಬುದನ್ನು ಸ್ವಲ್ಪ ನೋಡೋಣ.

ತೈತ್ತಿರೀಯ ಬ್ರಾಹ್ಮಣದಲ್ಲಿ (1-4-8) ಶ್ರುತಿಯು ಎಲ್ಲರನ್ನೂ ಪಾವನ ಮಾಡುವವಳೆಂದೂ (ಪಾವಮಾನೀಃ), ಇದು ಋಷಿ ಸಂಭೃತವಾದ ದಿವ್ಯರಸ ವೆಂದೂ, ಇದನ್ನು ಅಧ್ಯಯನ ಮಾಡಿದವನಿಗೆ, ಸರಸ್ವತೀ ಸ್ವರೂಪಿಣಿ ಯಾದ ಶ್ರುತಿಯು ಒಳ್ಳೆಯ ಹಾಲು ಕೊಡುವ ಧೇನುವಾಗುವಳೆಂದೂ (ಸುದುಘಾಃ ಹಿ ಪಯಸ್ವತೀಃ), ಸಾಧಕನು ತನಗೆ ಬೇಕಾದ 'ಹಾಲು' 'ತುಪ್ಪ' 'ಮಧು' 'ಉದಕ'ಗಳನ್ನು ಇವಳಿಂದ ಪಡೆಯಬಹುದೆಂದೂ (ಕ್ಷೀರಂ ಸರ್ಪಿಃ ಮಧು ಉದಕಂ) ಇಹ ಪರಲೋಕಗಳನ್ನು ಪಡೆಯ ಬಹುದೆಂದೂ (ಇಮಂ ಲೋಕಂ ಅಥೋ ಅಮುಂ) ಇಂತಹ 'ಗೋವಿನ' ಪಾವನವಾದ ಸಹಸ್ರ ಧಾರಾರೂಪವಾದ ಕ್ಷೀರದಿಂದ ದೇವತೆಗಳೂ ತಮ್ಮನ್ನು ಪವಿತ್ರ ಮಾಡಿಕೊಳ್ಳುತ್ತಿದ್ದಾರೆಂದೂ (ಯೇನ ದೇವಾಃ ಪವಿತ್ರೇಣ ಆತ್ಮಾನಂ ಪುನತೇ ಸದಾ ತೇನ ಸಹಸ್ರ ಧಾರೇಣ), ಇಂತಹ 'ಕ್ಷೀರ' ಪಾನದಿಂದ ನಾವೂ ಬ್ರಹ್ಮವಿದರಾಗೋಣ ಎಂಬ ಪ್ರಾರ್ಥನೆಯೊಂದಿಗೆ (ತೇನ ಬ್ರಹ್ಮವಿದೋ ವಯಂ) ದಿವ್ಯವಾದ ವೇದಪ್ರಶಂಸೆಯೂ ಬಂದಿದೆ. ಇಲ್ಲಿ ಕ್ಷೀರ, ಸರ್ಪಿ, ಇತ್ಯಾದಿ ಗವ್ಯಗಳು ಸಾಂಕೇತಿಕಾರ್ಥವುಳ್ಳವು ಎಂಬ ವಿಷಯದಲ್ಲಿ ಸಂದೇಹವೇ ಇಲ್ಲ.

ಶತಪಥ ಬ್ರಾಹ್ಮಣದಲ್ಲಿ (VIII-5-1-3) ಮೊಸರು (ದಧಿ), ತುಪ್ಪ (ಘೃತ), ಮತ್ತು ಜೇನು (ಮಧು)ಗಳು ಕ್ರಮವಾಗಿ, ಈ ಪೃಥ್ವಿ ಲೋಕದ ಅಂತರಿಕ್ಷ ಲೋಕದ ಮತ್ತು ದ್ಯುಲೋಕದ ಸಾರಸಂಕೇತಗಳು ಎಂದು ಸ್ಪಷ್ಟವಾಗಿ ಹೇಳಿದೆ. ಭೂಃ ಭುವಃ ಸುವಃ ಎಂಬ ಮೂರು ವ್ಯಾಹೃತಿಗಳಿಂದ ಸಂಕೇತಿಸಲ್ಪಡುವ ಪ್ರಜ್ಞೆಯ, ಅನುಭವದ ಲೋಕತ್ರಯದ ಸಾರಸರ್ವಸ್ವವೆಂಬಂತೆ ಈ ವಸ್ತುಗಳು "ದಧಿ ಹೈವಾಸ್ಯ ಲೋಕಸ್ಯ ರಸಃ ಘೃತಮಂತರಿಕ್ಷಸ್ಯ, ಮಧು ಅಮುಷ್ಯ" ಎಂದು ವರ್ಣಿಸಲ್ಪಟ್ಟಿವೆ. ಹಾಗೆಯೇ ಮಧು ಎಂದರೆ, "ಮಧೋಃ ಮದಕರಸ್ಯ ಧಾರಾಭಿಃ" ಎಂದು ಶ್ರೀ ಸಾಯಣರು, (ಋಕ್ ಸಂ. III-40-6ರಲ್ಲಿ) ಅರ್ಥ ಮಾಡಿರುವಂತೆ, ಸೋಮ ಶಬ್ದಕ್ಕೆ ಪರ್ಯಾಯವಾಗಿ ಬ್ರಹ್ಮಾನಂದವೆಂಬ ಸಾಂಕೇ ತಿಕಾರ್ಥವನ್ನು ಹೊಂದಿದೆ. ಹೀಗೆ ಗೋವುಗಳ ಕೊಡುಗೆಯಾದ, ಗವ್ಯ ರೂಪವಾದ, ಹವಿಸ್ಸನ್ನು ಯಜ್ಞದಲ್ಲಿ ಅರ್ಪಿಸುವುದೇ ದೇವತೆಗಳನ್ನು ಶಕ್ತ

ವರ್ಧಕರನ್ನಾಗಿ ಮಾಡುವುದಲ್ಲದೆ ಲೋಕಕ್ಕೂ ಕ್ಷೇಮಕರ. ಅಲ್ಲದೇ ಲೋಕ ಸೃಷ್ಟಿಗೂ ಈ ಗವ್ಯಗಳೇ ಸಾಧಕ, ಎಂಬ ಅರ್ಥವನ್ನು ಶ್ರುತಿ ಸ್ಮೃತಿಗಳಲ್ಲಿ ಹೇರಳವಾಗಿ ವಿವರಿಸಿರುವದನ್ನು ಭಾಷ್ಯಕಾರರು ಅನೇಕ ಕಡೆಗಳಲ್ಲಿ ಎತ್ತಿ ತೋರಿಸಿದ್ದಾರೆ. ಅದಕ್ಕಾಗಿಯೇ ಅಗ್ನಿ ದೇವನಿಗೆ ಮಾಡುವ ಪ್ರಾರ್ಥನೆಗಳಲ್ಲಿ ಮುಖ್ಯವಾಗಿ "ಹೇ ಅಗ್ನೇ, ನೀನು ನಮ್ಮಿಂದ ಅರ್ಪಿಸಲ್ಪಟ್ಟ ಘೃತವನ್ನು ಪಾನಮಾಡಿ, ರುಚಿಕರ 'ಗವ್ಯ'ವಾದ ಮಧುವನ್ನು ಸೇವಿಸಿ ತಂದೆಯು ಮಗನನ್ನು ಕಾಪಾಡುವಂತೆ ಇವನನ್ನು (ಬ್ರಹ್ಮಚಾರಿಯನ್ನು) ಸಂರಕ್ಷಿಸು" ಎಂದು ಪ್ರಾರ್ಥಿಸಲಾಗಿದೆ.

ಘೃತಂ ಪೀತ್ವಾ ಮಧು ಚಾರು ಗವ್ಯಂ ಪಿತೇವ ಪುತ್ರಂ
ಅಭಿರಕ್ಷತಾತ್ ಇಮಂ (ತೈ. ಸಂ. I–3–14)

ತೈತ್ತಿರೀಯ ಆರಣ್ಯಕದಲ್ಲಿ (II–9) ಋಷಿಗಳು ಹೇಗೆ ಉಂಟಾದ ರೆಂಬ ವಿಷಯಕ್ಕೆ ಹೀಗೆ ವಿವರಣೆ ಇದೆ. "ಹುಟ್ಟು ಸಾವಿಲ್ಲದ ಗೋವುಗಳು ತಪಸ್ಸನ್ನು ಮಾಡಿದಾಗ, ಬ್ರಹ್ಮದೇವನು ಅವುಗಳಿಗೆ ಸರ್ವತೋಮುಖವಾದ ದೃಷ್ಟಿಯನ್ನು ಅನುಗ್ರಹಿಸಿದನು. ಅವೇ ಋಷಿಗಳಾದವು. ಇದೇ ಋಷಿಗಳ ಋಷಿತ್ವ." ಇಲ್ಲಿ 'ಅಜಾನ್, ಪೃಶ್ನೀನ್' ಎಂಬ ಶಬ್ದಗಳು, 'ಗೋ' ಪರ್ಯಾಯವಾಗಿ ಬಂದಿವೆ. ಯಜ್ಞಕಾಮರಾದ ಮುಂದಿನ ಋಷಿಗಳು ಈ 'ವೇದಮಯಿಯಾದ ಗೋ'ವನ್ನು ಉಪಾಸನೆ ಮಾಡಿದಾಗ "ಋಗ್ವೇದವನ್ನು ಅಧ್ಯಯನ ಮಾಡಿದವನು ಹಾಲಿನ ನದಿಯ ದಡದಲ್ಲಿಯೂ, ಯಜುರ್ವೇದಾಧ್ಯಾಯಿಯು ತುಪ್ಪದ ನದಿಯ ದಡದಲ್ಲಿಯೂ, ಸಾಮಶಾಖಾಧ್ಯಾಯಿಯು ಸೋಮರಸ ಪ್ರವಾಹದ ದಡದಲ್ಲಿಯೂ ಅಥರ್ವವೇದ ಅಧ್ಯಾಯಿಯು ಜೇನಿನ ನದಿಯ ದಡದಲ್ಲಿಯೂ, ಇದ್ದು ತಮ್ಮ ಪಿತೃಗಳಿಗೆ ಸ್ವಧಾಕಾರದಿಂದ ತೃಪ್ತಿಯನ್ನು ಉಂಟು ಮಾಡುವರು. ತೃಪ್ತರಾದ ಆ ದೇವತೆಗಳು ಅವರಿಗೆ ಆಯುಷ್ಯ. ತೇಜಸ್ಸು, ವರ್ಚಸ್ಸು, ಐಶ್ವರ್ಯ, ಯಶಸ್ಸು, ಬ್ರಹ್ಮ ವರ್ಚಸ್ಸು, ಆಹಾರ ಸಮೃದ್ಧಿಗಳನ್ನು ಕೊಟ್ಟು ತೃಪ್ತಿಪಡಿಸುವರು" ಎಂದು ಹೇಳಿದೆ. ಇಲ್ಲಿಯೂ 'ಗವ್ಯ'ಗಳು ಸಾಂಕೇತಿಕಾರ್ಥವನ್ನು ಪಡೆದಿರುವುದು ಸ್ಪಷ್ಟ. ಧರ್ಮಕ್ಕೆ ವಿರುದ್ಧವಲ್ಲದ ಅರ್ಥವು ಹಾಲಾಗಿಯೂ, ಧರ್ಮ ವಿರುದ್ಧವಲ್ಲದ ಕಾಮ

ಭೋಗವು ಪೊಸರಾಗಿಯೂ, ಧರ್ಮವೇ ಬೆಣ್ಣೆಯಾಗಿಯೂ, ಇದೂ ಕರಗಿ ತಿಳಿಯಾದ ತುಪ್ಪವು, ಮೋಕ್ಷಾನಂದ ಸ್ವರೂಪವಾದ ತುಪ್ಪವಾಗಿಯೂ, ಬ್ರಹ್ಮಜ್ಞಾನಕ್ಕೆ ಸಂಕೇತವಾಗಿಯೂ ಒಂದಿರುವಂತೆ ಅಲ್ಲಲ್ಲಿಯೇ ವೇದದಲ್ಲಿ ಕಾಣುವುದು, ಇಂತಹ 'ಗವ್ಯ' ಗಳನ್ನು ಅನುಗ್ರಹಿಸುವ ಜ್ಞಾನಸ್ವರೂಪಿಣಿ ಯಾದ, ಲೋಕ ಮಾತೆಯಾದ, ಶ್ರುತಿಮಯಿಯಾದ, ವಾಕ್ ಸ್ವರೂಪಿಣಿ ಯಾದ, ಕಾಮಧೇನುವು ಅನಂತ ಮಹಿಮಳಾದ ಅದಿತಿಯೆಂದೂ, ಇವಳಿಗೆ ಎಂದೆಂದೂ ರೋಗ ಸಂಬಂಧವೇ ಇಲ್ಲವೆಂದೂ, ಇವಳನ್ನು 'ಕೊಲ್ಲತಕ್ಕದ್ದಲ್ಲ ಎಂದೂ, ವೇದವೇ ಆದೇಶ ನೀಡಿದೆ. **"ಮಾ ಗಾಂ ಅನಾಗಾಂ ಅದಿತಿಂ ವಧಿಷ್ಟ"** (ಋ, ಸಂ. VIII–101–15 ).

ಹೀಗೆ 'ಗೋವಧೆ'ಯು ವಾಸ್ತವಾರ್ಥದಲ್ಲೂ ಸಾಂಕೇತಿಕಾರ್ಥದಲ್ಲೂ ಮಹಾಪಾತಕಗಳಲ್ಲಿ ಮುಖ್ಯವಾಗಿ ಪರಿಗಣಿಸಲ್ಪಟ್ಟಿದೆ. ವಸ್ತುತಃ ಧೇನು ವಾದ ಗೋವನ್ನೂ ಸಾಂಕೇತಿಕವಾದ 'ಗೋ'ವಾದ ಬ್ರಾಹ್ಮಣನನ್ನೂ ಒಟ್ಟಿಗೆ ಸೇರಿಸಿ **"ಗೋಬ್ರಾಹ್ಮಣೇಭ್ಯಃ ಶುಭಮಸ್ತು ನಿತ್ಯಂ"** ಎಂದು ಸಹಸ್ರಾರು ವರ್ಷಗಳಿಂದಲೂ ಒಂದೇ ಸಮನೆ ನಮ್ಮ ದೇಶದಲ್ಲಿ ಪ್ರಾರ್ಥನೆ ಮಾಡಿಕೊಂಡು ಬರಲಾಗಿದೆ. ಗೋವಿನಲ್ಲಿ ಹೇಗೆ ಸಮಸ್ತ ದೇವತೆಗಳೂ ವಾಸಿಸುತ್ತಾರೋ ಹಾಗೆಯೇ ಬ್ರಾಹ್ಮಣನಲ್ಲೂ ಸಮಸ್ತ ದೇವತೆಗಳೂ ವಾಸ ಮಾಡುತ್ತಾರೆಂದೂ, ಆದ್ದರಿಂದ ವೇದಾರ್ಥವನ್ನು ತಿಳಿದ ಬ್ರಾಹ್ಮಣರಿಗೆ ದಿನದಿನವೂ ನಮಸ್ಕಾರವನ್ನು ಮಾಡಬೇಕೇ ಹೊರತು ಕೆಟ್ಟ ಮಾತುಗಳನ್ನಾಡ ಬಾರದೆಂದೂ, ಇದರಿಂದ ಮಾತ್ರ ದೇವತೆಗಳಿಗೆ ಪ್ರೀತಿಯಾಗುವುದೆಂದೂ ತೈತ್ತಿರೀಯಾರಣ್ಯಕದಲ್ಲಿ ( II–19 ) ಹೇಳಿದೆ :

**"ಯಾವತೀರ್ವೈ ದೇವತಾಃ ತಾಸ್ಸರ್ವಾಃ ವೇದವಿದಿ ಬ್ರಾಹ್ಮಣೇ ವಸಂತಿ, ತಸ್ಮಾತ್ ಬ್ರಾಹ್ಮಣೇಭ್ಯೋ ವೇದವಿದ್ಭ್ಯೋ ದಿವೇದಿವೇ ನಮ- ಸ್ಕುರ್ಯಾತ್ ನ ಅಶ್ಲೀಲಂ ಕೀರ್ತಯೇತ್ ಏತಾ ಏವ ದೇವತಾಃ ಪ್ರೀಣಾತಿ".**

ಬ್ರಾಹ್ಮಣನಿಗೆ, ವೇದ ವಿತ್ ಆದುದರಿಂದ, ಗೋವಿನಂತೆ ಪೂಜ್ಯತೆ, ಎಂದು ಹೇಳಿರುವುದರಿಂದ ಇದು ಜ್ಞಾನಿಗೆ ಸಲ್ಲತಕ್ಕ ಮರ್ಯಾದೆಗಾಗಿ ಕರೆ

ಕೊಟ್ಟಿರುವ ವೇದ ವಾಕ್ಯ. (ಬ್ರಾಹ್ಮಣರು ಸ್ವಾರ್ಥಪರತೆಯಿಂದ ಬರೆದು ಕೊಂಡುದಲ್ಲ !) "ಇಂಥ ಬ್ರಾಹ್ಮಣರು ಈಗ ಎಲ್ಲಿದ್ದಾರೆ ?" ಎಂದು ಕೇಳಿದರೆ, ಅವರು ಇರುವಲ್ಲಿಯೇ ಹುಡುಕಿದರೆ ಸಿಗುವರೇ ಹೊರತು ಇಲ್ಲದ ಕಡೆಯಲ್ಲಿ ಅಲ್ಲ. ಅವನು ಎಲ್ಲಿದ್ದರೆ ಅಲ್ಲಿ ಪೂಜೆ ಸಂದೇ ಸಲ್ಲುತ್ತದೆ. ಭಾರತೀಯ ಸಂಸ್ಕೃತಿಯ ಉನ್ನತಿ ಅವನತಿಗಳು ಗೋವಿನ ಉನ್ನತಿ ಅವನತಿಗಳನ್ನೂ ಬ್ರಾಹ್ಮಣನ ಉನ್ನತಿ ಅವನತಿಗಳನ್ನೂ ಆಶ್ರಯಿಸಿಯೇ ಇದೆ ಎಂಬುದು ಚಾರಿತ್ರಿಕ ಪ್ರಸಿದ್ಧ. ಬ್ರಾಹ್ಮಣನಿಗೇ ವೇದವು ಬೇಡವಾದಾಗ ಉಪ್ಪಿಗೆ ಉಪ್ಪಿನ ಶಕ್ತಿ ಕಳೆದಂತಾಗಿ ಅದಕ್ಕೆ ಉಪ್ಪು ಹಚ್ಚುವವರಾರು ? ಎಂದು ಕೇಳಿದಂತಾಗುತ್ತದೆ. ಬ್ರಹ್ಮನಿಷ್ಠನಾದ ಬ್ರಾಹ್ಮಣನು ವೇದವಿತ್ತಾಗಿ ಎಂತಹ ಘೋರ ಅಧರ್ಮವನ್ನೂ ಸತ್ಯ, ತ್ಯಾಗ, ದಮೆಗಳಿಂದ ಎದುರಿಸಬಲ್ಲನೆಂದು ಕನ್ನಡ ನಾಡಿನಲ್ಲಿ ಪ್ರಸಿದ್ಧವಾದ ಪುಣ್ಯಕೋಟಿ ಎಂಬ ಗೋವಿನ ಕಥೆಯು ಮಾರ್ಮಿಕವಾಗಿ ತಿಳಿಸಿಕೊಡುತ್ತದೆ. ಇಂದಿನ ದೃಷ್ಟಿಯಿಂದ ನೋಡಿದಾಗ 'ಗೋವಿನ ಕಥೆ'ಯು ಕೇವಲ ಗೋಳಿನ ಕಥೆಯಾಗಿದೆ. ಇದನ್ನು ಉದ್ಧಾರ ಮಾಡುವುದು ಗೋ ಪ್ರೇಮಿಗಳೆಲ್ಲರ ಈಗಿನ ಪ್ರಥಮ ಕರ್ತವ್ಯ.



॥ ಶ್ರೀ ಕೃಷ್ಣಾಯ ಪರಬ್ರಹ್ಮಣೇ ನಮಃ ॥

# ೨. ಸೂರ್ಯ – ಜ್ಯೋತಿ

ಪ್ರತಿಪುರುಷಮನೇಕಾಃ ಪ್ರತ್ಯವಸ್ಥಂ ವಿಚಿತ್ರಾಃ
ಶುಭಗತಿಷು ಧಿಯೋ ಯಃ ಚೋದಯತ್ಯಂಜಸಾ ನಃ ।
ಅಖಿಲಚಿದಚಿದಂತರ್ಯಾಮಿ ತದ್ವಿಷ್ಣುಸಂಜ್ಞಂ
ಸವಿತುರಹಮುಪಾಸೇ ತಸ್ಯ ದೇವಸ್ಯ ಭರ್ಗಃ ॥

## "ಪ್ರವೇಶ"

ಆಂಗಿರಸ ಋಷಿಗಳು ಯಾವ **ಅಂತರಂಗದ ಬೆಳಕಿನ** ಸಂರಕ್ಷಣೆಗಾಗಿ ಹೋರಾಟ ನಡೆಸಿ ಆತ್ಮಾತ್ಮೀಯ ಸಮರ್ಪಣವನ್ನು ಮಾಡಿದರೆಂದು ಈವರೆಗೆ ನೋಡಿದ್ದಾಯಿತು. ಕಳೆದು ಹೋಗಿದ್ದ ಈ ಬೆಳಕನ್ನು ಪುನಃ ಸಂಪಾದಿಸುವಲ್ಲಿ 'ಸರಮೆ'ಯ ಪಾತ್ರವನ್ನೂ ವಿವೇಚಿಸಿದ್ದಾಯಿತು. ಈ ಬೆಳಕನ್ನು ಅಪಹರಿಸುವುದನ್ನೇ ಉದ್ಯೋಗವನ್ನಾಗಿವುಳ್ಳ 'ಪಣಿ'ಗಳ ಸ್ವರೂಪವನ್ನೂ ಗಮನಿಸಿದ್ದಾಯಿತು. ಈಗ ಈ **ಬೆಳಕಿನ ಸ್ವರೂಪವನ್ನು** ಮತ್ತಷ್ಟು ಸೂಕ್ಷ್ಮವಾಗಿ ವೇದವಾಕ್ಯಗಳ ಹಿನ್ನೆಲೆಯಲ್ಲಿ ಅಭ್ಯಸಿಸೋಣ.

ಜೀವನದಲ್ಲಿ **'ಹಗಲು'** ಮುಖ್ಯವೋ, **'ರಾತ್ರಿ'** ಮುಖ್ಯವೋ ? ಎಂಬುದು ಈಚೆಗೆ ಕೆಲವು ಮಹನೀಯರು ಎಬ್ಬಿಸಿರುವ ಒಂದು ಮುಖ್ಯ **ಅವಿವೇಕದ ಪ್ರಶ್ನೆ**. ಹಗಲು ರಾತ್ರಿಗಳು ಮಾನವನಿರ್ಮಿತವಲ್ಲ; ಮಾನವನು ನಿವಾರಿಸತಕ್ಕದ್ದೂ ಅಲ್ಲ. ವಿಶ್ವಕರ್ತನ ಸೃಷ್ಟಿಯ ಮರ್ಯಾದಂತೆ ಅವುಗಳಿಗೆ ಪರಸ್ಪರವಾಗಿರುವ ಸಂಬಂಧವನ್ನೂ, ಸ್ಥಾನಮಹತಿಯನ್ನೂ ಯಾವ 'ಸಂಶೋಧಕ'ನೂ ಅಳಿಸಿ ಹಾಕಲಾರ. ಹಗಲು ನಮ್ಮ ಎಲ್ಲ ದೈನಂದಿನ ವ್ಯಾಪಾರಕ್ಕೂ ಅತ್ಯವಶ್ಯವೆಂಬುದು ನಿಜ. ಆದರೆ ಉಜ್ವಲನಾದ, ಶ್ವೇತ ವರ್ಣದ ಆದಿತ್ಯನು, ರಾತ್ರಿಯೆಂಬ ಕರಿಯಬಣ್ಣದ ಗೋವಿನ ಬಿಳಿಯ ಕರುವಾಗಿದ್ದಾನೆಂದು ವೇದವೇ ಹೇಳಿ ರಾತ್ರಿಯನ್ನು ಮಾತೃಸ್ಥಾನದಲ್ಲಿರಿಸಿರುವುದು ಗಮನೀಯ :

ರಾತ್ರೇರ್ವತ್ಸಃ। ಶ್ವೇತ ಆದಿತ್ಯಃ॥ ( ತೈ.ಆ. I-10 )

ಹೀಗಿರುವಲ್ಲಿ ವೇದದರ್ಶನವು 'ರಾತ್ರಿಪೂಜಕ' ಜನಾಂಗವೊಂದರ ಮತ್ತು 'ಹಗಲುಪೂಜಕ' ಮತ್ತೊಂದು ಜನಾಂಗದ ಸ್ತೋತ್ರಪಾಠಗಳ ಗೊಂದಲ ಸಂಮ್ಮಿಶ್ರಣವಾಗಿದೆಯೆಂದು ಕೆಲಪರು ಅಪಪ್ರಚಾರದ ಅಪ-ಸಿದ್ಧಾಂತವನ್ನು ಹರಡುತ್ತಿರುವುದು ವೈದಿಕ ಪ್ರಪಂಚದ ಇತ್ತೀಚಿನ ಬಹು ದೊಡ್ಡ ವಿನೋದವಾಗಿದೆ. ವೇದದಲ್ಲಿ ಜೀವನದ ಬಗೆಗೆ ಹರ್ಷ, ಉತ್ಸಾಹ, ಆಸಕ್ತಿಗಳು ಮಾತ್ರ ಇದ್ದು ಪ್ರವೃತ್ತಿ ಮಾರ್ಗವನ್ನಷ್ಟೇ ಕೊಂಡಾಡಲಾಗಿದೆ ಯೆಂದೂ, ಉಪನಿಷತ್ತುಗಳಲ್ಲಿ ವೈರಾಗ್ಯ, ಜುಗುಪ್ಸೆ, ಅನಾಸಕ್ತಿ ಭಾವಗಳು ಮಾತ್ರ ತೋರಿದ್ದು ನಿವೃತ್ತಿ ಮಾರ್ಗವನ್ನಷ್ಟೇ ಕೊಂಡಾಡಲಾಗಿದೆಯೆಂದೂ ಹೀಗೆ ಈ ಸಾಹಿತ್ಯಪ್ರಕಾರಗಳು ಒಂದೇ ಜನಾಂಗದ, ಅಥವಾ ಒಂದೇ 'ವರ್ಣ' ದವರ, ಅಥವಾ ಒಂದೇ ದರ್ಶನದ ಪ್ರತೀಕವಾದ ಸಾಹಿತ್ಯವಲ್ಲವೆಂಬ ಒಡಕಿನ ಅಪಶ್ರುತಿಯ ಕುಹಕವಾದವನ್ನು ಪ್ರಪ್ರಥಮವಾಗಿ ಮುಂದೂಡಿದವರು ಪಾಶ್ಚಾತ್ಯ 'ಸಂಶೋಧಕರು'. ಅವರು ತೋಡಿಟ್ಟ ದೊಡ್ಡ ಹಳ್ಳದಲ್ಲಿ ಬಿದ್ದ ಕೆಲವು 'ನಮ್ಮವರು' ಇನ್ನೂ ಮೇಲೆ ಹೇಳಿದಂತೆ ಬರೆಯುತ್ತಿರುವುದು ಬಹು ದುರದೃಷ್ಟಕರ.

"ಪ್ರವೃತ್ತಿಂಚ ನಿವೃತ್ತಿಂಚ ಜನಾ ನ ವಿದುಃ ಆಸುರಾಃ" ಎಂಬ ಭಗವಂತನ ಗೀತಾವಾಣಿಯಂತೆ, ಪ್ರವೃತ್ತಿ ನಿವೃತ್ತಿ ಸ್ವರೂಪಗಳನ್ನೇ ಅರಿಯು ದವರ ದಾರಿ ಇದು. ಜಗತ್ತಿನ ಯಾವುದೇ ಭಾಗದಲ್ಲಿ ಯಾವುದೇ ಕಾಲದಲ್ಲಿ ಉದಿಸಿ ಬಂದ ಯಾವುದೇ ತತ್ತ್ವಶಾಸ್ತ್ರ ಪ್ರಕಾರದಲ್ಲಿಯೂ ಸುಖದುಃಖಗಳ ಸಮಾನ ಪರಿಗಣನೆಯೂ, ವಿವೇಚನೆಯೂ, ಪರಿಜ್ಞಾನವೂ ಇದ್ದೇಇರುವುದು ಸರ್ವವಿದಿತ. ದುಃಖದ ಜ್ಞಾನವೇ ಇಲ್ಲದವನಿಗೆ ಸುಖದ ಬಗೆಗೆ ಮಾತ್ರ ಜ್ಞಾನವೋ, ದಾಹವೋ ಇರುವುದು ಶಕ್ಯವೇ ? ಹಾಗೆಯೇ ಸುಖಾನು ಭೂತಿಯ ಪ್ರಜ್ಞೆಯೇ ಇಲ್ಲದವನಿಗೆ ದುಃಖವು ದುಃಖವಾಗಿ ಕಾಣುವುದಾದರೂ ಹೇಗೆ ? ಸಕಲ ಮಾನವ ಜನಾಂಗವೂ ಬಯಸುವುದು ಸುಖವನ್ನೇ ಮಾತ್ರ ವಾದರೂ ಈ ಬಯಕೆಯ ಬೆನ್ನಿಗೇ ಅನಿವಾರ್ಯವಾದ ದುಃಖವಿಲ್ಲದಿದ್ದರೆ, ಬಯಕೆಗೆ ಅರ್ಥವಾದರೂ ಏನು ? ಹೀಗೆ ವೇದದ ಕೆಲವು ಭಾಗಗಳು ಸುಖದ ಹಿನ್ನೆಲೆಯಲ್ಲೇ ಬಂದಿವೆಯೆಂದೂ, ಮತ್ತೆ ಕೆಲವು ದುಃಖದ ಹಿನ್ನೆಲೆಯಲ್ಲೇ

ಬಂದಿವೆಯೆಂದೂ ವಾದಿಸುವವರಿಗೆ ಜೀವನಸ್ವರೂಪವೇ ವೈಯ್ಯಕ್ತಿಕವಾಗಿ ಅರ್ಥವಾಗಿಲ್ಲವೆಂದು ಹೇಳದೇ ವಿಧಿಯಿಲ್ಲವಾಗಿದೆ.

ವೇದಸಂಹಿತೆಗಳಲ್ಲಿ ಶತ್ರುದಮನಾರ್ಥವಾಗಿ ದೇವತಾ ಪ್ರಾರ್ಥನೆಗಳು ಹೇರಳವಾಗಿ ಬಂದಿವೆಯೆಂಬುದು ನಿರ್ವಿವಾದ. ಈ ಶತ್ರುಗಳು ಯಾರು ಎಂಬ ವಿಷಯದ ಸರಿಯಾದ ಗ್ರಹಿಕೆ ಇಲ್ಲದವರು ವೇದದಿಂದ ತಿಳಿಯುವು ದೇನು ?

"ಯತ ಇಂದ್ರ ಭಯಾಮಹೇ ತತೋ ನೋ ಅಭಯಂಕೃಧಿ"
"ಮಹಾಗ್ಂ ಇಂದ್ರೋ ವಜ್ರಬಾಹುಃಷೋಡಶೀಶರ್ಮಯಚ್ಛತು।
ಸ್ವಸ್ತಿನೋಮಘವಾಕರೋತು ಹನ್ತುಪಾಪ್ಮಾನಂ ಯೋಽ
ಸ್ಮಾನ್ದ್ವೇಷ್ಟಿ ॥

ಇತ್ಯಾದಿ ಅಭಯಪ್ರಾರ್ಥನಾರೂಪವಾಕ್ಯಗಳು ವೇದಸಂಹಿತಾ ಬ್ರಾಹ್ಮಣಗಳಲ್ಲಿ ಮಾತ್ರವಲ್ಲದೆ ಉಪನಿಷದ್ಭಾಗಗಳಲ್ಲಿಯೂ ಇವೆ. ಈಶೋ-ಪನಿಷತ್ತಿನ ಕೊನೆಯ ಮಂತ್ರದಲ್ಲಿರುವ ಪ್ರಾರ್ಥನಾಸ್ವರೂಪವೇನು ?

ಅಗ್ನೇ ನಯ ಸುಪಥಾ ರಾಯೇ ಅಸ್ಮಾನ್ .... .... ಯುಯೋಧಿ ಅಸ್ಮತ್ ಜುಹುರಾಣಮೇನಃ ಭೂಯಿಷ್ಠಾಂತೇ ನಮ ಉಕ್ತಿಂ ವಿಧೇಮ ॥"

("ಎಲೈ. ಅಗ್ನಿದೇವನೇ, ನಮ್ಮನ್ನು ಮಂಗಳವಾದ ಸನ್ಮಾರ್ಗದಲ್ಲಿ ಕರೆದುಕೊಂಡು ಹೋಗು... ಕುಟಿಲ ಮಾರ್ಗಪ್ರೇರಕಗಳಾದ ನಮ್ಮ ಅಂತಃ ಶತ್ರುಗಳೊಡನೆ ಹೋರಾಡಿ ಅವರನ್ನು ನಾಶಪಡಿಸು. ನಿನಗೆ ಮತ್ತೆ ಮತ್ತೆ ನಮಸ್ಕಾರೋಕ್ತಿಯನ್ನು ಅರ್ಪಿಸುತ್ತೇವೆ.

ಋಙ್ಮಂತ್ರವೊಂದು ನೇರವಾಗಿ ಉಪನಿಷತ್ತಿನ ಭಾಗವಾಗಿ ಇಲ್ಲಿ ಆವಿ-ರ್ಭವಿಸಿರುವುದರಲ್ಲಿ ಒಂದು ಒಳಮರ್ಮವೂ ಇದೆ. ಸಕಲ ಜಗದಂತ ರ್ಯಾಮಿಯಾದ ಭಗವಂತನನ್ನು ಈಶನೆಂದು ನಿರ್ದೇಶಿಸಿದ ಈ ಉಪನಿಷತ್ತು ಕೊನೆಯಲ್ಲಿ ಅಗ್ನಿಶರೀರಕನಾದ ಅವನಿಗೇ ಶರಣು ಹೋಗಿ, ಸನ್ಮಾರ್ಗ ಪ್ರತಿ ಬಂಧಕ ರೂಪ ಶತ್ರುಗಳ ನಿಗ್ರಹಕ್ಕಾಗಿ ಪ್ರಾರ್ಥಿಸಿರುವುದು ಬಹುಸ್ವಾರಸ್ಯ ವಾಗಿದೆ. ಇದರಿಂದ ವೇದದ ಇತರ ಭಾಗಗಳಲ್ಲಿ, ಮಂತ್ರಗಳಲ್ಲಿ, ಅಲ್ಲಲ್ಲೀ

ಬರುವ ಶತ್ರುದಮನ ಪ್ರಾರ್ಥನಾವಾಕ್ಯಗಳಿಗೆ ಸ್ಪಷ್ಟವಾದ ವೇದಾಂತಾರ್ಥವಿರುವುದನ್ನು ಇಲ್ಲಿ ಎತ್ತಿ ಹಿಡಿದಂತಿದೆ. "ಅಸತೋ ಮಾ ಸದ್ಗಮಯ...." ಎಂಬ ಬೃಹದಾರಣ್ಯಕ ಶ್ರುತಿಯಲ್ಲಿಯೂ ಇರುವುದು ಇದೇ ಪ್ರಾರ್ಥನೆಯಲ್ಲವೇ ? ಇತರ ಉಪನಿಷತ್ತುಗಳಲ್ಲಿಯೂ ಅವಿದ್ಯಾರೂಪ ಶತ್ರುವರ್ಣನೆಯೂ, ಇದರ ನಿವಾರಣೆಯು ಪರಪ್ರಾಪ್ತಿಗೆ ಅತ್ಯವಶ್ಯವೆಂದೂ ಬಹುಪ್ರಕಾರಗಳಲ್ಲಿ ಉಕ್ತವಾಗಿಲ್ಲವೆ ?

ಕಿಂ ಬಹುನಾ ? ಪ್ರವೃತ್ತಿಯೆಂದರೆ ಭಗವಂತನ ಕಡೆಗೆ ನಡೆಯುವ ದಾರಿಯೆಂದೂ, ನಿವೃತ್ತಿಯೆಂದರೆ ತದ್ವಿರುದ್ಧವಾದ ಅವಿದ್ಯಾಸ್ವರೂಪ ಶತ್ರುಗಳ ಕಡೆಯಿಂದ ವಿಮುಖರಾಗಿ ನಡೆಯುವುದೆಂದೂ ಗ್ರಹಿಸಿದ ಪಕ್ಷದಲ್ಲಿ, ಪ್ರವೃತ್ತಿ ನಿವೃತ್ತಿಗಳಲ್ಲಿ ವೇದದ ಯಾವುದೇ ಎರಡು ಭಾಗಗಳ ನಡುವೆ ಪರಸ್ಪರ ವಿರೋಧ ಧ್ವನಿಗಳು ಮೇಲ್ನೋಟಕ್ಕಾದರೂ ಕಾಣುವ ಸಂಭವವೇ ಇರುವುದಿಲ್ಲ. ಜೀವನದಿಂದ ಪಲಾಯನ ಮಾಡಿದ ಹೊರತು 'ಶಾಂತಿ' ಯಿಲ್ಲವೆಂಬ ವಾದವೇ "ನಿವೃತ್ತಿ ಮಾರ್ಗ"ವೆನಿಸುವುದಾದರೆ ಇದು ವೇದ ವಿರುದ್ಧ ಸಿದ್ಧಾಂತವಾಗಿದ್ದು, ಜೈನ ಬೌದ್ಧ ಮುಂತಾದ ನಿರಾಶಾವಾದಿಗಳ ಗ್ರಂಥಗಳಲ್ಲಿ ಕಾಣತಕ್ಕದ್ದಾಗಿದೆ. ಇದನ್ನೇ ವೇದ ದರ್ಶನದಲ್ಲಿ ಕಾಣ ಹೊರಡುವನಿಗೆ ಕಣ್ಣಿಲ್ಲವೆಂದೋ, ದುರುದ್ದೇಶವಿದೆಯೆಂದೋ ಮಾತ್ರ ಹೇಳಬಹುದೇ ವಿನಾ ಬೇರೇನು ಹೇಳಲಾದೀತು ? ಪಶುಪುತ್ರಮಿತ್ರವೃದ್ಧಿಗಾಗಿ ವೇದದಲ್ಲಿ ಪ್ರಾರ್ಥನೆಯಿರುವುದು ದಿವ್ಯಜೀವನಕ್ಕೆ ಹೇಗೆ ವಿರುದ್ಧ ? ಕಣ್ಣು, ಕಿವಿ ಮುಂತಾದ ಇಂದ್ರಿಯಗಳು ಭದ್ರವಾಗಿರಬೇಕೆಂದೂ, ಸ್ಥಿರವಾದ ಅಂಗಗಳೊಡನೆ ಕೂಡಿ ಆಯುಸ್ಸಿರುವತನಕವೂ ದೇವಹಿತವನ್ನೇ ಆಚರಿಸುತ್ತಾ ಬಾಳಬೇಕೆಂಬ "ಭದ್ರಂಕರ್ಣೇಭಿ:..." ಮಂತ್ರವು, ಋಙ್ಮಂತ್ರ ಮಾತ್ರವಲ್ಲದೆ, ಅನೇಕ ಉಪನಿಷತ್ತುಗಳಿಗೂ ಏಕೆ ಶಾಂತಿಪಾಠ ಮಂತ್ರವಾಗಿದೆ ಎಂದು ಕೇಳುವವರಿಲ್ಲವೇ ? "ಸತ್ಕರ್ಮಗಳನ್ನು ಆಚರಿಸುತ್ತಲೇ ನೂರು ವರ್ಷ ಬಾಳಲು ಇಚ್ಛಿಸಿರಬೇಕು" ಎಂದೂ, "ಇದಲ್ಲದೆ ಪಾಪಲೇಪವಿಲ್ಲದೇ ಬಾಳಲು ಬೇರೆ ದಾರಿಯಿಲ್ಲ" ಎಂದೂ ಸಂದೇಶವಿರುವುದು ಈಶೋಪನಿಷತ್ತಿನಲ್ಲಲ್ಲವೇ? ವೈರಾಗ್ಯವೆಂದರೆ ಸನ್ಮಾರ್ಗ ವಿರೋಧಿ ಶಕ್ತಿಗಳಲ್ಲಿ ಅಪ್ರೀತಿಯೆಂದೂ, ಅನಾಸಕ್ತಿಯೆಂದರೆ ಇಂತಹ ವಿಷಯಗಳಲ್ಲಿ ಪ್ರೀತಿಯಿಲ್ಲದಿರುವುದೆಂದೂ ಸರಿಯಾಗಿ ಗ್ರಹಿಸಿದರೆ ಇಂತಹ ದುರ್ವಾದಗಳಿಗೆ ಅವಕಾಶವೇ ಸಂಭವಿಸುವುದಿಲ್ಲ.

ಶ್ರುತಿಯ ಯಾವುದೇ ಭಾಗದಲ್ಲಿ ದುಃಖಪ್ರಶಂಸೆಯಾಗಲೀ, ಜೀವನ ತಿರಸ್ಕಾರ ಭಾವವಾಗಲೀ, ಒಳ್ಳೆಯ ವಿಷಯಗಳ ಬಗೆಗೆ ಜುಗುಪ್ಸೆಯಾಗಲೀ ಇರುವುದಿಲ್ಲ. ಮರಣ, ಮರಣೋತ್ತರ ಸ್ಥಿತಿಯ ಬಗೆಗೆ ಅತಿಪ್ರೀತಿಯಾಗಲೀ ಅತ್ಯನಾದರವಾಗಲೀ ಇಲ್ಲ. ಇಂಥ ವಿಷಯಗಳನ್ನೇ ಒಳಗೊಂಡಿರುವ ಕಠೋಪನಿಷತ್ತಿನಲ್ಲಿ ಇಹಜೀವನದ ಬಗೆಗೆ ಎಷ್ಟೊಂದು ಗೌರವ. ಆದರ ಭಾವವಿದೆಯೆಂಬುದನ್ನು ನಮ್ಮ ವೇದಸಂಸ್ಕೃತಿಯ ಪರಿಚಯ ಸಂ. ೨ರಲ್ಲಿ ವಿಸ್ತಾರವಾಗಿ ತೋರಿಸಲಾಗಿದೆ. ವೇದ ಸಂಹಿತೆಗಳ "ಕಾಲ"ಕ್ಕೆ ಜೀವನ ದಲ್ಲಿ ಮರಣವೇ ಇರಲಿಲ್ಲವೆಂದೂ, ಉಪನಿಷತ್ತುಗಳ "ಕಾಲ"ಕ್ಕೆ ಮರಣ ವೊಂದೇ ಸತ್ಯವಾಗಿತ್ತೆಂದೂ ಬಗೆಯುವುದು ಸಂಶೋಧನೆಯಾದೀತೆ ? ಕೃತಕೃತ್ಯತೆ, ಪರಿಪೂರ್ಣ ಜೀವನ, ಸಾರ್ಥಕ್ಯ, ಶಾಶ್ವತ ಆನಂದ ಪ್ರಾಪ್ತಿ ಇವುಗಳಿಗಾಗಿಯೇ ಹಂಬಲಿಸುವ ವೇದಸಾಹಿತ್ಯವು ಇವುಗಳನ್ನು ವಿರೋಧಿಸುವ ಶಕ್ತಿಗಳನ್ನು ಭಗವಂತನು ನಿಗ್ರಹಿಸಬೇಕೆಂದೂ. ಮಾನವನೂ ಎಚ್ಚರವಾಗಿದ್ದು ಈ ಶತ್ರುಗಳನ್ನು ಗೆಲ್ಲಬೇಕೆಂದೂ, ವೈರಾಗ್ಯ, ಇಂದ್ರಿಯನಿಗ್ರಹ ಮೊದ ಲಾದವು ಸಾಧನಗಳೆಂದೂ ಸಮಾನವಾಗಿಯೇ ಸರ್ವತ್ರ ಕರೆಕೊಟ್ಟಿದೆ. ಆದುದರಿಂದ "ಹಗಲು ಪೂಜೆ", "ರಾತ್ರಿ ಪೂಜೆ" ಎಂಬ (ಈಚಿನ ಆ್ಯಂಥ್ರೊ ಪಾಲಜಿಶಾಸ್ತ್ರಪ್ರಕ್ರಿಯೂ) ಶಬ್ದಗಳಿಗೆ ವೇದದಲ್ಲಿ ಜಾಗವೇ ಇಲ್ಲ. ಬೇರೆ ಕೆಲಸವಿಲ್ಲದಿದ್ದಲ್ಲಿ ಇವರು ವೇದಕ್ಕೆ ಕೈ ಹಚ್ಚುವುದು ನ್ಯಾಯ ಸಮ್ಮತವಲ್ಲ !

ಚಾರ್ವಾಕಮತಸ್ಥನು ಬಯಸುವ, ಪರಲೋಕ ಪುಣ್ಯಪಾಪ ತಿರಸ್ಕಾರ ಪೂರ್ವಕವಾದ, ಇಹಲೋಕಜೀವನ ಪ್ರೀತಿಯೆಂಬುದೇ "ಹಗಲು ಪೂಜೆಯೂ", ಜೈನಾದಿಮತಸ್ಥನು ಬಯಸುವ ಇಹಲೋಕ ತಿರಸ್ಕಾರ ಪೂರ್ವಕವಾದ ಪರಮ ಜುಗುಪ್ಸಾಭಾವವೇ "ರಾತ್ರಿಪೂಜೆಯೂ" ಎಂದು ಭಾವಿಸಲ್ಪಡುವುದಾದರೆ, ವೇದದರ್ಶನದಲ್ಲಿ ಇವೆರಡಕ್ಕೂ ಯಾವ ಸ್ಥಾನ ಮಾನಗಳೂ ಇಲ್ಲ. ಇಹ ಜೀವವು ನಿತ್ಯ, ಪವಿತ್ರ, ಅನಿವಾರ್ಯ. ಆದರೆ ಹಾಗೆಯೇ ಅದು ಅಪರಿಪೂರ್ಣ, ಅಶಾಶ್ವತ. ಪರವೂ ಸತ್ಯ, ಪವಿತ್ರ, ಅನಿವಾರ್ಯ. (ಸ್ವರ್ಗ–ನರಕಾದಿ ಪ್ರಭೇದಗಳು ಮಾನವ ನಿರ್ಮಿತ ಗಳಲ್ಲ.) ಆದರೆ ಇದೂ ಇಹದ ಆಶ್ರಯವಿಲ್ಲದೇ ಇಲ್ಲ. ಇವೆರಡರ ಸುಂದರ ಸಮನ್ವಯವನ್ನು ಬೋಧಿಸುವುದೇ ವೇದ ದರ್ಶನದ ವೈಶಿಷ್ಟ್ಯ. ಇಹ

ವೊಂದನ್ನೇ ನಂಬಿದ ಮೂಢರನ್ನೂ, ಇಹವನ್ನು ಸರ್ವಥಾ ತಿರಸ್ಕರಿಸುವ ಮೂಢರನ್ನೂ ವೇದವು ಬಹಿರಂಗವಾಗಿಯೇ ಟೀಕಿಸಿದೆ. ಪರದ ವಿಷಯಕ್ಕೂ ಅಷ್ಟೆ. **ಇದು ಸಮತೂಕದ ಸಿದ್ಧಾಂತ.** ಆದುದರಿಂದ ವೇದದಲ್ಲಿ ಪ್ರಶಂಸಿತವಾಗಿರುವ "ಬೆಳಕಿನ" ಸ್ವರೂಪ, ಶಾಶ್ವತ ಆನಂದದ ಅನುಭೂತಿ ಯನ್ನು ಕುರಿತದ್ದಾಗಿದೆ. "ಕತ್ತಲೆ"ಯೆಂಬುದು ಅಂಧಕಾರಮಯ ಜೀವನದ ಪ್ರಕಾರ.

ಬೆಳಕನ್ನು ಕಾಣುವವನಿಗೆ ಕತ್ತಲೆಯಲ್ಲಿ ಕೊಂಚಕಾಲವಿರುವುದು ಅವಶ್ಯ ವಾಗಬಹುದು. ಇಷ್ಟು ಮಾತ್ರವೇ ಕತ್ತಲೆಯ ಪ್ರಯೋಜನ. ಈ ದೃಷ್ಟಿ ಯಿಂದ ಭಗವತ್ಸೃಷ್ಟಿಯಲ್ಲಿ ಕತ್ತಲೆಗೂ ಜಾಗವಿದ್ದೇ ಇದೆ. ಇದನ್ನು ಎಲ್ಲಿ ಯಾದರೂ ವೇದದಲ್ಲಿ ಹೇಳಿದ್ದರೆ, ಇದು ಕತ್ತಲೆಯ ಪ್ರಶಂಸೆಯಲ್ಲ! ಅನಿವಾರ್ಯ ಸತ್ಯವೊಂದರ ದೃಢವಾದ ಅರಿವು ಮಾತ್ರ. ನಮಗೆ ಬೇಕಾ ಗಲೀ ಬೇಡವಾಗಲೀ, ರಾತ್ರಿಯೂ ಉಷಸ್ಸೂ ಸೂರ್ಯನಿಗೆ **"ಸಮಾನ ಬಂಧುಗಳು"** ಎಂದು ಋಗ್ವೇದವು ಬೋಧಿಸುತ್ತದೆ (I–113–2). ಅಲ್ಲದೆ ಇವರಿಬ್ಬರೂ ಶ್ವೇತ, ಕೃಷ್ಣವರ್ಣವನ್ನು ಪರಸ್ಪರ ಹೊಂದಿದ್ದು "ಅಮೃತ" ರಾಗಿರುವರೆಂದೂ, ಒಬ್ಬಳ ಹಿಂದೆ ಒಬ್ಬಳು ಕ್ರಮವಾಗಿ ಬಂದೇ ಬರತಕ್ಕವ ಳೆಂದೂ ಇವರಿಬ್ಬರ ಮುಖ್ಯ ಕೆಲಸವೇನೆಂದರೆ ಮಾನವರ ಕಾಲಪ್ರಮಾಣ ಗಳಾದ ಯುಗಗಳನ್ನೂ ಸವೆಯುವಂತೆ ಮಾಡತಕ್ಕದ್ದೆಂದೂ (I–92–11) ಹೇಳಿದೆ. ಇಡೀ ಋಗ್ವೇದ ಸಂಹಿತೆಯಲ್ಲಿ "ರಾತ್ರೀ ದೇವತಾ" ವಿಷಯಕ ವಾದ ಸೂಕ್ತವು ಒಂದೇ ಒಂದಾಗಿದ್ದು (X–127), ಅಲ್ಲಿಯೂ ಅವಳ ಕೆಲಸವು "ಕತ್ತಲೆಯನ್ನು ತನ್ನ (ನಕ್ಷತ್ರಗಳ) ಬೆಳಕಿನಿಂದ ಬಾಧಿಸುವುದೇ ಆಗಿದೆ"ಯೆಂದೂ (**ಜ್ಯೋತಿಷಾ ಬಾಧತೇ ತಮಃ**) ತಾನಾಗಿಯೇ ಉಷಸ್ಸಿಗೆ ದಾರಿ ಕೊಡುವವಳೆಂದೂ, ವಿಶ್ರಾಂತಿಕಾರಕಳಾಗಿ ಸಕಲ ಪ್ರಾಣಿ ಪಕ್ಷಿಗಳಿಗೂ ಅನುಕೂಲ ಮಾಡಿಕೊಟ್ಟಿರುವಂತೆ ಮಾನವನಿಗೂ ಪ್ರಸನ್ನಳಾಗಲೆಂದೂ, ಪ್ರಶಂಸಿಸಿ ಪ್ರಾರ್ಥಿಸಲಾಗಿದೆ.

**ಯಾವಯಾ ವೃಕ್ಯಂ ವೃಕಂ ಯವಯಸ್ತೇನಂ ಊರ್ಮ್ಯೇ।**
**ಅಥಾ ನಃ ಸುತರಾ ಭವ॥** (X–127–6)

"ಹೇ ರಾತ್ರಿದೇವಿ ! ನಾವು ರಾತ್ರಿ ನಿದ್ರಿಸುವಾಗ ಹೆಣ್ಣು ತೋಳ–ಗಂಡುತೋಳದಂಥ ದುಷ್ಟಮೃಗಗಳಿಂದಾಗಲೀ, ಕಳ್ಳಕಾರರಿಂದಾಗಲೀ ನಮಗೆ ಬಾಧೆ ಬಾರದಂತೆ ನಮ್ಮನ್ನು (ಹಗಲಿನ) ದಡಸೇರಿಸು." ಇದೇ ವೇದೋಕ್ತವಾದ ರಾತ್ರಿಯ ಪ್ರಾರ್ಥನೆ. ಇದರಲ್ಲಿ ಬಾಧಕವೇನು ? ಇಂದೂ ಇದೇ ಅಲ್ಲವೆ ಸಕಲ ಮಾನವಕೋಟಿಯ ಪ್ರಾರ್ಥನೆ ?

ಹಾಗೆ ನೋಡಿದರೆ ವೇದವಾಙ್ಮಯದಲ್ಲಿ ಪ್ರಶಂಸಿತವಾಗಿರುವುದು "ಹಗಲು ಪೂಜೆ"ಯೂ ಅಲ್ಲ. "ರಾತ್ರಿ ಪೂಜೆ"ಯೂ ಅಲ್ಲ. ಕೇವಲ ಸಂಧ್ಯಾಪೂಜೆ. ಮಾನವನು ಬಯಸುವುದು 'ಬೆಳಕ'ನ್ನಾದರೂ, ಅವನಿರುವುದು 'ಕತ್ತಲೆ'ಯಲ್ಲಿಯೇ. ದಿನದಿನವೂ 'ಬೆಳಕು' ಬರುತ್ತಿರುವುದಾದರೂ, ಸಾಯಂ ಸಂಧ್ಯಾಕಾಲದಲ್ಲಿ ಈ 'ಬೆಳಕು' ಅಸ್ತಮಿಸುವುದೆಂಬ ಭಯವೂ, ಪ್ರಾತಸ್ಸಂಧ್ಯೆಯಲ್ಲಿ ಕತ್ತಲೆ ಕಳೆದು ಬೆಳಕು ಎಷ್ಟು ಬೇಗ ಬಂದಿತೋ ಎಂಬ ತವಕ, ಆಕಾಂಕ್ಷೆಯೂ, ಮಾಧ್ಯಾಹ್ನಿಕ ಸಂಧ್ಯೆಯಲ್ಲಿ ಪೂರ್ವಾಹ್ಣವು ಕಳೆದು ಅಪರಾಹ್ಣವು ಬಂದಿತೆಂಬ ಕಳವಳವೂ ಹೀಗೆ ತ್ರಿಕಾಲದಲ್ಲಿಯೂ ಬೆಳಕು–ಕತ್ತಲೆಗಳಿಗೆ ಸಂಬಂಧಿಸಿದಂತೆ ಮಾನವನ ಮನಸ್ಥಿತಿಯಿರುತ್ತದೆ. ಇದು ಸಾಂಕೇತಿಕವೂ ಹೌದು. ಹೀಗೆ ಮಾನವ ಕೋಟಿಯ ಪ್ರಗತಿಪಥವೇ ಸಂಧ್ಯಾಕಾಲವಾಗಿದೆ. ಸಂಧ್ಯೆಯಲ್ಲಿ ಎಚ್ಚರವಿಲ್ಲದಿದ್ದರೆ ಕತ್ತಲೆಯಿಂದ ಕತ್ತಲೆಗೂ ಮೃತ್ಯುವಿನಿಂದ ಮೃತ್ಯುವಿಗೂ ಸಂಸರಿಸುತ್ತಾ, ದಿಕ್ಕುಗಾಣದ, ಅರ್ಥಶೂನ್ಯವಾದ ನರಕಪ್ರಾಯವಾದ ದುಃಖಮಯವಾದ ಜೀವನವನ್ನೇ ಹೊಂದುವುದು ಅನಿವಾರ್ಯವಾಗುತ್ತದೆ. ಇದನ್ನು ತಡೆಯುವದಕ್ಕಾಗಿಯೇ ವೈದಿಕ ಜೀವನದಲ್ಲಿ ಸಂಧ್ಯೋಪಾಸನವನ್ನು ವಿಧಿಸಲಾಗಿವೆ. ಸಂಧ್ಯಾತಿಕ್ರಮಣವು ಮಹಾಪಾಪವೆಂದೂ, ಸಂಧ್ಯಾಹೀನನು ಅಶುಚಿಯಾಗಿ ಸಕಲ ವೈದಿಕ ಕರ್ಮಗಳಿಂದಲೂ ಬಹಿಷ್ಕೃತನಾಗಿರುವನೆಂದೂ, ಮೂರು ಸಂಧ್ಯಾವಂದನಗಳನ್ನು ಕ್ರಮವಾಗಿ ಬಿಟ್ಟದ್ದೇ ಆದರೆ ಇಷ್ಟುಮಾತ್ರದಿಂದ "ದುರ್ಬ್ರಾಹ್ಮಣ" ನೆನಿಸುವನೆಂದೂ "ವ್ರಾತ್ಯ" ನಾಗುವನೆಂದೂ ಮುಂತಾಗಿ ಸಕಲಸ್ಮೃತಿಕಾರರೂ ಶ್ರುತಿಯ ಮರ್ಮವನ್ನನುಸರಿಸಿ ಒಮ್ಮತದ ತೀರ್ಪಿತ್ತಿರುವುದರಲ್ಲಿ ಎಷ್ಟೊಂದು ಅರ್ಥವಿದೆಯೆಂಬುದು ಗಮನೀಯ. ಬೆಳಕನ್ನೇ ಶಾಶ್ವತವಾಗಿ ಕಾಣಬೇಕೆಂಬ ದೃಢಬಯಕೆಯೂ, ಕತ್ತಲೆಯಿಂದ

ನಿರ್ಗಮಿಸಬೇಕೆಂಬ ದೃಢಸಂಕಲ್ಪವೂ ಮತ್ತಷ್ಟು ದಿನೇ ದಿನೇ ದೃಢತರವಾಗ ತಕ್ಕದ್ದೇ "ಸಂಧ್ಯಾ"ಕಾಲದಲ್ಲಿ.

ಪ್ರತಿಕ್ಷಣವೂ ಮಾರ್ಮಿಕಾರ್ಥದಲ್ಲಿ "ಸಂಧ್ಯಾ"ಕಾಲವೇ. ದೇವಶಕ್ತಿಗಳೂ ಅಸುರ ಶಕ್ತಿಗಳೂ, ನಿರಂತರವಾಗಿ ನಮ್ಮಲ್ಲಿ ಸಂಗ್ರಾಮ ನಡೆಸಿರುವುದರಿಂದ, ಮಾನವನ ಸಕಲ ಪ್ರವೃತ್ತಿಗಳಲ್ಲಿಯೂ, ಕ್ರಿಯೆಗಳಲ್ಲಿಯೂ ಒಳ್ಳೆಯ-ಕೆಟ್ಟ ಸಂಗತಿಗಳ ಸಂಮಿಶ್ರಣವು ಸರ್ವದಾ ಅವನೆದುರಿಗಿದೆ. ಇದರಲ್ಲಿ ಒಳ್ಳೆಯದನ್ನೇ ಸದಾ ಆಯ್ದುಕೊಳ್ಳುವುದು ಹೇಗೆ ಎಂಬುದೇ ವಿವೇಕಿಯ ಪ್ರಶ್ನೆ. ಆಕಸ್ಮಾತ್ ಒಂದು ಕೆಟ್ಟ ವಿಷಯವೋ, ವಿಚಾರವೋ, ಸಂಗೃಹೀತವಾದರೆ, ಕ್ಷಣಮಾತ್ರದಲ್ಲಿ ನಡೆಯುವ ಈ ಆಯ್ಕೆ ಅನೇಕ ಜನ್ಮಗಳ ಸುಕೃತ, ಸುಗತಿಗಳನ್ನು ನಾಶಮಾಡಿಬಿಡಬಹುದು. ಕೆಟ್ಟದ್ದನ್ನು ವರ್ಜಿಸುವುದೆಂತು ? ಒಳ್ಳೆಯದನ್ನೇ ಆಯ್ದುಕೊಳ್ಳುವುದೆಂತು ? **ಇದು "ಸಂಧ್ಯಾ"ಕಾಲದ ಪ್ರಧಾನ ಪ್ರಶ್ನೆ. "ದೇವೋ ವಃ ಪ್ರಾರ್ಪಯತು ಶ್ರೇಷ್ಠತಮಾಯ ಕರ್ಮಣೇ",** "ಭಗವಂತನು ನಿಮ್ಮನ್ನು ಶ್ರೇಷ್ಠ ಕರ್ಮಗಳಲ್ಲಿ ತೊಡಗಿಸಲಿ" ಎಂದು ಆಶಿಸುತ್ತದೆ ತೈತ್ತಿರೀಯ ಸಂಹಿತೆಯ ಪ್ರಧಾನ ಪ್ರಥಮ ಸೂಕ್ತಿ. ಗಾಯತ್ರೀ ಮಂತ್ರದ ಸಂದೇಶವೂ ಇದೇ. ಈ ಸಂದೇಶವನ್ನು ಸಾವಿರದೆಂಟು ಆವರ್ತಿ, ಅಥವಾ ನೂರೆಂಟು ಆವೃತ್ತಿ, ಕೊನೆಯ ಪಕ್ಷ ಇಪ್ಪತ್ತೆಂಟೋ, ಹತ್ತೋ, ಆವರ್ತಿ ಜಪಿಸುವುದರ ಮೂಲಕ, "ಸಂಧ್ಯೆಯಲ್ಲಿರುವ ವೇದಮಾರ್ಗಾವಲಂಬಿಯು ತನಗಿರಬೇಕಾದ ಪ್ರಧಾನ ಪ್ರಜ್ಞೆಯನ್ನು ದೃಢಪಡಿಸಿಕೊಳ್ಳುತ್ತಾನೆ, ತನ್ನಲ್ಲಿ ಭಗವಂತನ ಸಂಕಲ್ಪದ ಆವಿರ್ಭಾವವನ್ನು ಆಗಿಸಿಕೊಳ್ಳುತ್ತಾನೆ, ಭಗವದ್ವಶವರ್ತಿಯಾಗುತ್ತಾನೆ, ದುಃಖದ ಅಂತ್ಯವನ್ನು ಕಾಣುತ್ತಾನೆ. ಸಂಧ್ಯೆಯಲ್ಲಿಯೂ. ಪ್ರಾತಸ್ಸಂಧ್ಯೆಯೆಂಬುದು "ಉಷಸ್ಸು" ಎಂದು ಖ್ಯಾತವಾಗಿ, "ಅಸತೋ ಮಾ ಸದ್ಗಮಯ" ಎಂಬ ಪರಿಸ್ಥಿತಿಯನ್ನು ಮನದಟ್ಟು ಮಾಡಿಕೊಡುತ್ತದೆ; ಬೆಳಕು ಬಂದಿಲ್ಲ; ಕತ್ತಲೆಯು ತೊಲಗಿಲ್ಲ; ಈಗ ಶುಚಿರ್ಭೂತನಾದ ಸಂಧ್ಯೋಪಾಸಕನು "ಉಷೆ"ಯನ್ನು ಕಂಡು ಹಿಗ್ಗುತ್ತಾನೆ; ಹೀಗೆ ಸ್ತುತಿಸುತ್ತಾನೆ:

**ಇದಂ ಶ್ರೇಷ್ಠಂ ಜೋತಿಷಾಂ ಜ್ಯೋತಿರಾಗಾತ್ ಚಿತ್ರಃ**
**ಪ್ರಕೇತೋ ಅಜನಿಷ್ಟ ವಿಭ್ವಾ ।**

**ಯಥಾ ಪ್ರಸೂತಾ ಸವಿತುಃ ಸವಾಯ ಏವಾ ರಾತ್ರ್ಯುಷಸೇ ಯೋನಿಮಾರೈಕ್ ॥** (ಋ. ಸಂ. I-133-1 )

"(ಗ್ರಹನಕ್ಷತ್ರಗಳೆಂಬ) ಸಕಲ ಜ್ಯೋತಿಗಳೊಳಗೂ ಶ್ರೇಷ್ಠವಾದುದು ಈ ಉಷಸ್ಸು. ಇಂತಹ ಉಷೋದಯ (ಈಗ) ಆಯಿತು. (ಈಗ) ಅಂಧಕಾರಾವೃತವಾದ ಸರ್ವ ಪದಾರ್ಥಗಳ ಬಗೆಗೂ ಪ್ರಜ್ಞೆ ಪುನಃ ಆಗುವಂತೆ ವ್ಯಾಪ್ತವಾಗಿ ಉಷಸ್ಸಿನ ರಶ್ಮಿಗಳ ಆವಿರ್ಭಾವವೂ ಆಯ್ತು. ರಾತ್ರಿಯು ಸೂರ್ಯನಿಂದ ಉತ್ಪತ್ತಿಯಾದಂತೆಯೇ ರಾತ್ರಿಯಿಂದ ಈ ಉಷಸ್ಸೂ ಉತ್ಪತ್ತಿಯಾಗಿದೆ."

ಇಲ್ಲಿ "ಉಷಸ್ಸು" ಸಕಲಜ್ಯೋತಿಗಳಿಗಿಂತಲೂ ಶ್ರೇಷ್ಠವೆಂದು ಹೇಳಲ್ಪಟ್ಟಿರುವುದು ವಿಶೇಷ ಗಮನೀಯ. ವೈದಿಕನ ಮನಸ್ಸಿನ ಸಂಧ್ಯಾಕಾಲದ ಉಷಸ್ಸಿಗೇ ಇಲ್ಲಿ ಬಂದಿರುವ ವಿಶೇಷಣಗಳೆಲ್ಲವೂ ಪರಿಪೂರ್ಣವಾಗಿ ಒಪ್ಪುತ್ತವೆಯೆಂಬುದನ್ನು ಗಮನಿಸಬೇಕು. ಪರಮಾತ್ಮನ ಬಗೆಗೆ ದಿವ್ಯಜ್ಞಾನವು ಬ್ರಹ್ಮಾನುಭೂತಿಯ ಸ್ವರೂಪದಲ್ಲಿ ಆವಿರ್ಭವಿಸುವ ಸುಮುಹೂರ್ತದ ಪ್ರಥಮ ದೆಸೆ, ಪ್ರಥಮ ಪರ್ವವೇ ಈ 'ಉಷಸ್ಸು'. ನಿತ್ಯಬ್ರಹ್ಮಚರ್ಯದ ನಿತ್ಯ ಯೌವ್ವನಾವಸ್ಥೆಯಿದು; ನಿತ್ಯ ಜೀವನದ ತಾರುಣ್ಯವೂ ಇದು ಹೌದು. ಭಗವಂತನ ಬಗೆಗೆ ದಿವ್ಯಜ್ಞಾನವು ಆಗಿ ಹೋಗಿ ಮುಗಿಯತಕ್ಕದ್ದಲ್ಲದೇ ಅನವಧಿಕಾತಿಶಯವೂ, ಗಂಭೀರವೂ ಆದುದರಿಂದ ಭಗವದ್ಜ್ಞಾನಾನುಭೂತಿಯ ಯಾವುದೇ ಮುಖವಾಗಲೀ, ಅಂಶವಾಗಲೀ, ನಿತ್ಯನೂತನವೇ ಆಗಿದ್ದು. ಭಗವತ್ ಸ್ವರೂಪ ಗುಣವಿಭವ ಐಶ್ವರ್ಯ ಶೀಲಾದಿಗಳ ಅನವರತಾನುಭವವೆಂಬುದು ಸರ್ವದಾ 'ಉಷಸ್ಸಿ'ನಂತೆಯೇ ಆಹ್ಲಾದಕರವಾಗಿ, "ಉತ್ತಿಷ್ಠತ, ಜಾಗ್ರತ, ಪ್ರಾಪ್ಯವರಾನ್ನಿಬೋಧತ" ಎಂಬ ಕಾಠಕಶ್ರುತಿಯು ವಿನೂತನ ಸಂದೇಶವನ್ನೇ ನೀಡುತ್ತಿದೆ. 'ಉಷಸ್ಸಿನ' ಪ್ರಕಾಶದ ಹಿರಿಮೆಯೇ ಈ ಪ್ರಬೋಧನ (ಎಬ್ಬಿಸುವ) ಶಕ್ತಿಯಲ್ಲಿದೆಯೆಂದು ಶ್ರೀಸಾಯಣರವ್ಯಾಖ್ಯಾನ: "ಚಂದ್ರನೂ ಬೇರೆ ವಸ್ತುಗಳನ್ನು ಬೆಳಗಿಸಿದರೂ ಅದು ವಿಸ್ಪಷ್ಟವಾದದ್ದು. ನಕ್ಷತ್ರಗಳಂತೂ ತಮ್ಮನ್ನಷ್ಟೇ ತಾವು ಬೆಳಗಿಕೊಳ್ಳುತ್ತವೆಯೇ ವಿನಾ ಬೇರೆಯ ಪದಾರ್ಥಗಳನ್ನಲ್ಲ; ಔಷಸವಾದ ಜ್ಯೋತಿಯಾದರೋ ಏಕಕಾಲದಲ್ಲಿ ಸರ್ವಜಗತ್ತಿನ ಅಂಧಕಾರವನ್ನು ನಿವಾರಣೆ ಮಾಡುವುದರ ಮೂಲಕ

ವಿಶೇಷವಾಗಿ ಬೆಳಗುತ್ತದೆ. ಆದುದರಿಂದ ಪ್ರಸಶ್ಯತಮವು." (ಸಾ.ಭಾ. (I-113-1). ಇದಕ್ಕಾಗಿಯೇ ಉಷೋದೇವಿಯನ್ನು "ಭಾಸ್ವತೀ" (ಬೆಳಗುವವಳು) ಎಂದೂ, "ಸೂಸೃತಾನಾಂ ನೇತ್ರೀ" (ವಾಕ್ಕಿಗೆ ಮಾರ್ಗದರ್ಶನ ಮಾಡುವವಳು) ಎಂದೂ, "ಅಲ್ಪದೃಷ್ಟಿಯುಳ್ಳವರಿಗೆ ಸ್ಪಷ್ಟನೋಟವನ್ನು" ಕೊಡುವವಳೆಂದೂ, "ಪಭ್ರ್ಂಪಶ್ಯದ್ಭ್ಯಃ ಉರ್ವಿಯಾ ವಿಚಕ್ಷೇ", "ಯುವತಿ"ಯೆಂದೂ, "ಸುಭಗೆ"ಯೆಂದೂ, "ವಿಶ್ವಸ್ಯ ಈಶಾನಾ" (ಜಗತ್ತಿಗೆ ಒಡೆಯಳು) ಎಂದೂ ವರ್ಣಿಸಲಾಗಿದೆ. ಇನ್ನೂ ವಿಶೇಷವಾಗಿ,

ಪರಾಯತೀನಾಂ ಅನ್ವೇತಿ ಪಾಥ ಆಯತೀನಾಂ
ಪ್ರಥಮಾ ಶಶ್ವತೀನಾಂ ।
ವ್ಯುಚ್ಛಂತೀ ಜೀವಂ ಉದೀರಯಂತೀ ಉಷಾ ಮೃತಂ
ಕಂ ಚನ ಬೋಧಯಂತೀ ॥ (1-113-8)

ಎಂದು ಸ್ತುತಿಸಲ್ಪಟ್ಟಿದ್ದಾಳೆ ಈ ಉಷೋದೇವಿ: "ಹಿಂದೆ ಕಳೆದ ಉಷಸ್ಸುಗಳ ದಾರಿಯನ್ನೇ ಅನುಸರಿಸುವುದಲ್ಲದೆ, ಮುಂದೆ ಬರುವ ಅನೇಕ ಉಷಸ್ಸುಗಳಲ್ಲಿ ಮೊದಲನೆಯವಳಾಗಿರುವ, ತಮೋಹಾರಿಯಾದ ಈ ದೇವಿಯು, ಸತ್ತಂತಿರುವ ಯಾವುದೇ ಮನುಷ್ಯನನ್ನು (ಪ್ರಾಣಿಯನ್ನು) ಎಬ್ಬಿಸಿ ಜಾಗೃತಗೊಳಿಸುತ್ತಾಳೆ".

ಇಲ್ಲಿ "ಮೃತಂ ಕಂ ಚನ ಜೀವಂ ಬೋಧಯಂತೀ" ಎಂಬುದು ಬಹು ಸ್ವಾರಸ್ಯವಾದ ಸೂಕ್ತಿ. ಬ್ರಹ್ಮಜ್ಞಾನದ ದಾಹವಾಗಲೀ, ಆಸೆಯಾಗಲೀ ಇಲ್ಲದವನು ಬದುಕಿದ್ದೂ ಸತ್ತಂತೆ. ಕೇವಲ ರಕ್ತಮಾಂಸಮಯ ಶರೀರದಲ್ಲಿ ಹುಟ್ಟಿದ ಮಾತ್ರದಿಂದ ಯಾವನೂ ಬದುಕಿದ್ದಂತೆ ಆಗಲಿಲ್ಲ. ಬ್ರಹ್ಮಜ್ಞಾನೋದಯವೇ ನಿಜವಾದ ಜನ್ಮ. ಇದಿದ್ದವನೇ "ದ್ವಿಜ". "ದ್ವಿಜತ್ವ"ವನ್ನು ಅನುಗ್ರಹಿಸಿ, ತತ್ಪೂರ್ವದಲ್ಲಿ ಮೃತಪ್ರಾಯನಾಗಿದ್ದವನನ್ನು ಜೀವಿಸುವಂತೆ ಮಾಡುವುದೇ ಇವಳ ಕರ್ತವ್ಯ. ಬ್ರಹ್ಮಸ್ವರೂಪವು ಶಾಶ್ವತವಾದುದರಿಂದ, 'ಉಷೋ' ಸ್ವರೂಪವೂ ಬದಲಾಗದೇ, ಈ ಹಿಂದೆ ಅನೇಕರನ್ನು ಎಬ್ಬಿಸಿದಂತೆ, ಇನ್ನು ಮುಂದೆಯೂ ಜಾಗೃತಗೊಳಿಸುವವಳೇ ಇವಳು. ಅಂದರೆ ಬ್ರಹ್ಮಜ್ಞಾನ ಪರಂಪರೆಯು ಅವಿಚ್ಛಿನ್ನವೆಂದೂ, ನಿತ್ಯನೂತನವು ಎಂದೂ ಶ್ರುತಿಭಾವ.

ಇದನ್ನು ಸರಿಯಾಗಿ ಗ್ರಹಿಸದೇ, "ದ್ವಿಜ"ನಲ್ಲದ ಒಬ್ಬ ಮ್ಲೇಚ್ಛ ಮಹಾಶಯನು ಇಲ್ಲಿ ಶ್ರುತಿಯ ಶಬ್ದವನ್ನೂ ಅರ್ಥವನ್ನೂ ಈ ಕೆಳಕಂಡ ರೀತಿ ಭಂಗಗೊಳಿಸಿ ಅಪಾರ್ಥ ಮಾಡಿದ್ದಾನೆ :

"ಮೃತಂ ಕಂ ಚನ ಬೋಧಯಂತೀ" ಎಂಬ ಸಾಯಣ ಭಾಷ್ಯ ರೀತಿಯ ಪದಚ್ಛೇದವನ್ನಾಗಲೀ, ಇದಕ್ಕಿಂತ ಅತ್ಯಂತ ಪ್ರಾಚೀನವಾದ ಪದ ಪಾಠವನ್ನಾಗಲೀ ಗಮನಕ್ಕೇ ತೆಗೆದುಕೊಳ್ಳದೆ. "ಮೃತಂ ಕಂಚ ನಬೋ-ಧಯಂತೀ" ಎಂದು ಮನಸ್ವಿಯಾಗಿ ಅನ್ವಯ ಮಾಡಿ "ಸತ್ತವನನ್ನು ನಿದ್ರೆಯಿಂದ ಎಬ್ಬಿಸತಕ್ಕವಳಲ್ಲ" "(Him who is dead, she wakes not from his slumber") ಎಂಬುದಾಗಿ ಗ್ರಿಫಿತ್ ಎಂಬ ಮಹಾಶಯನು ತನ್ನ ಋಗ್ವೇದ ಭಾಷಾಂತರದಲ್ಲಿ ಬರೆದಿದ್ದಾನೆ. (Vol-I, P.50) ಇಂತಹ ಅಪಚಾರಗಳಿಗೆ ಲೆಕ್ಕವನ್ನು ಬರೆದಿಟ್ಟವರಾರು ?

"ಸಲಿಲಂ ಕಮಲಂ ಜಲಂ" ಎಂಬ ವಾಕ್ಯವನ್ನು ಒಬ್ಬ ಮಹಾನುಭಾವನು " ಸಲಿಲಂಕ ಮಲಂಜಲಂ " ಎಂದು ಬಿಡಿಸಿದನಂತೆ ! ಇವನ ಸಹೋದರನೇ ಮೇಲೆ ಪ್ರಸ್ತಾಪಿಸಲ್ಪಟ್ಟ ಭಾಷಾಂತರಕಾರ ಮಹೋದಯನು!! "ಸತ್ತವನನ್ನು ನಿದ್ರೆಯಿಂದ ಎಬ್ಬಿಸತಕ್ಕವಳಲ್ಲ" ಎಂಬುದು ಉಷೋದೇವಿಗೆ ನಿಜವಾಗಿ ಅನ್ವಯವಾದರೆ, ಈ ಮಹಾನುಭಾವನೇ ಇದಕ್ಕೆ ಪ್ರಥಮ ಉದಾಹರಣೆಯೇನೋ ! "ಸತ್ತ"ವರು ಸತ್ತೇ ಇದ್ದು, "ಬದುಕಿ"ರುವವರು ಬದುಕಿಯೇ ಇದ್ದರೆ, "ಉಷೋದೇವಿಗೆ" ಇರುವ ಬೇರೆ ಕೆಲಸವಾದರೂ ಏನು ? "ಮೃತ್ಯೋರ್ಮಾ ಅಮೃತಂ ಗಮಯ" ಎಂಬ ಪ್ರಾರ್ಥನೆಗೂ, ಇಂತಹ ಅನೇಕ ಶ್ರುತಿ ಸೂಕ್ತಿಗಳಿಗೂ ಏನರ್ಥ ? ಬ್ರಹ್ಮಜ್ಞಾನವು ಮರ್ತ್ಯನನ್ನು ಅಮರನನ್ನಾಗಿ ಮಾಡಲಾಗದಿದ್ದರೆ ಅದರ ಉಪಯೋಗವಾದರೂ ಏನು ? ಬ್ರಹ್ಮಜ್ಞಾನವಿರುವವನು ಮಾತ್ರ ಇದಕ್ಕೆ ಉತ್ತರ ಹೇಳಬಲ್ಲನಷ್ಟೆ?

ಸತ್ತಂತೆ ಬಿದ್ದಿರುವಾಗ ಹಾಸಿಗೆಯಿಂದ ಎಬ್ಬಿಸುವುದೂ (ಉದೀರ-ಯಂತೀ) ನಂತರ ಪುನಶ್ಚೇತನವಂತನನ್ನಾಗಿ ಎಬ್ಬಿಸುವುದೂ (ಬೋಧ-ಯಂತೀ) ಈ ಎರಡು ಮೆಟ್ಟಿಲುಗಳಲ್ಲಿ ಈ 'ಜಾಗೃತಿ'ಯ ಕೆಲಸ ಆಗುವುದೆಂದು ಶ್ರುತಿ ಹೇಳುತ್ತಿದೆ. ಬ್ರಹ್ಮವಿಮುಖನಾದವನನ್ನು, ಬ್ರಹ್ಮಾಭಿ

ಮುಖಿನನ್ನಾಗಿಯೂ, ನಂತರ ಬ್ರಹ್ಮಜ್ಞಾನಿಯನ್ನಾಗಿಯೂ ಆಗಿಸುವವಳು ಈ ದೇವಿ.

ಇವಳ ಇನ್ನೂ ಮೂರು ಕರ್ಮಗಳೆಂದರೆ, "ಅಗ್ನಿಯನ್ನು ಜ್ವಲಿಸುವಂತೆ ಮಾಡುವುದು", "ಸೂರ್ಯಕಾಂತಿಯಿಂದ ಅಂಧಕಾರ ನಿವಾರಣೆ" ಮತ್ತು "ಯಜ್ಞಶೀಲರಾದ ಮನುಷ್ಯರನ್ನು ಕರ್ತವ್ಯತತ್ಪರರನ್ನಾಗಿಸುವುದು" (ಋ. ಸಂ. I-113-9). ಇದೇ ಉಷೆಯ ಹಿಂದಿನಿಂದ ಬಂದ ದಾರಿ, ಮುಂದೆ ಎಂದೆಂದೂ ತೋರುವ ದಾರಿ ಇದರ ಬಗೆಗೆ ಮುಂದಿನ ಮಂತ್ರವು ಅತ್ಯಾಶ್ಚರ್ಯವನ್ನು ವ್ಯಕ್ತಪಡಿಸಿದೆ!

ಈ ವಿಧವಾದ ಕರ್ತವ್ಯವು "ಉಷೆ"ಗೆ ಏರ್ಪಟ್ಟಿದ್ದಾದರೂ ಎಷ್ಟು ಕಾಲದಿಂದ ಹಿಂದೆ? ಎಂಬ ಪ್ರಶ್ನೆಗೆ ಯಾರು ಉತ್ತರ ಹೇಳಬಲ್ಲರು? "ಉಷೆ"ಯೆಂಬುದೇ ಇಲ್ಲದಿದ್ದ ಕಾಲದ ಸ್ಥಿತಿಯ ಬಗೆಗೆ (ನಾಸದೀಯದಲ್ಲಿನಂತೆ) ಪರಿತಾಪ ಇಲ್ಲಿರುವಂತಿದೆ. (ವೇದ ಸಂಸ್ಕೃತಿಯ ಪರಿಚಯ ಸಂಪುಟ ೧—ಪು. ೧೪ ನೋಡಿ). "ಉಷೆ"ಯು ಅನಂತ ಸ್ವರೂಪಳು. ಇವಳನ್ನು ಸಂಪೂರ್ಣವಾಗಿ ಸಮಗ್ರವಾಗಿ ಸಂದರ್ಶಿಸಿದವರು ಯಾರಾದರೂ ಉಂಟೇ ಎಂಬ ಪ್ರಶ್ನೆಗೆ ಇಲ್ಲಿದೆ ಉತ್ತರ :

ಈಯುಷ್ಟೇ ಯೇ ಪೂರ್ವತರಾಮಪಶ್ಯನ್
ವ್ಯುಚ್ಛಂತೀಂ ಉಷಸಂ ಮರ್ತ್ಯಾಸಃ ।
ಅಸ್ಮಾಭಿರೂನು ಪ್ರತಿಚಕ್ಷ್ಯಾಭೂದೋ ತೇ ಯಂತಿ
ಯೇ ಅಪರೀಷು ಪಶ್ಯಾನ್ ॥ (I-113-1)

"ಬಹು ಪುರಾತನವಾದ ಈ ಉಷಸ್ಸನ್ನು ಈ ಹಿಂದೆ ದರ್ಶನ ಮಾಡಿದವರೆಲ್ಲರೂ, ಮರ್ತ್ಯರಾದುದರಿಂದ, ಮರಣ ಧರ್ಮವುಳ್ಳವರಾಗಿ ಗತಿಸಿಹೋದರು. ನಾವೂ ಸಹ ಈಗ ಉಷಸ್ಸನ್ನು ಚೆನ್ನಾಗಿ ದರ್ಶಿಸಿದೆವು. ಮುಂದೆಯಾದರೂ ಇಂತಹ ಉಷಸ್ಸನ್ನು ದರ್ಶನ ಮಾಡತಕ್ಕವರು ಬಂದೇ ಬರುತ್ತಾರೆ." ಒಟ್ಟಿನಲ್ಲಿ ತ್ರಿಕಾಲ ಸತ್ಯವಾದ ಉಷಸ್ಸು ಬೇರೆ ಬೇರೆಯುವರಿಂದ ದರ್ಶನ ಮಾಡಲ್ಪಡುತ್ತಲೇ ಇದೆ. ಇದಕ್ಕೆ ಚ್ಯುತಿಯಿಲ್ಲವೆಂದು ಭಾವ.

ಬ್ರಹ್ಮಜ್ಞಾನಿಗೆ ಇರುವುದು ಒಂದೇ ತವಕ— "ಈ ಜ್ಞಾನವು ನಷ್ಟವಾಗಬಾರದು" ಎಂದು. ಇದು ನಷ್ಟವಾಗತಕ್ಕದ್ದಲ್ಲವೆಂಬ ಆಶ್ವಾಸನೆ ಮೇಲಿನ ಮಂತ್ರದಲ್ಲಿದೆ. ಹಿಂದೆ, ಈಗ, ಮುಂದೆ—ಸರ್ವದಾ. ಮರ್ತ್ಯನಾದ ಮಾನವನು ತಾನೊಬ್ಬನೇ ಈ ಲೋಕದಲ್ಲಿಯೇ ಇದ್ದು ಇದನ್ನು ಉಳಿಸಿಕೊಳ್ಳುವುದು ಶಕ್ಯವಿಲ್ಲ. ಆದರೇನು ಒಬ್ಬರಿಲ್ಲದಿದ್ದರೆ ಮತ್ತೊಬ್ಬರಿಗೆ ಇದು ಲಭ್ಯವಾಗುತ್ತಲೇ ಇರುವುದು ಎಂದು ಭಾವ.

ಇನ್ನು ಮುಂದೆ 'ಉಷೆ'ಯನ್ನು "ರಾಕ್ಷಸ ನಾಶಕ"ಳೆಂದೂ. (ಯಾವಯದ್ದ್ವೇಷಾಃ) ಋತವನ್ನು ಸಂರಕ್ಷಿಸುವವಳೆಂದೂ, (ಋತಪಾಃ) ಋತದಲ್ಲಿಯೇ, ಋತಕ್ಕಾಗಿಯೇ ಉದಿಸಿದವಳೆಂದೂ, (ಋತೇಜಾಃ) ಸುಖಕರವಾದ ಸೂಕ್ತಿಗಳನ್ನು ಬಾಯಿಂದ ಹೊರಡಿಸುವ ಸುಮಂಗಲೀಯೆಂದೂ, ದೇವತೆಗಳಿಗೆ ಉದ್ದಿಷ್ಟವಾದ ಯಜ್ಞವನ್ನು ಧರಿಸಿರುವವಳೆಂದೂ ವರ್ಣಿಸಲಾಗಿದೆ. "ಉಷಾ" ಎಂದರೇ "ಉಷಾಃ ಕಸ್ಮಾದುಚ್ಛತೀತಿ ಸತ್ಯಾರಾತ್ರೇರಪರಃ ಕಾಲಃ" ಎಂದು ಯಾಸ್ಕರು ವಿವರಿಸಿರುವಂತೆ (ನಿ. II-19) "ಕತ್ತಲೆಯನ್ನು ಹೋಗಲಾಡಿಸುವವಳು" ಎಂದು ಅರ್ಥವಿದೆ.

"ಅಯ್ಯಾ ಮನುಷ್ಯರೇ! ಏಳಿರಿ. ನಮ್ಮೆಲ್ಲರ ಉಸಿರಿನಂತೆ, ಜೀವದಂತೆ, ಇರುವ ಜ್ಯೋತಿಸ್ಸ್ವರೂಪನಾದ ಪರಮಾತ್ಮನು ಬಂದಿದ್ದಾನೆ; ಕತ್ತಲೆಯು ತೊಲಗಿದೆ; ಬೆಳಕು ವ್ಯಾಪಿಸುತ್ತಿದೆ; ಸೂರ್ಯನಿಗಾಗಿ ಸಂಚಾರ ಮಾರ್ಗವನ್ನು ನಿರ್ಮಿಸುತ್ತಿದೆ; ಎಲ್ಲಿ ಅನ್ನ ಸಿಗುವುದೋ ಅಲ್ಲಿಗೆ ಹೋಗೋಣ."

ಎಂದು ಶ್ರುತಿಯು ಮಾರ್ಮಿಕ ಸಂದೇಶವನ್ನಿತ್ತಿದೆ. ಬ್ರಹ್ಮಜ್ಞಾನಿಯು ಮುಕ್ತನಾಗಿ "ಕಾಮಾನ್ನಿ"ಯಾಗಿ, ಬೇಕಾದ್ದನ್ನು ತಿಂದು ತೇಗಬಲ್ಲನೆಂಬ ತೈತ್ತಿರೀಯ ಶ್ರುತಿಯಲ್ಲಿ ಉಕ್ತವಾದ "ಅನ್ನ"ವೇ ಇಲ್ಲೂ ಉಕ್ತವಾದಂತಿದೆ. "ಹೊಟ್ಟೆ ತುಂಬುವ" ಸಂದೇಶಕ್ಕಾಗಿ ಈ ಮಂತ್ರವು ಉದಿಸಿಲ್ಲವಾದುದರಿಂದ, ಇಲ್ಲಿ ಹೇಳಲ್ಪಟ್ಟ "ಅನ್ನ"ವು ಆಧ್ಯಾತ್ಮಿಕಾನ್ನವೇ ಸರಿ. ಬ್ರಹ್ಮಚಾರಿಗೂ "ಹಸಿವು" ಉಂಟು, "ದಾಹ"ವುಂಟು. ಇದು "ಬ್ರಹ್ಮ" ವಿಷಯವಾದದ್ದು. ಈ ಹಸಿವನ್ನು ನೀಗುವವಳು "ಉಷೆ". ಹೀಗೆ "ಮಾತಾ ದೇವಾನಾಂ" ಎಂಬಂತೆ ದೇವತೆಗಳಿಗೂ ತಾಯಿಯೆನಿಸಿದ "ಉಷೆ"ಯ ಮಹಿಮೆಯೇ

ಇಷ್ಟಿದ್ದರೆ, ಇನ್ನು ಸೂರ್ಯಸದೃಶನಾದ, ಪರಂಜ್ಯೋತಿಸ್ಸ್ವರೂಪನಾದ ಭಗವಂತನ ಮಹಿಮೆಯು ಎಷ್ಟಿರಬೇಕು ? ಇದರ ಉಪಾಸನೆಯೇ ಸಕಲ ವೇದದ ಉಸಿರಾಗಿದೆ. ಇದೇ ಸಂಧ್ಯಾ ಉಪಾಸನದ ವಿಷಯ. ಇದನ್ನು ಈಗ ಮತ್ತಷ್ಟು ಆಳವಾಗಿ ಗಮನಿಸೋಣ.

———

॥ ಶ್ರೀ ಕೃಷ್ಣಾಯಪರಬ್ರಹ್ಮಣೇನಮಃ ॥

# ೧. 'ಸೂರ್ಯ' ಸ್ವರೂಪ, ಮಹತಿ

ವೇದದ ದರ್ಶನವು ಮಾನವ ಜೀವನದಲ್ಲಿ ಬೆಳಕಿಗಾಗಿ ಹಂಬಲಿಸುವ ದರ್ಶನ. ಜೀವನವು ಪರಿಪೂರ್ಣವೂ ಸುಂದರವೂ ಆಗಬೇಕಾದರೆ, ನಮ್ಮಲ್ಲಿರುವ ಕತ್ತಲೆಯು ಮೊದಲು ತೊಲಗಬೇಕು. ಹೊರಗಿನ ಜೀವನದಲ್ಲಿಯೂ ಗಿಡ, ಮರ, ಪಕ್ಷಿಗಳೂ ವಾಸ್ತವಾರ್ಥದಲ್ಲಿ ಬೆಳಕನ್ನೇ ನಂಬಿ, ಆಶ್ರಯಿಸಿ, ಜೀವಿಸುತ್ತವೆಯೆಂಬುದು ಎಲ್ಲರಿಗೂ ತಿಳಿದಿದೆ. ಸುಸಂಸ್ಕೃತ ಮಾನವ ಜೀವನವೂ ಸಹ, ಹೊರಗಣ್ಣಿಗೆ ಕಾಣುವ ಸೂರ್ಯನ ಬೆಳಕಿನ ಶಕ್ತಿಗಳನ್ನೇ ಅವಲಂಬಿಸಿ, ಅವನ ಕೊಡುಗೆಗಳಾದ ಋತುಗಳು, ಮಳೆ, ಛಳಿ, ಬಿಸಿಲುಗಳನ್ನೇ ಆಶ್ರಯಿಸಿ ನಿಂತಿದೆ. ಹೀಗೆ ಸೂರ್ಯನೇ ಇಲ್ಲದಿದ್ದರೆ ಯಾವುದೇ ಬಗೆಯ ಜೀವನವೇ ಸಾಧ್ಯವಿಲ್ಲವೆಂಬುದು ಸಿದ್ಧವಾಗಿದೆ. ಆದುದರಿಂದಲೇ ಮೂಢನ ಪಾಲಿಗೂ ಸಹ, ಕಣ್ಣಿಗೆ ಕಾಣುವ ದೇವರೆಂದರೆ ಸೂರ್ಯನೇ.

ಆದರೆ ವೇದದರ್ಶನದಲ್ಲಿ, ಈ ಹಿಂದೆ ಅನೇಕ ಕಡೆಗಳಲ್ಲಿ ವಿವರಿಸಿರುವಂತೆ, ಕೇವಲ ಹೊರಗಿನ ಕಣ್ಣಿಗೆ ಕಾಣುವ ಬೆಳಕು, ಗಿಡ ಮರಗಳನ್ನು ಅನಾಗರಿಕ ಕಾಲದ ಪ್ರಾಕೃತ ಭಯಕಾಲದಲ್ಲಿ ಆದಿಮಾನವರು ಸ್ತುತಿಸಲು ನಡೆಸಿದ ಯತ್ನಗಳು ಕಂಡುಬರುವದೆನ್ನುವದಕ್ಕೆ ಆಧಾರವಿಲ್ಲ. ಇದು ವೇದದ ಹಿನ್ನೆಲೆಯೇ ಇಲ್ಲದ ಅನಾಗರಿಕರ ಕಣ್ಣಿಗೆ ಕಾಣಬಹುದಾದದ್ದು ಮಾತ್ರ. ವೇದದ ಕಣ್ಣಿನಿಂದಲೇ ವೇದವನ್ನು ನೋಡಿದಾಗ ಕಾಣುವುದೇ ಬೇರೆ. ಇದು ಅಂತರಂಗ ಜೀವನದ ನಿತ್ಯ ಸತ್ಯಗಳ ವರ್ಣನೆಯನ್ನು ಒಳಗೊಂಡಿದೆ.

ಮಾನವನಿಗೆ ದಿವ್ಯಜ್ಞಾನವೊಂದಿಲ್ಲದೆ ಉಳಿದ ಶಕ್ತಿ ಸಾಧನೆಗಳು ಎಷ್ಟಿದ್ದರೇನು ? "ಜ್ಞಾನಕ್ಕೆ ಸಮನಾದುದು ಮತ್ತೊಂದಿಲ್ಲ" ಎಂಬುದು ಗೀತೆಯಲ್ಲಿ ಭಗವಂತನ ಶುದ್ಧವಾಣಿ. ಇದು ಸನಾತನ ಮೌಲ್ಯ. ಪ್ರತಿಯೊಬ್ಬ ವೈದಿಕನೂ ತ್ರಿಕಾಲಗಳಲ್ಲಿಯೂ ಜಪಮಾಡುತ್ತಿರುವ, ಸಕಲ ವೇದ ಸಾರ ಭೂತವಾದ ಗಾಯತ್ರೀ ಮಂತ್ರವು, ಈ 'ಬೆಳಕಿಗಾಗಿಯೇ' ಪ್ರಾರ್ಥಿಸಿದೆ. "ಯಾವ (ಬಾಹ್ಯಾಕಾಶದಲ್ಲಿ ಕಾಣುವ) ಸೂರ್ಯನಲ್ಲಿಯೂ **ಶ್ರೇಷ್ಠತಮವಾದ ಇನ್ನೊಂದು ಬೆಳಕಿದೆಯೋ ಅದನ್ನು ನಾವು ಧ್ಯಾನಿಸುತ್ತೇವೆ. ಏಕೆಂದರೆ, ಅದು ನಮ್ಮ ಬುದ್ಧಿಗಳನ್ನು ಸನ್ಮಾರ್ಗದಲ್ಲಿ ಸರ್ವದಾ ಪ್ರಚೋದಿಸಲಿ ಎಂಬುದೇ ನಮ್ಮ ಆಸೆ."** ಇದು ವೇದದ ಉಸಿರು; ಇದೊಂದರಲ್ಲಿ ವೈದಿಕ ಜೀವನದ ದಿಕ್ಕು, ಮಹಾಮೌಲ್ಯಗಳು ಅಡಗಿವೆ. ಸೂರ್ಯನಿಲ್ಲದ (ಸೂರ್ಯನು ಕಣ್ಣಿಗೆ ಕಾಣಿಸದ) ದಿನಗಳು ವೈದಿಕರ ಪಾಲಿಗೆ ವಸ್ತುತಃ **'ದುರ್ದಿನಗಳು'**. ಹೀಗೆ ವೈದಿಕ ದೇವತಾ ಸ್ವರೂಪದಲ್ಲಿ ಸೂರ್ಯನಿಗೆ ಮುಖ್ಯಸ್ಥಾನವಿದ್ದು ಭಗವಂತನ ಅಸಾಧಾರಣವಾದ ತೇಜಸ್ಸಿಗೆ, ಸೃಷ್ಟಿಶಕ್ತಿಗೆ, ಜ್ಞಾನಾನುಗ್ರಾಹಕ ಶಕ್ತಿಗೆ, ಸೂರ್ಯನು ಸಂಕೇತವಾಗಿದ್ದಾನೆ.

## ೨. 'ಸೂರ್ಯ' ಶಬ್ದಾರ್ಥ

'ಸೂರ್ಯ' ಶಬ್ದವನ್ನು ವಿವರಿಸುತ್ತಾ, ಶ್ರೀ ಸಾಯಣಾಚಾರ್ಯರು "ಸುಷ್ಠು ಆರ್ಯಃ, ಸ್ವಾಮೀ, ಸರ್ವಾಂತರ್ಯಾಮಿತಯಾ ಸುಷ್ಠು ಪ್ರೇರಕಃ॥" ಎಂದು ಅರ್ಥ ಮಾಡಿದ್ದಾರೆ: "ಶ್ರೇಷ್ಠನಾದ ಒಡೆಯ, ಸರ್ವಾಂತರ್ಯಾಮಿಯಾದ, ಉತ್ತಮನಾದ ಸರ್ವಪ್ರೇರಕ." ಎಂದು ಪರಮಾತ್ಮನನ್ನೇ ಸೂರ್ಯ ಶಬ್ದವು ವರ್ಣಿಸುತ್ತದೆ ಎಂದು ಅಭಿಪ್ರಾಯ. ಯಾಸ್ಕರೂ ನಿರುಕ್ತದಲ್ಲಿ : "ಸೂರ್ಯಃ, ಸರ್ತೇರ್ವಾ, ಸುವತೇರ್ವಾ, ಸ್ವೀರ್ಯತೇರ್ವಾ" ಎಂದರೆ "ಸಂಚರಿಸುವವನು, ಸೃಷ್ಟಿಸುವವನು, ಪ್ರೇರಿಸುವವನು." ಎಂದು ಇದೇ ಅರ್ಥವನ್ನೇ ಎತ್ತಿ ಹಿಡಿದಿದ್ದಾರೆ. ಈ ಅರ್ಥವನ್ನೆಲ್ಲ ಸೂರ್ಯಸಂಬಂಧವಾದ ಅನೇಕ ಮಂತ್ರಗಳು ಚೆನ್ನಾಗಿ ಸಮರ್ಥಿಸುತ್ತವೆ.

ಉದಾಹರಣೆಗೆ ಪ್ರತಿಯೊಬ್ಬ ವೈದಿಕನೂ ತಪ್ಪದೇ ಅನುಷ್ಠಾನ ಮಾಡ ತಕ್ಕ ಸಂಧ್ಯಾವಂದನ ಮಂತ್ರಗಳಲ್ಲಿ ಪ್ರಸಿದ್ಧವಾದ ಈ ಕೆಳಗಿನ ಋಙ್ಮಂತ್ರವು ಸೂರ್ಯನನ್ನೇ ದೇವತೆಗಳ ಕಣ್ಣು ಎಂದೂ ಸ್ಥಾವರ ಜಂಗಮಾತ್ಮಕವಾದ ಸಮಸ್ತ ಜಗತ್ತಿಗೂ ಅಂತರಾತ್ಮನೆಂದೂ ಉದ್ಘೋಷಿಸುತ್ತಿದೆ.

"ಚಿತ್ರಂದೇವಾನಾಮುದಗಾದನೀಕಂ ಚಕ್ಷುರ್ಮಿತ್ರಸ್ಯ
ವರುಣಸ್ಯಾಗ್ನೇಃ
ಆಪ್ರಾ ದ್ಯಾವಾಪೃಥಿವೀ ಅಂತರಿಕ್ಷಂ ಸೂರ್ಯ ಆತ್ಮಾ
ಜಗತಸ್ತಸ್ಥುಷಶ್ಚ" (ಋ.ಸಂ. I–115–1)

ಇಲ್ಲಿಯೂ ಸೂರ್ಯನೆಂದರೆ "ಅಂತರ್ಯಾಮಿತಯಾ ಸರ್ವಸ್ಯ ಪ್ರೇರಕಃ ಪರಮಾತ್ಮಾ" ಎಂದು ಶ್ರೀ ಸಾಯಣರು ಅರ್ಥಮಾಡಿರುವುದಲ್ಲದೇ, ಸೂರ್ಯನೇ ಜಗತ್ತಿಗೆ ಆತ್ಮಾ ಎಂದರೆ ಜಗತ್ತಿನ ಕಾರಣನೂ ಕಾರ್ಯವೂ ಒಬ್ಬನೇ ಆದ ಅವನೇ ಎಂಬುದನ್ನು(ಬ್ರಹ್ಮಸೂತ್ರದಲ್ಲಿಯೂ ವಿವರಿಸಿದಂತೆ) ಈ ಸೂಕ್ತ ಎತ್ತಿ ಹೇಳುತ್ತಿದೆ ಎಂದು ತೋರಿಸಿದ್ದಾರೆ.

ತೈತ್ತಿರೀಯ ಅರಣ್ಯದ "ಯೋಽಸೌತಪನ್ನುದೇತಿ...." (I–14–1) ಎಂಬ ಮಂತ್ರವನ್ನು ಉದಹರಿಸಿ, ಸೂರ್ಯನೇ ಜಗತ್ತಿನ ಆತ್ಮನೆಂಬುದಕ್ಕೆ ಇಲ್ಲಿ ಪ್ರಮಾಣವಿದೆ ಎಂದು ತೋರಿಸಿದ್ದಾರೆ. ಹೇಗೆಂದರೆ, ಸೂರ್ಯೋದಯವಾದಾಗ, ಆವರೆಗೂ ರಾತ್ರಿಯ ಕಾಲದಲ್ಲಿ ಮೃತಪ್ರಾಯವಾಗಿದ್ದ ಸರ್ವಜಗತ್ತೂ, ಪುನಃ ಚೇತನಯುಕ್ತವಾಗಿ, 'ಸತ್' ಎನಿಸಿಕೊಳ್ಳುತ್ತದೆ. ಅವನೇ ಅಸ್ತಂಗತನಾದರೆ, ಅದೇ ಜಗತ್ತು ಇದ್ದರೂ ಸತ್ತಂತೆಯೇ. ಹೀಗೆ ಮಾನವನ (ಸಕಲ ಪ್ರಾಣಿಗಳ) ಎಚ್ಚರ, ನಿದ್ರಾವಸ್ಥೆಗಳಿಗೆ, ಬದುಕು – ಸಾವುಗಳಿಗೆ, ಪೂರ್ಣ ಅಪೂರ್ಣ ಜೀವನಗಳಿಗೆ, ಪರಮಾತ್ಮನೇ ಕಾರಣ ಎಂಬುದನ್ನು ಈ ಸೂಕ್ತವು ಮನದಟ್ಟು ಮಾಡಿಕೊಡುತ್ತದೆ, ಎಂಬುದು ಸಾಯಣ ಭಾಷ್ಯದ ಸಾರಾಂಶ.

## ೩. ಸೂರ್ಯ–'ಸಂಧ್ಯೆ'

ಹಿಂದಿನ ಲೇಖನದಲ್ಲಿ ಪ್ರಸ್ತಾಪಿಸಲ್ಪಟ್ಟ ಆಂಗಿರಸ ಋಷಿಗಳ ವಂಶದ ಕುತ್ಸ ಆಂಗಿರಸರೆಂಬುವವರೇ ಈ ಸೂಕ್ತದ ಋಷಿಗಳಾಗಿರುವುದರಿಂದ,

ಹಿಂದಿನ ಪ್ರಸಂಗದಲ್ಲಿ ಆಂಗಿರಸರಿಗೂ 'ಗೋವು'ಗಳಿಗೂ, ಇರುವ ಸಂಬಂಧದ ಹಿನ್ನೆಲೆಯಲ್ಲಿ ಸೂಕ್ತವನ್ನು ನೋಡಿದರೆ, ಈ ಸೂಕ್ತದಲ್ಲಿ ಮತ್ತಷ್ಟು ಬೆಳಕನ್ನು ಕಾಣಬಹುದು.

ಇದೇ ಸೂಕ್ತದ ಮುಂದಿನ ಮಂತ್ರದಲ್ಲಿ ಇನ್ನೊಂದು ಮಾರ್ಮಿಕಾಂಶ ಹೇಳಲಾಗಿದೆ : "ಸೂರ್ಯೋದಯ ಆಗಬೇಕಾದರೆ, ಅದಕ್ಕೆ ಮೊದಲು 'ಉಷೋದೇವಿಯ' ಆವಿರ್ಭಾವವಾಗಬೇಕು. ಇದಿಲ್ಲದೆ, ಸೂರ್ಯೋದಯ ವಿಲ್ಲ. **ಸೂರ್ಯನು ಯಾವಾಗ ಉದಿಸಿದರೂ ಇವಳನ್ನು ಅನುಸರಿ ಸಿಯೇ ಉದಿಸುತ್ತಾನೆ.** ಯಾವ ಮನುಷ್ಯನಾದರೂ, ಶೋಭನಾಂಗಿಯಾದ ಸ್ತ್ರೀಯನ್ನು ಕಂಡು ಆಕರ್ಷಿತನಾಗುವಂತೆ ಸೂರ್ಯದೇವನೂ ಈ ಉಷೋ ದೇವಿಯನ್ನು ಹಿಂಬಾಲಿಸಿಯೇ ಉದಿಸುತ್ತಾನೆ. ಹೀಗೆ ಸೂರ್ಯೋದಯಕ್ಕೆ ಉಷೋದೇವಿಯ ಉದಯವೇ ಮೊದಲು ಆಗತಕ್ಕದ್ದು. ಯಾಗ ಶೀಲರಾದ ಯಜಮಾನರು ಉಷೋದೇವಿಯ ಉದಯ ಮಾತ್ರದಿಂದಲೇ ಎಚ್ಚೆತ್ತು, ಶುದ್ಧರಾಗಿ, ವೇದೋಕ್ತವಾದ ಕ್ರಿಯಾಕಲಾಪಗಳಿಂದ ಆ ಸೂರ್ಯದೇವನ ಆರಾಧನೆಗೆ ಸನ್ನದ್ಧರಾಗಿ, ಯಜ್ಞಶೀಲರಾಗಿರುತ್ತಾರೆ. ಇಂತಹವರ ಪಾಲಿಗೆ ಸೂರ್ಯೋದಯ ಸಾರ್ಥಕ. ಹೀಗೆ ಮಂಗಳಕರನಾದ ಸೂರ್ಯನನ್ನು ಮಂಗಳಾರ್ಥವಾಗಿ ಭಜಿಸೋಣ." ಇದು ಈ ಮಂತ್ರದ ಭಾವಾರ್ಥ.

ಇಲ್ಲಿ 'ಉಷೋದೇವಿಗೂ' ಸೂರ್ಯೋದಯಕ್ಕೂ ಸಂಬಂಧವಿರು ವುದು ಗಮನೀಯ. ಹೊರಗಿನ ಅರ್ಥದಲ್ಲಿ ಉಷಃಕಾಲವೇ ಉಷೋದೇವಿ ಯಾಗಿ ರೂಪಕಗೊಂಡಿದ್ದಾಳೆ. ಆದರೆ, ಇಷ್ಟು ಮಾತ್ರ ಗ್ರಹಿಸಿದರೆ, ಈ ಮಂತ್ರದ ಸ್ವಾರಸ್ಯಾರ್ಥ ತಿಳಿಯುವುದಿಲ್ಲ. ಮನುಷ್ಯನಿಗೆ ಬೆಳಕನ್ನೇ ಕಾಣದ ಒಂದು ಕತ್ತಲೆಯ ಅವಸ್ಥೆಯೂ, ಬೆಳಕು ಬಂದ ಮೇಲೆ ನಡು ಬಿಸಿಲಿನಲ್ಲಿ ನಿಲ್ಲುವ ಇನ್ನೊಂದು ಅವಸ್ಥೆಯೂ, ಇರುವಂತೆಯೇ ಇವೆರಡರ ನಡುವಿನ **ಇನ್ನೂ ಒಂದು ಮುಖ್ಯಾವಸ್ಥೆಯೂ ಉಂಟು.** ವೈದಿಕ ದರ್ಶನದಲ್ಲಿ ಇದಕ್ಕೆ ಬಹಳ ಮಹತ್ವವಿದೆ. ಬದ್ಧಾವಸ್ಥೆಯಲ್ಲಿ, ಹುಟ್ಟುಸಾವುಗಳ ಚಕ್ರ ದಲ್ಲೇ ಸಿಕ್ಕಿ ಬಿದ್ದು, ಇನ್ನೂ ಮರ್ತ್ಯವಾಗಿರುವ ಮಾನವನು. ಸರ್ವದಾ ಕತ್ತಲೆಯಲ್ಲಿಯೋ ಬೆಳಕಿನಲ್ಲಿಯೋ ಇರುವುದು ಸಾಧ್ಯವಿಲ್ಲ. ಒಂದರ ಹಿಂದೆ ಒಂದರಂತೆ, ಹಗಲು–ರಾತ್ರಿಗಳು ಅನುಸರಿಸಿ ಬರುವಂತೆ, ಜ್ಞಾನಾಜ್ಞಾನ

ಗಳು ಒಂದನ್ನೊಂದು ಅನುಸರಿಸಿಯೇ ಇರುವುದು ಮಾನವ ಜೀವನದ ಲಕ್ಷಣ. ಆದರೆ ಒಂದು ಕ್ಷಣದಲ್ಲಿಯಾದರೂ ಜ್ಞಾನದ ಒಂದು ಕಿರಣವನ್ನು ಕಂಡ ಮಾನವನಿಗೆ, ಅದು ಮಿಂಚಿ ಮಾಯವಾದರೂ, ಅದರ ಬಯಕೆ ಉಳಿಯು ವುದು ಸಹಜ. ಬೆಳಕು ಮಿಂಚಿ ಮಾಯವಾದರೆ, (ಇದರಿಂದ ದುಃಖವಾದರೆ) ಕತ್ತಲೆಯೂ ಶಾಶ್ವತವಲ್ಲವೆಂದೂ, ಮತ್ತೆ ಬೆಳಕೇ ಬರುವುದು ಸಹಜವೆಂದೂ ಆಶಾಭಾವನೆಯೂ ಬರುವುದೂ ಸ್ವಾಭಾವಿಕ. ಹೀಗೆ ಇಡೀ ಮಾನವಕೋಟಿಯ ಪರಿಸ್ಥಿತಿ ಹೇಗೆಂದರೆ, ಕತ್ತಲೆಯ ಕೊನೆಯ ಭಾಗದಲ್ಲಿ ಬೆಳಕಿಗೆ ಹಾತೊರೆ ಯುತ್ತಾ ಕಾದು ಕುಳಿತಿರುವ ಬೆಳಕು ಕತ್ತಲೆಗಳ–**ಸಂಧಿ ಪರಿಸ್ಥಿತಿಯಂತೆ.** ಇದನ್ನೇ ವೇದವು ಬಹು ಸುಂದರವಾದ ಮಾರ್ಮಿಕವಾದ ಭಾಷೆಯಲ್ಲಿ ವರ್ಣಿ ಸಿದೆ. ಕತ್ತಲೆಯಲ್ಲಿ ಕುಳಿತ ಹೊರತು ಬೆಳಕಿನ ಬೆಲೆ ತಿಳಿಯಲಾರದು. ಎಷ್ಟು ಕಾಲ ಕತ್ತಲೆಯಲ್ಲಿದ್ದರೆ ಅಷ್ಟಷ್ಟೂ ಬೆಳಕಿನ ಮೌಲ್ಯದ ಅರಿವಾಗುವುದು. ವೇದದ ಸುಪ್ರಸಿದ್ಧ ಋಷಿಗಳೊಬ್ಬರ ಹೆಸರು "ದೀರ್ಘತಮಸ್ಸು" ಎಂದು ಇರುವುದನ್ನೂ ವಸ್ತುತಃ ಇವರು ಹುಟ್ಟು ಕುರುಡರೆಂಬುದನ್ನೂ ಈ ದೃಷ್ಟಿ ಯಿಂದ ಗಮನಿಸುವುದು ಯುಕ್ತ. (ಟಿ.ಎಸ್. ಎಲಿಯೆಟ್ ಎಂಬ ಆಂಗ್ಲ ಕವಿ ಯೊಬ್ಬನು ಇದನ್ನೇ ಸಂಕೇತಿಸುವಂತೆ "Let the dark come upon you which shall be the darkness of God" ಇತ್ಯಾದಿ ರೀತಿಯಲ್ಲಿ ಇದನ್ನೇ ವರ್ಣಿಸಿದ್ದಾನೆ.) ಕತ್ತಲೆಯಲ್ಲಿ ಕುಳಿತು ಕೊಳೆತ ಮೇಲೆ, ಮನಸ್ಸು ಪಕ್ವವಾಗಿ ಅಂಧಕಾರ ಶಕ್ತಿಗಳೆಲ್ಲ ದಮನವಾಗಿ ಸೂರ್ಯೋದಯದ ಪೂರ್ವ ಸೂಚನೆ ಯಾದ ಉಷೋದೇವಿಯ ಆವಿರ್ಭಾವವು ಸ್ವಲ್ಪ ಸ್ವಲ್ಪವಾಗಿ ಪೂರ್ವ ದಿಗಂತ ದಲ್ಲಿ ಆಗುತ್ತಿರುವಂತೆಯೇ ಮನಸ್ಸಿನಲ್ಲೂ ಬ್ರಹ್ಮಜ್ಞಾನದ ಉದಯದ ಮೊದಲು ಉಲ್ಲಾಸಕರವಾದ ಒಂದು ವಾತಾವರಣವು ಏರ್ಪಡುತ್ತದೆ. ಇದು ವಾಚಾಮಗೋಚರವಾದ ಒಂದು ಅನುಭವ. ಎಳೆಗೂಸು ಇನ್ನೂ ಬಲಿಯದ ಸ್ಥಿತಿಯಲ್ಲಿ ತಾಯಿ ಎಂಬ ವಸ್ತುವನ್ನು ಕಂಡಾಗ 'ಪ್ರೀತಿ' ಎಂದು ಹೇಳಲೂ ಬಾರದ, ಆದರೆ ಸ್ವಾಭಾವಿಕವಾಗಿ ಉದಿಸಿದ, ಅದಮ್ಯವಾದ ಒಂದು ಅನು ಭವವು ಆ ಪ್ರೀತಿ ಪೂರ್ವದಲ್ಲಿ ಹೇಗೆ ಬರುವುದೋ ಹಾಗೇ, 'ಉಷೋ' ದೇವಿಯ ಉದಯವು ಮಾನವನ ಮನಸ್ಸಿನ ಸಂಧ್ಯಾಕಾಲದ ದ್ಯೋತಕವಾಗಿ ರುವುದು. ವೈದಿಕನ ಸನಾತನ ಪದ್ಧತಿಯ ದೇವತಾರಾಧನೆ ನಡೆಯುವುದು ಈ ಸಂಧಿಕಾಲದಲ್ಲಿಯೇ.

ತೈತ್ತಿರೀಯ ಆರಣ್ಯಕವು ಇಲ್ಲಿ ಇನ್ನೊಂದು ಮರ್ಮವನ್ನು ತಿಳಿಸುತ್ತದೆ (II-7). ಒಮ್ಮೆ ರಾಕ್ಷಸರು ಉಗ್ರ ತಪಸ್ಸನ್ನಾಚರಿಸಿದಾಗ ಪ್ರಜಾಪತಿ ಶಬ್ದವಾಚ್ಯನಾದ ಭಗವಂತನು ಅವರಿಗೆ ಪ್ರತ್ಯಕ್ಷನಾಗಿ ಏನು ವರಬೇಕೆನ್ನಲು. "ನಾವು ಈ ಆದಿತ್ಯನೊಡನೆ ಯುದ್ಧಮಾಡುವಂತಾಬೇಕೆ"ಂದರಂತೆ. "ಆಗಲಿ, ಯುದ್ಧಮಾಡಿರಿ" ಎಂದು ಪ್ರಜಾಪತಿಯು ವರವನ್ನು ಅನುಗ್ರಹಿಸಿದಂತೆಯೇ ಸಂಧ್ಯಾಕಾಲದಲ್ಲಿ ಸೂರ್ಯೋದಯವಾಗುವ ಕಾಲದಲ್ಲಿ ದಿನವೂ ಸೂರ್ಯನೊಡನೆ ಇಂದಿಗೂ ಯುದ್ಧ ಮಾಡುತ್ತಾರೆ; ಹಾಗೆಯೇ ಅಸ್ತಮಾನ ಕಾಲದಲ್ಲೂ ಸಹ "ಸಂಧ್ಯೆ"ಯೇ ರಾಕ್ಷಸರಿಗೆ ಯುದ್ಧಕ್ಕೆ ಸಕಾಲ. ಆದರೆ ಬ್ರಹ್ಮವಾದಿಗಳು ಪೂರ್ವಾಭಿಮುಖರಾಗಿ ನಿಂತು ಗಾಯತ್ರೀ ಮಂತ್ರದಿಂದ ಅಭಿಮಂತ್ರಿತವಾದ ನೀರಿನಿಂದ ಕೊಡುವ "ಅರ್ಘ್ಯ"ವೆಂಬುದು ಈ ರಾಕ್ಷಸರನ್ನು ವಜ್ರಾಯುಧದಂತೆ ನಿಗ್ರಹಿಸಿ "ಮಂದೇಹಾರುಣ"ವೆಂಬ ದ್ವೀಪದಲ್ಲಿ ಎಸೆದು ಸೂರ್ಯನಿಗೆ ಒದಗಿದ ಗಂಡಾಂತರವನ್ನು ಪಾರುಮಾಡುತ್ತದೆ. ನಂತರ ಮಾಡುವ ಪ್ರದಕ್ಷಿಣವು ಈ ಪಾಪವನ್ನೂ ಪರಿಹರಿಸುತ್ತದೆ. ಉದಯಾಸ್ತಮಾನ ಕಾಲದಲ್ಲಿ ಆದಿತ್ಯನನ್ನು ಅಭಿಧ್ಯಾನ ಮಾಡುತ್ತಾ ಕರ್ಮಶೀಲನಾದ ಬ್ರಾಹ್ಮಣನು, "ಅಸಾವಾದಿತ್ಯೋ ಬ್ರಹ್ಮ" ಎಂದು ಜಪಿಸುತ್ತಾ ಸಕಲ ಮಂಗಳವನ್ನೂ ಹೊಂದುತ್ತಾನೆ. ಸಕಾಲದಲ್ಲಿ ಪರಮಾತ್ಮನನ್ನು ಹೊಂದುತ್ತಾನೆ.

ಹೀಗೆ ಆದಿತ್ಯನು ರಾಕ್ಷಸರನ್ನು ಜಯಿಸುವುದಕ್ಕೆ ಬ್ರಹ್ಮವಾದಿಯು ತ್ರಿಕಾಲದಲ್ಲಿಯೂ ನಡೆಸತಕ್ಕ ಸಂಧ್ಯೋಪಾಸನೆಯೇ ಕಾರಣವೆಂಬುದತಲ್ಲಿ ಬಹಳ ಅರ್ಥವಿದೆ. ಇದನ್ನು ನಡೆಸದವನ ಪಾಲಿಗೆ "ಸೂರ್ಯ"ನಿಲ್ಲದೆ, ಅವನ ಮನಸ್ಸಿನ ಸಂಧ್ಯೆಯಲ್ಲಿ ರಾಕ್ಷಸರೇ ಜಯಿಸಿ ಪ್ರತಿಷ್ಠಿತರಾಗುತ್ತಾರಾದುದರಿಂದ, ಸಂಧ್ಯೋಪಾಸನೆಯು ರಾಕ್ಷಸನಾಶಕವೂ, ಜ್ಞಾನಸೂರ್ಯ ವಿಜಯಕ್ಕೆ ಉಪಕರಣವೂ ಆಗಿದೆ. ಜ್ಞಾನದ ಉಳಿವು ಅಳಿವು ಇದನ್ನೇ ಅವಲಂಬಿಸಿದೆ.

ಇದೇ ಸಂಧ್ಯೋಪಾಸನೇ. ವಸ್ತುತಃ ಇದು ಸೂರ್ಯರೂಪಿ ಭಗವಂತನ ಆರಾಧನೆಯೇ ಆದರೂ ಇದು ನಡೆಯುವುದು ಮಾತ್ರ ಸಂಧ್ಯಾಕಾಲದಲ್ಲಿಯೇ. ಈ ವಿಷಯವನ್ನು ಮೇಲಿನ ಮಂತ್ರವು ಮಾರ್ಮಿಕವಾಗಿ ಬಳಸಿ

ಕೊಂಡಿದೆ. "ಸಂಖ್ಯೆಯಲ್ಲಿ ಎಚ್ಚರವಿಲ್ಲದಿದ್ದರೆ ಸೂರ್ಯೋದಯವಿಲ್ಲ" ಎಂಬ ಹೊರಗಿನ ಲೋಕಕ್ಕೆ ಅನ್ವಯವಿಲ್ಲದ ವಿನೂತನ ಸತ್ಯವೊಂದು, ಅಧ್ಯಾತ್ಮ ಜೀವನಕ್ಕೇ ಅನ್ವಯಿಸುವ ರೀತಿಯಲ್ಲಿ ಇಲ್ಲಿ ವರ್ಣಿಸಲ್ಪಟ್ಟಿದೆ. 'ಸೂರ್ಯ'ನನ್ನು ವಶಮಾಡಿಕೊಳ್ಳಬೇಕೆಂದರೆ ಉಷೋದೇವಿಯನ್ನು ಮೊದಲು ವಶೀಕರಿಸಬೇಕು ; ಏಕೆಂದರೆ ಸೂರ್ಯನು ಸಹ ಇವಳನ್ನೇ ಹಿಂಬಾಲಿಸುತ್ತಾನೆ, ಎಂದು ಮಂತ್ರವು ತಿಳಿಸುತ್ತಿದೆ.

## ೪. ಸೂರ್ಯತ್ವವು ಯಾವುದರಲ್ಲಿದೆ?

ಈಗ ಇಂತಹ ಭಗವಂತನಾದ ಸೂರ್ಯದೇವನ 'ಸೂರ್ಯತ್ವ'ವು ಯಾವುದರಲ್ಲಿದೆ ? ಎಂದರೆ ಒಂದು ಋಕ್‌ಸೂಕ್ತದಲ್ಲಿ (I-115-4) ಇದನ್ನು ಹೀಗೆ ವಿವರಿಸಲಾಗಿದೆ :

ತತ್ಸೂರ್ಯಸ್ಯ ದೇವತ್ವಂ ತನ್ಮಹಿತ್ವಂ ಮಧ್ಯಾಕರ್ತೋ-
ರ್ವಿತತಂ ಸಂಜಭಾರ ।
ಯದೇದಯುಕ್ತ ಹರಿತಃ ಸಧಸ್ಥಾದಾದ್ರಾತ್ರೀ ವಾಸಸ್ತ-
ನುತೇಸಿಮಸ್ಮೈ ॥

"ಸೂರ್ಯದೇವನಮಾಹಾತ್ಮ್ಯವೂ ಸರ್ವಸ್ವಾಮಿತ್ವವೂ ಯಾವುದರಲ್ಲಿ ಅಡಗಿದೆ ಎಂದರೆ, ಅವನ ವ್ಯಾಪ್ತವಾದ ( ಸರ್ವವ್ಯಾಪಕವಾದ ) ಕಿರಣಗಳು ಯಾವಾಗ ಉಪಸಂಹೃತವಾಗಿ, ಸೂರ್ಯನು ಅಸ್ತಮಿಸುತ್ತಾನೊ ಆಗ ಸಮಸ್ತ ಪ್ರಾಣಿಗಳ ಕರ್ಮಪ್ರವೃತ್ತಿಯೂ ಪರಿಸಮಾಪ್ತಿಯಾಗಿ ಹೋಗುವುದು. ಪುನಃ ಸೂರ್ಯೋದಯವು ಆದಾಗಲೇ ಲೋಕವು ಕರ್ಮಪ್ರವೃತ್ತಿಯನ್ನು ಹೊಂದುವಂತಾಗುತ್ತದೆ."

ಸೂರ್ಯನು ದಿವ್ಯಜ್ಞಾನಕ್ಕೆ ಸಂಕೇತವಾಗಿರುವುದು ಮಾತ್ರವಲ್ಲದೆ, ಸಕಲ ಶ್ರೇಷ್ಠಕರ್ಮಗಳಿಗೂ ಪ್ರೇರಕನಾಗಿರುವನೆಂದು ವೇದದಲ್ಲಿ ಪದೇಪದೇ ಹೇಳಿರುವುದು ಗಮನೀಯ. ಸೂರ್ಯಸಂಚಾರದ ಗತಿಯಲ್ಲಿಯೇ ವೇದಗಳೆಲ್ಲವೂ ಅಡಗಿವೆಯೆಂಬ ವೇದವಾಕ್ಯದಲ್ಲಿ ಹೊರಗಿನ ಕಣ್ಣಿಗೆ ಕಾಣುವ ಸೂರ್ಯನಿಗಿಂತಲೂ ಪರಂಜ್ಯೋತಿಸ್ಸ್ವರೂಪನಾಗಿ, ಜ್ಞಾನೈಕಾಕಾರನಾದ, ಭಗವಂತನ ಪ್ರಸ್ತಾಪವಿರುವುದು ಸ್ಪಷ್ಟ :

"ಋಗ್ಭಿಃ ಪೂರ್ವಾಹ್ಣೇ ದಿವಿ ಈಯತೇ। ಯಜುರ್ವೇದೇ ತಿಷ್ಠತಿ ಮಧ್ಯೇ ಅಹ್ನಃ। ಸಾಮವೇದೇನಾಸ್ತಮಯೇ ಮಹೀಯತೇ। ವೇದೈಃ ಅಶೂನ್ಯೈಸ್ತ್ರಿಭಿರೇತಿ ಸೂರ್ಯಃ।" (ತೈ. ಬ್ರಾ. II-12-9)

"ಸೂರ್ಯನು ಪೂರ್ವದಿಕ್ಕಿನಲ್ಲಿ ಮುಂಜಾನೆ ಉದಿಸುವುದೇ ಋಕ್ಕುಗಳೊಡನೆ, ಹಗಲ ನಡುವೆ ಯಜುರ್ವೇದದ ಮಧ್ಯದಲ್ಲಿಯೇ ನಿಂತಿರುತ್ತಾನೆ. ಅಸ್ತಂಗತನಾಗುವ ಕಾಲದಲ್ಲಿ ಸಾಮವೇದದಿಂದ ಮಹತಿ ಹೊಂದುತ್ತಾನೆ. (ಹೀಗೆ) ಅಶೂನ್ಯಗಳಾದ (ಅಂದರೆ 'ಸೂರ್ಯರಹಿತ'ಗಳಲ್ಲದ) ವೇದಗಳಿಂದ ಸಮೇತನಾಗಿಯೇ ಸೂರ್ಯನು ಸಂಚರಿಸುತ್ತಾನೆ."

"ಸೂರ್ಯ" ಸಮೇತಗಳಾಗಿರುವುದರಿಂದಲೇ ವೇದಗಳು "ಅಶೂನ್ಯ"ವಾಗಿವೆಯೆಂದರೆ, ಈ ಸೂರ್ಯನು ಯಾರೆಂದು ತಿಳಿಯುವುದಲ್ಲವೆ? ಹಾಗೆಯೇ ವೇದ ಸಹಿತವಾಗಿಯೇ 'ಸೂರ್ಯ'ನು ಸಂಚರಿಸುವನೆಂದರೆ, ವೇದಗಳಿಗೂ ಅವುಗಳಲ್ಲಿ ಅಂತರ್ಗತನಾಗಿರುವ ಜ್ಞಾನಸೂರ್ಯನಿಗೂ, ವೇದಗತಿಗೂ-ಸೂರ್ಯಗತಿಗೂ ಸಂಬಂಧವನ್ನು ಇಲ್ಲಿ ಮಾರ್ಮಿಕವಾಗಿ ಸೂಚಿಸಲಾಗಿದೆ. ಯಾವನ ಪಾಲಿಗೆ ವೇದಗಳಿಲ್ಲವೋ, ಅವನ ಪಾಲಿಗೆ 'ಸೂರ್ಯ'ನೂ ಇಲ್ಲದೆ, 'ಅಂಧ'ತಮಸ್ಸೆಂಬ ಕತ್ತಲೆಯೇ ಪ್ರಾಪ್ತವಾಗುತ್ತದೆಯೆಂದು ತಾತ್ಪರ್ಯ. ಈ ಮಾತುಗಳು ಯಾರ ಕಲ್ಪನೆಯೂ ಅಲ್ಲದೆ, ವೇದಜ್ಞರಾದ ಪೂರ್ವಿಕರು ತಲೆಯಿಂದ ತಲೆಗೆ ಈ ರಹಸ್ಯವನ್ನು ಹೇಳಿಕೊಂಡು ಕಾಪಾಡುತ್ತಾ ಬಂದರೆಂದೂ ವೇದವೇ ಈ ಪ್ರಸಂಗದಲ್ಲಿ ಹೇಳಿದೆ: "ಪೂರ್ವೇ ಪೂರ್ವೇಭ್ಯೋ ವಚ ಏತದೂಚುಃ" (ಅದೇ).

ಹಿಂದೊಂದು ಕಾಲದಲ್ಲಿ (ವೇದವ್ಯಾಸರಿಗೆ ಹಿಂದೆ), ಸಕಲ ವೇದವೂ ಅವಿಭಕ್ತವಾಗಿ ಒಟ್ಟಿನಲ್ಲಿ ಯಜುರ್ವೇದವೆಂದೇ ಪ್ರಸಿದ್ಧವಾಗಿತ್ತೆಂದೂ, ಇದರ ವಿಭಾಗವು ವ್ಯಾಸರಿಂದ ಆಯಿತೆಂದೂ ಶ್ರೀ ವಿಷ್ಣುಪುರಾಣದಲ್ಲಿ ಹೇಳಿದೆ. (III-4-11)

ಏಕ ಆಸೀತ್ ಯಜುರ್ವೇದಃ ತಂ ಚತುರ್ಧಾವ್ಯಕಲ್ಪಯತ್ ॥ 'ಯಜುರ್ವೇದೇ ಹಿ ಅಧ್ವರ್ಯುಕ್ರಿಯಾಬಾಹುಳ್ಯಾತ್ ಯಜನ ಸಾಧನತ್ವಾಚ್ಚ ಯಜುಃಪ್ರಾಚುರ್ಯಾತ್ ಸರ್ವೋಽಪಿ ವೇದೋ ಯಜುರಿತ್ಯುಕ್ತಂ" ಎಂದು ಶ್ರೀ ವಿಷ್ಣುಚಿತ್ತೀಯವ್ಯಾಖ್ಯಾನ. "ಯಜುರ್ವೇದದಲ್ಲಿ ಅಧ್ವರ್ಯು

ಿನ ಕೆಲಸ ಬಹಳವಿರುವುದರಿಂದಲೂ, ಯಜ್ಞಸಾಧನಗಳಿರುವುದರಿಂದಲೂ, ಯಜುಸ್ಸೇ ಪ್ರಚುರವಾಗಿರುವುದರಿಂದಲೂ, ಎಲ್ಲ ವೇದವೂ (ಒಂದು ಅರ್ಥದಲ್ಲಿ) ಯಜುಸ್ಸೇ ಎಂದು ಹೇಳಲ್ಪಟ್ಟಿದೆ" ಎಂದು ಅರ್ಥ. ಇದರಿಂದ ಸಕಲ ವೇದವೂ ವ್ಯಾಸಪೂರ್ವದಲ್ಲೂ, ವ್ಯಾಸಾನಂತರವೂ, ನಿರಂತರವಾಗಿ ಕ್ರಿಯಾಪ್ರಧಾನವಾಗಿರುವಂತೆ ಹೇಳಿದಂತಾಯಿತು. ವೇದವು ಕ್ರಿಯಾಶೂನ್ಯವಾದ ಶುಷ್ಕಜ್ಞಾನವನ್ನಾಗಲೀ, ಜ್ಞಾನಶೂನ್ಯವಾದ ಶುಷ್ಕಕ್ರಿಯೆಯನ್ನಾಗಲೀ ಬೋಧಿಸದೆ, ಜೀವನದ ಗಮ್ಯವಾದ ಭಗವತ್ಸ್ವರೂಪವನ್ನೂ ಇದನ್ನು ಸಾಧಿಸಲು ಅವಶ್ಯವಾದ ಅನುಷ್ಠಾನ ಪ್ರಕಾರವನ್ನೂ, ಸಾಧನಸೋಪಾನವನ್ನೂ ಏಕಕಾಲಕ್ಕೆ ಬೋಧಿಸಿದೆಯೆಂಬುದು ಮಥಿತಾರ್ಥ. ಪ್ರಕೃತ ಋಕ್ಸೂಕ್ತವು "ಸೂರ್ಯನ ಸೂರ್ಯತ್ವವು ಇರುವುದೇ ಅವನ ಕರ್ಮಪ್ರೇರಕತ್ವದಲ್ಲಿ" ಎಂಬುದನ್ನು ಎತ್ತಿ ಹೇಳಿರುವುದು ಹೀಗೆ ಬಹುಮಾರ್ಮಿಕ, ಗಾಯತ್ರೀ ಮಂತ್ರವೂ ಸಹ ಭಗವಂತನನ್ನು ಸೂರ್ಯನಲ್ಲಿರುವ "ಬೆಳಕೆ"ಂದು ವರ್ಣಿಸುವುದು ಮಾತ್ರವಲ್ಲದೇ, "ನಮ್ಮೆಲ್ಲರ ಬುದ್ಧಿಗಳನ್ನು ಪ್ರಚೋದಿಸುವವನೂ ಅವನೇ" ಎಂದು ಅವನ ಪ್ರೇರಕತ್ವವನ್ನೂ ಅಲ್ಲೇ ಹೇಳಿದೆ. ಜ್ಞಾನ-ಕರ್ಮಗಳ ಸಮನ್ವಯು, ವೇದದ, ಗಾಯತ್ರಿಯ, ಉಸಿರಾಗಿದ್ದು, ಜೀವನ ಸುಂದರವಾಗಲು ಇರುವ ಒಂದೇ ಸೂತ್ರವಾಗಿದೆ. ಇದೇ ವೇದ ಮಾರ್ಗ.

ಹೀಗೆ ಸೂರ್ಯನು ಸಕಲ ಕರ್ಮಗಳ ಪ್ರೇರಕ. (ಯದಿಹ್ಯಹಂ ನ ವರ್ತೇಯಂ ಜಾತುಕರ್ಮಣ್ಯತಂದ್ರಿತಃ..." ಇತ್ಯಾದಿ ಗೀತಾ ವಾಕ್ಯವೂ ಇದನ್ನೇ ಬೋಧಿಸುತ್ತದೆ.)

ತೈತ್ತಿರೀಯ ಆರಣ್ಯಕದ ಮೂರನೆಯ ಪ್ರಶ್ನದಲ್ಲಿ "ರಶ್ಮಿಗ್ಂ ರಶ್ಮೀನಾಂ ಮಧ್ಯೇ ತಪಂತಂ। ಋತಸ್ಯ ಪದೇ ಕವಯೋ ನಿಪಾಂತಿ। ಯ ಆಂಡ ಕೋಶೆ ಭುವನಂ ಭಿಭರ್ತಿ ॥ ......" ಇತ್ಯಾದಿ ವರ್ಣನೆಗಳೂ ಈ ಪರಂಜ್ಯೋತಿ ಸ್ವರೂಪನಾದ ಭಗವಂತನನ್ನೇ ವರ್ಣಿಸುತ್ತವೆ. ಇದೇ ಆರಣ್ಯಕದ ಮೊದಲನೆಯ ಪ್ರಶ್ನದ ಆದ್ಯಂತವಾಗಿ, ಈ ಭಗವಂತನ ವರ್ಣನೆಯೇ ಬಂದಿದೆ. ಪ್ರಕೃತ ಈ ಮೂರನೆಯ ಪ್ರಶ್ನದಲ್ಲಿ ಸಕಲ ಜಗತ್ತನ್ನೂ ಧರಿಸಿರುವ ಇವ

ನನ್ನೇ ಸಹಸ್ರಶೀರ್ಷಪುರುಷನನ್ನಾಗಿಯೂ ವರ್ಣಿಸಿ, ಸಕಲ ಜಗತ್ಪತಿ ಎಂಬ ಅರ್ಥದಲ್ಲಿ 'ಭರ್ತಾ' ಎಂದು ಸ್ತುತಿಸಲಾಗಿದೆ.

**"ಭರ್ತಾ ಸನ್ ಭ್ರಿಯಮಾಣೋ ಬಿಭರ್ತಿ। ಏಕೋ ದೇವೋ ಬಹುಧಾ ನಿವಿಷ್ಟಃ। ಯದಾ ಭಾರಂ ತಂದ್ರಯತೇ ಸ ಭರ್ತುಂ। ನಿಧಾಯ ಭಾರಂ ಪುನರಸ್ತಮೇತಿ। ತಮೇವ ಮೃತ್ಯುಂ, ಅಮೃತಂ ತಮಾಹುಃ। ತಂ ಭರ್ತಾರಂ ತಮು ಗೋಪ್ತಾರಮಾಹುಃ। ಸ ಭೃತೋ ಭ್ರಿಯಮಾಣೋ ಬಿಭರ್ತಿ".**

ಇತ್ಯಾದಿ ವರ್ಣನೆ ಇದೆ. "ಪರಮಾತ್ಮನು ಜಗತ್ತನ್ನು ರಕ್ಷಿಸುವ ಭಾರವನ್ನು ಹೊತ್ತಿದ್ದಾನೆ. ಆದರೆ ಜಗತ್ತೂ ಈ ವಿಷಯದಲ್ಲಿ ಅವನೊಡನೆ ಸಹಕರಿಸುವ ಭಾರವನ್ನು ಹೊತ್ತಿದೆ. ಒಬ್ಬನೇ ಆದ ಭಗವಂತನು ಬಹು ವಿಧ ಜಂತುಗಳ ಹೃದಯ ಗುಹೆಯಲ್ಲಿ ಏಕಕಾಲಕ್ಕೆ ಇದ್ದಾನೆ. ಜಗದ್ವ್ಯಾಪ್ತಿ ಭಾರವನ್ನು ಹೊತ್ತು ಸಾಕಾಗಿ, ಬೇಸರವಾದಾಗ ಅವನು 'ಅಸ್ತ'ಂಗತನಾಗುತ್ತಾನೆ. ಇದೇ ತಮಶ್ಶಬ್ದ ವಾಚ್ಯವಾದ ಪ್ರಳಯ. ಹೀಗೆ ಜಗತ್ತಿಗೆ ಅಮೃತಸ್ವರೂಪನೂ, ಮೃತ್ಯುಸ್ವರೂಪನೂ ಅವನೇ ಎಂದು ತಿಳಿದವರು ಹೇಳುವರು. ಜಗತ್ತಿನ ಸಂರಕ್ಷಕನೂ, ಧಾರಕನೂ, ಪೋಷಕನೂ, ಅವನೇ ಎಂದೂ ಹೇಳುವರು. ಇವನನ್ನು ಜಗತ್ತು ಭರಿಸುವುದಾದರೆ ಅವನೂ ಭರಿಸುವನು."

ಇದು ಬಹು ಸುಂದರವಾದ ಶ್ರುತಿ ಪ್ರಸಂಗ. ಇಂತಹ ಅನೇಕ ಕಡೆಗಳಲ್ಲಿ ಸೂರ್ಯನೆಂದರೆ ಸಕಲ ಜಗತ್ತಿನ ಸೃಷ್ಟಿ ಸ್ಥಿತಿ ಲಯಗಳನ್ನು ಲೀಲೆಯನ್ನಾಗಿವುಳ್ಳ ಭಗವಂತನೇ ಎಂದೂ, ಪ್ರಾಕೃತ ಕಣ್ಣಿಗೆ ಕಾಣುವ ಈ ಸೂರ್ಯನು ಅವನಿಗೆ ಕೇವಲ ಸಂಕೇತ ಮಾತ್ರವೆಂದೂ, ಸ್ಪಷ್ಟವಾಗುವುದು. ಮೇಲೆ ಉದಾಹರಿಸಲ್ಪಟ್ಟ ಸೂರ್ಯನ ದೇವತ್ವವನ್ನು, 'ಮಹಿತ್ವ'ವನ್ನು ಹೇಳುವ ಋಙ್ಮಂತ್ರವೂ, ಈ ಮರ್ಮವನ್ನೇ ಶ್ರುತಪಡಿಸುತ್ತದೆ. ಯಾವನು ಇಲ್ಲದಿದ್ದರೆ ಜಗತ್ತೇ ಇರಲು ಶಕ್ಯವಿಲ್ಲವೋ, ಯಾವನ ಸಂಕಲ್ಪವು ಅನುಗ್ರಹಮಯವಾದರೆ ಜಗತ್ತಿನ ಸೃಷ್ಟಿ, ಸ್ಥಿತಿಲಯಗಳೋ, ಅವೇ ನಿಗ್ರಹರೂಪವಾದರೆ ಮಹಾಪ್ರಳಯವೋ, ಅವನೇ ಜಗತ್ತಿಗೆ ಒಡೆಯ— ಎಂದೂ ಈ ಮಂತ್ರವು "ಜನ್ಮಾದ್ಯಸ್ಯ ಯತಃ" ಎಂಬ ಬ್ರಹ್ಮಸೂತ್ರಾರ್ಥವನ್ನೇ

ಸಮರ್ಥಿಸಿ ಪ್ರತಿಪಾದಿಸುತ್ತಿದೆ. ಇಲ್ಲಿ ಸೂರ್ಯ ರಶ್ಮಿಗಳನ್ನು ಭಗವತ್ಕೃಪೆಯ ಸಂಕೇತರೂಪವಾದ ಅನುಗ್ರಹ ಶಕ್ತಿ ಎಂಬ ಅರ್ಥದಲ್ಲಿಯೂ ಒಂದು ಮಂತ್ರ ದಲ್ಲಿ ಸ್ತುತಿಸಿದಂತಿದೆ : "ಪ್ರಕಾಶಿಸುವ ಸೂರ್ಯ ರಶ್ಮಿಗಳೇ! ಸೂರ್ಯನು ಉದಿಸಲಾಗಿ, ನೀವು ನಮ್ಮನ್ನು ಪಾಪಗಳಿಂದ ವಿಮೋಚನೆಗೊಳಿಸುತ್ತೀರಿ. ನಿಮಗೆ ಮಾಡುವ ನಮ್ಮ ಈ ಪ್ರಾರ್ಥನೆಯು ಮಿತ್ರ, ವರುಣ, ಮೊದಲಾದ ದೇವತೆಗಳಿಂದ ಶಕ್ತಿಯುತವಾಗಿ ಮಾಡಲ್ಪಡಲಿ." ಭಗವಂತನು ಅನುಗ್ರಹಿ ಸುವ ದೊಡ್ಡ ವಸ್ತುವೇ ಅವನ ಬಗೆಗೆ ನಮಗೆ ಇರಬೇಕಾದ ಜ್ಞಾನ. ಈ ಭಗವದ್‌ಜ್ಞಾನವು ಸಕಲ ಪಾಪ ನಿವಾರಕ. ಇಂತಹ ಜ್ಞಾನದ ಬಯಕೆಯ ರೂಪವಾದ ಸ್ತುತಿಯು ದೇವತೆಗಳಿಂದಲೇ ಪೋಷಿಸಲ್ಪಡಬೇಕು ಎಂಬುದು ಭಾವ. (I–115–6)

ಸಂಧ್ಯಾ ಕಾಲದಲ್ಲಿ ಸಕಲ ಬ್ರಹ್ಮನಿಷ್ಠರಿಂದಲೂ ಸೇವಿಸಲ್ಪಡುವ ಹಲವಾರು ಮಂತ್ರಗಳು ಈ ಮೇಲಿನ ಅರ್ಥಗಳನ್ನೇ ಹೊಂದಿವೆ.

"**ಉದುತ್ಯಂ ಜಾತವೇದಸಂ ದೇವಂ ವಹಂತಿ ಕೇತವಃ । ದೃಶೇ ವಿಶ್ವಾಯ ಸೂರ್ಯಂ ।**" (I–50-1) "ಸೂರ್ಯ ರಶ್ಮಿಗಳು ಸೂರ್ಯೋ ದಯವನ್ನು ಜ್ಞಾಪಿಸುವಂತೆ, ಅವನನ್ನು ನಮ್ಮ ಕತ್ತಲೆಯಿಂದ ಮೇಲೆಳೆದು ತರುತ್ತವೆ. ಏಕೆಂದರೆ, **ಸಕಲ ವಿಶ್ವವೂ ಅವನನ್ನು ನೋಡಲಿ** ಎಂದು." ಇಲ್ಲಿ ಹೇಳಲ್ಪಟ್ಟಿರುವ ಸೂರ್ಯನು '**ಜಾತವೇದಸ**'ನೆಂದೂ ಕೊಂಡಾಡ ಲ್ಪಟ್ಟಿದ್ದಾನೆ. "**ಜಾತಾನಾಂ ಪ್ರಾಣಿನಾಂ ವೇದಿತಾರಂ, ಜಾತಪ್ರಜ್ಞಂ ಜಾತಧನಂ ವಾ**" ಎಂದು ಸಾಯಣರು ಅರ್ಥ ಮಾಡಿದ್ದಾರೆ. "ಸಕಲ ಪ್ರಾಣಿಗಳ ಹುಟ್ಟನ್ನೂ ತಿಳಿದವನು. ಅಥವಾ ಸಕಲೈಶ್ವರ್ಯ ಸಂಪನ್ನನು" ಎಂದು ಭಾವ. ಇದು ಭಗವಂತನೊಬ್ಬನಿಗೇ ಒಪ್ಪತಕ್ಕ ವಿಶೇಷಣ. ಇಂತಹ ದೇವರು ಇರುವುದೇ ಜಗತ್ತಿನ ಅನುಗ್ರಹಕ್ಕಾಗಿ; ಎಲ್ಲರೂ ಅವನನ್ನು ನೋಡಲಿ ಎಂದು. (ಆದರೆ ಎಷ್ಟು ಜನ ಅವನನ್ನು ನೋಡಿದ್ದಾರೆ ? ಅವನಿರುವುದನ್ನು ತಿಳಿದಿದ್ದಾರೆ ? ಎಂದು ಕೇಳುವಂತಿದೆ ಸೂಕ್ತ !!)

ಮುಂದಿನ ಮಂತ್ರದಲ್ಲಿ '**ಸೂರಾಯ, ವಿಶ್ವ ಚಕ್ಷಸೇ**' ಎಂಬಲ್ಲಿ ಸಕಲ ಜಗತ್ತಿಗೂ ಭಗವಂತನು ನೇತ್ರಪ್ರಾಯನಾಗಿರುವನೆಂದು ವರ್ಣಿಸಲಾಗಿದೆ. ಈ ಪ್ರಕಾಶದಲ್ಲಿ ಉಳಿದೆಲ್ಲ ಪ್ರಕಾಶಗಳೂ ಮುಳುಗಿ ಹೋಗುತ್ತವೆ ಎಂದು

ಮುಂದಿನಮಂತ್ರ, ಹೇಳುತ್ತದೆ. ("ನ ತತ್ ಭಾಸಯತೇ ಸೂರ್ಯಃ.... ತಸ್ಯ ಭಾಸಾ ಸರ್ವಮಿದಂ ವಿಭಾತಿ" ಎಂಬ ಗೀತಾ, ಕಠೋಪನಿಷತ್ತುಗಳ, ಸೂಕ್ತಾರ್ಥವೂ ಇದೇ.) ಇದೇ ಸೂಕ್ತದ ೪ನೇ ಮಂತ್ರದಲ್ಲಿ ಇವನನ್ನು 'ತರಣಿ' ಎಂದು ವರ್ಣಿಸಲಾಗಿದೆ. "ತರಿತಾ, ಅನ್ಯೇನ ಗಂತುಂ ಅಶಕ್ಯಸ್ಯ ಮಹತೋ ಅಧ್ವನೋ ಗಂತಾ"—ಎಂಬಂತೆ, "ಇತರರಿಂದ ಹೋಗಲು ಸಾಧ್ಯವಲ್ಲದ ದಾರಿಯಲ್ಲಿ ಹೋಗತಕ್ಕವನು." ಎಂದು ಸಾಯಣ ಭಾಷ್ಯ. ಅಥವಾ "ಉಪಾಸಕಾನಾಂ ರೋಗಾತ್ ತಾರಯಿತಾ" ಎಂಬಂತೆ "ಭಕ್ತರ ರೋಗಗಳನ್ನು ಹೋಗಲಾಡಿಸುವವನು" ಎಂಬರ್ಥದಲ್ಲಿಯೂ ಇವನು "ತರಣಿ" ಎಂದು ಭಾಷ್ಯಕಾರರು ವಿವರಿಸಿದ್ದಾರೆ. ಇವನನ್ನು ದರ್ಶನ ಮಾಡಿದ ಮಾತ್ರದಿಂದ ಸಕಲ ಪಾಪಗಳೂ ಹೋಗುವುವೆಂದೂ. ಇತರ ವಸ್ತುಗಳನ್ನು "ಜ್ಯೋತಿಷ್ಕೃತ್," ಎಂಬಂತೆ ಜ್ಯೋತಿರ್ಮಯವನ್ನಾಗಿ ಮಾಡುವವನೆಂದೂ ಕೊಂಡಾಡಲಾಗಿದೆ. ಈ 'ಸೂರ್ಯನು' ಚೇತನರ ಹೊರಗಲ್ಲದೇ ಅಂತರಂಗದಲ್ಲೂ ಕಾಣತಕ್ಕವನೆಂಬುದನ್ನು ಇದರ ಮುಂದಿನ ಮಂತ್ರದಲ್ಲಿ ಹೇಳಲಾಗಿದೆ :

ಪ್ರತ್ಯಙ್ ದೇವಾನಾಂ ವಿಶಃ ಪ್ರತ್ಯಙ್ಙುದೇತಿ ಮಾನುಷಾನ್ ಪ್ರತ್ಯಙ್ವಿಶ್ವಂ ಸ್ವರ್ದೃಶೇ । ದೇವತೆಗಳ, ಮಾನವರ, ಸಕಲ ವಿಶ್ವದ, ಹೃದಯಾಭಿಮುಖನಾಗಿಯೂ ಉದಿಸುವ ಸೂರ್ಯ ವರ್ಣನೆ ಇದೇ. ("ಪರಾಂಚಿಖಾನಿ...ತಸ್ಮಾತ್ ಪರಾಙ್ ಪಶ್ಯತಿ...ಕಶ್ಚಿತ್ ಧೀರಃ ಪ್ರತ್ಯಗಾತ್ಮಾನಂ ಐಕ್ಷತ ಆವೃತ್ತಚಕ್ಷುಃ ಅಮೃತತ್ವಮಿಚ್ಛನ್" ಎಂಬ ಕಠೋಪನಿಷತ್ತಿನ (IV-1) ಸೂಕ್ತದಲ್ಲಿ ಹೇಳಿರುವಂತೆ, ಕಣ್ಣುಗಳನ್ನು ಧೀರನಾದವನು ಒಳಕ್ಕೆ ತಿರುಗಿಸಿ, ನೋಡಿದಾಗ ಕಾಣುವ ಸೂರ್ಯನ ವರ್ಣನೆ ಇದು.)

## ೫. ಸೂರ್ಯ, 'ಹೃದ್ರೋಗ' ನಾಶಕ

ಇದೇ ಸೂಕ್ತದ (I-50-11) ಇನ್ನೊಂದು ಮಂತ್ರದಲ್ಲಿ ಸ್ಪಷ್ಟವಾಗಿಯೇ ಹೀಗೆ ಪ್ರಾರ್ಥಿಸಲಾಗಿದೆ :

"ಹೇ ಸರ್ವ ಪ್ರೇರಕನಾದ ಸೂರ್ಯನೇ, ನನ್ನ ಹೃದಯಗತವಾದ,

ಆಂತರ ರೋಗವನ್ನೂ ಶರೀರಗತವಾದ ಬಾಹ್ಯರೋಗವನ್ನೂ ನೀನು ನಾಶ ಗೊಳಿಸು."(ಹೃದ್ರೋಗಂ ಮಮ ಸೂರ್ಯ ಹರಿಮಾಣಂ ಚ ನಾಶಯ).

ವಸ್ತುತಃ ಈ ಮಂತ್ರವು ರೋಗ ಶಾಂತಿಗಾಗಿ ಉಪಯೋಗಿಸಲ್ಪಡ ತಕ್ಕದ್ದೆಂದೂ ಅನುಕ್ರಮಣಿಕೆಯಲ್ಲಿ ಹೇಳಲ್ಪಟ್ಟಿದೆ. ಹಿಂದೆ ಈ ಋಕ್ಕನ್ನು ಪ್ರಸ್ಕಣ್ವ ಋಷಿಯು ಉಪಯೋಗಿಸಿ ಪ್ರಾರ್ಥಿಸಲು, ಅವನ ಚರ್ಮ ಸಂಬಂಧ ವಾದ ರೋಗವು ನಾಶವಾಯಿತಂತೆ. ಶೌನಕರು ಬೃಹದ್ದೇವತೆಯಲ್ಲಿ, ಈ ಮಂತ್ರವು ಪಾಪ ಪ್ರಣಾಶಕವೆಂದೂ, ರೋಗ ನಿವಾರಕವೆಂದೂ, ವಿಷಾಪ ಹಾರಕವೆಂದೂ ಭುಕ್ತಿ ಮುಕ್ತಿ ಫಲಪ್ರದವೆಂದೂ ವರ್ಣಿಸಿದ್ದಾರೆ. "ಆರೋಗ್ಯಂ ಭಾಸ್ಕರಾತ್ ಇಚ್ಛೇತ್" ಎಂಬ ಮಾತು ಇದಕ್ಕಾಗಿಯೇ ಬಂದಿದೆ. ಆದುದರಿಂದ ಅಂತರಂಗ ಜೀವನದ ರೋಗಗಳ ನಿವಾರಣೆಗೆ ಭಗ ವಂತನ ಸ್ತೋತ್ರವೇ ಔಷಧ ಎಂಬುದನ್ನು ಈ ಮಂತ್ರವು ಘೋಷಿಸುತ್ತಿದೆ. ಮಾನವನ ನಿತ್ಯಶತ್ರುಗಳೇ ಆವನಲ್ಲಿರುವ ರೋಗಗಳೆಂದೂ ಅವುಗಳನ್ನು ನಿಗ್ರಹಿಸಲು ಶಕ್ತಿ ಇಲ್ಲದ ಮಾನವನಿಗೆ ಈ ವಿಷಯದಲ್ಲಿ ಸಹಾಯಕನಾಗಿರು ವವನೇ ಭಗವಂತನೆಂದೂ, ಇದೇ ಸೂಕ್ತದ ೧೩ನೇ ಮಂತ್ರದಲ್ಲಿ ಪ್ರಾರ್ಥಿಸ ಲಾಗಿದೆ.

ಉದಗಾದಯಮಾದಿತ್ಯೋ ವಿಶ್ವೇನ ಸಹಸಾ ಸಹ ।
ದ್ವಿಷನ್ತಂ ಮಹ್ಯಂ ರನ್ಧಯನ್ಮೋ ಅಹಂ ದ್ವಿಷತೇರಧಂ ॥

"ನನಗೆ ಅಭಿಮುಖನಾಗಿರುವ ಸೂರ್ಯನು ತನ್ನ ಸಮಸ್ತ ಬಲ ದೊಡನೆ ಉದಯಿಸಿದ್ದಾನೆ. ನನಗೆ ಉಪದ್ರವಕಾರಿಗಳಾದ, ರೋಗರೂಪ ದಲ್ಲಿರುವ ಶತ್ರುಗಳನ್ನು ನಿಗ್ರಹಿಸುವುದು ಅವನ ಉದ್ಯೋಗ. (ಅವನ ಉದಯ ಆದ ಕೂಡಲೇ ಇವರ ನಿಗ್ರಹವಾಯಿತು.) ಹಾಗೆಯೇ ಈ ನನ್ನ ಶತ್ರುಗಳನ್ನು ಸೂರ್ಯದೇವನೇ ನಿವಾರಿಸಬೇಕಲ್ಲದೆ. ನಾನೇ ನನ್ನ ದ್ವೇಷಿ ಗಳಾದ, ಈ ಆಂತಶ್ಶತ್ರುಗಳನ್ನು ನಿರೋಧಿಸುವುದಿಲ್ಲ".

ಅಂದರೆ, ಮಾನವನು ತನ್ನ 'ಆಂತರಂಗ' ಶತ್ರುಗಳನ್ನು ತಾನಾ ಗಿಯೇ ನಿಗ್ರಹಿಸಲು ಸಾಧ್ಯವಿಲ್ಲವೆಂದೂ, ಭಗವಂತನೇ ಇದನ್ನು ಮಾಡತಕ್ಕವ ನೆಂದೂ ಅಭಿಪ್ರಾಯ. ಇದೂ ಅಲ್ಲದೆ ಮತ್ತೊಂದು ಋಕ್‌ಸೂಕ್ತದಲ್ಲಿಯೂ

ಅಗಸ್ತ್ಯಮಹರ್ಷಿಗಳು ಇದೇ ರಹಸ್ಯವನ್ನು ಮತ್ತೊಂದು ರೀತಿಯಲ್ಲಿ ಈ ಕೆಳಗಿನ ಮಂತ್ರಗಳಲ್ಲಿ ಸೂಚಿಸಿದ್ದಾರೆ.

## ೬. ಮಧುವಿದ್ಯೆ

"ಸಕಲ ಲೋಕಗಳನ್ನೂ ನೋಡುವವನೂ, ಕಣ್ಣಿಗೆ ಕಾಣದ ವಿಷ ವಿಶೇಷಗಳನ್ನೂ, ವಿಷಧರಗಳಾದ ದುಷ್ಟ ಜಂತುಗಳನ್ನೂ ಮತ್ತು ನಮಗೆ ಗೊತ್ತಿಲ್ಲದ ಅಜ್ಞಾನವೆಂಬ ಅಂಧಕಾರವನ್ನೂ ನಾಶಮಾಡತಕ್ಕವನೂ ಮತ್ತು ಇವುಗಳಿಗೆ(ತೀವ್ರರೂಪವಾದ ವೇದನೆಗಳಿಗೆ) ಉತ್ಪತ್ತಿ ಸ್ಥಾನಗಳಾದ ರಾಕ್ಷಸೀ ಶಕ್ತಿಗಳನ್ನೂ ನಿವಾರಿಸುವ ಸೂರ್ಯದೇವನು, ಇದೋ ಪೂರ್ವ ದಿಕ್ಕಿನಲ್ಲಿ ಉದಯಿಸುತ್ತಿದ್ದಾನೆ."

"ಈ ಸೂರ್ಯದೇವನು ಅಭ್ಯುದಯವನ್ನು ಬಯಸುವ ಪ್ರಾಣಿಗಳ ಮೇಲಿನ ಕೃಪೆಯಿಂದ ಅನ್ನಗಳ ಉಪಕಾರಕ್ಕಾಗಿ, ನೀರು ಮೊದಲಾದ ದ್ರವ ವಸ್ತುಗಳಲ್ಲಿರುವ ವಿಷವನ್ನೂ ಹೀರಿ ಅಪಹರಿಸಿ, ಸೂಕ್ಷ್ಮವಾದ, ಸಕಲ ವಿಷ ಜಂತುಗಳನ್ನೂ ಸಂಪೂರ್ಣವಾಗಿ ನಾಶಪಡಿಸುತ್ತಾ, ಸಕಲ ಲೋಕದ ಹಿತವನ್ನೇ ಗಮನಿಸುತ್ತ, ಇದೋ ಉದಯಿಸುತ್ತಿದ್ದಾನೆ."

"ಇಂತಹ ವಿಷಹರನಾದ ಸೂರ್ಯನಲ್ಲಿ (ವಿಷದಿಂದ ಆವರಿಸಲ್ಪಟ್ಟ ಅಗಸ್ತ್ಯನಾದ ನಾನು) ನನ್ನೊಳಗಿನ ಅಂತರ ಶತ್ರುರೂಪವಾದ ವಿಷವನ್ನು ಸಂಯೋಜಿಸುತ್ತೇನೆ. ಇದರಿಂದ ಸೂರ್ಯನಿಗೆ ಮೃತಿರೂಪವಾದ ಅಪಾಯ ವಿಲ್ಲ. ನಮಗೂ, ಆವನನುಗ್ರಹದಿಂದ ಮರಣ ಭೀತಿಯಿಲ್ಲ. ಹೇಗೆಂದರೆ, ಸುರೆಯನ್ನು ತಯಾರಿಸತಕ್ಕವನ ಮನೆಯಲ್ಲಿ ಸುರೆಯಿಂದ ತುಂಬಿದ ಚೀಲ ವನ್ನು ಇಟ್ಟರೆ. ಇದರಿಂದ ಕೇವಲ ಸುರೆಯ ವ್ಯಾಪಾರದಲ್ಲಿ ತೊಡಗಿದ, ಆ ಸುರಾವಂತನಿಗೆ (ತಾನು ಸುರಾಪಾನಮಾಡದಿರುವುದರಿಂದ) ಏನೂ ಹಾನಿ ಯಿಲ್ಲ. ಹಾಗೆಯೇ ಸೂರ್ಯನಾದರೋ ಉನ್ನತವಾದ ಕಿರಣರೂಪಗಳ ಕುದುರೆಗಳ ಮೇಲೆ ಆರೂಢನಾಗಿದ್ದು ಅವನಿಗೆ ಈ ವಿಷಸಂಪರ್ಕದಿಂದ ಬಾಧೆ ಇಲ್ಲದಿರುವುದು ಮಾತ್ರವಲ್ಲದೆ. ನನ್ನಲ್ಲಿಯೂ ವಿಷಪ್ರಸಾರವು ನಿಂತಿತು; ಎಲೈ ವಿಷವೇ, ಈ ರೀತಿಯಾಗಿ, ಮಧುವಿದ್ಯೆಯು ವಿಷವಾದ

ನಿನ್ನನ್ನೂ ಅಮೃತನನ್ನಾಗಿ ಮಾಡಿಬಿಟ್ಟಿತು." (ಋ. ಸಂ, I–191–8, 9, 10).

ಸೂರ್ಯೇ ವಿಷಮಾಸಜಾಮಿ ದೃತಿಂ ಸುರಾವತೋ ಗೃಹೇ ।
ಸೋ ಚಿನ್ನು ನ ಮರಾತಿ ನೋ ವಯಂ ಮರಾಮಾರೇ
ಅಸ್ಯಯೋಜನಂ

ಹರಿಷ್ಠಾ ಮಧು ತ್ವಾ ಮಧುಲಾ ಚಕಾರ.

ಈ ಮುಂದಿನ ಇನ್ನೂ ಮೂರು ಮಂತ್ರಗಳ ಕೊನೆಯಲ್ಲಿಯೂ "ಮಧು ತ್ವಾ ಮಧುಲಾ ಚಕಾರ" ಎಂಬ ಮರ್ಮೋಕ್ತಿಯೇ ಪುನರುಕ್ತ ವಾಗಿದೆ. ಇದರಲ್ಲಿ ಒಂದು ಮುಖ್ಯ ರಹಸ್ಯತತ್ವ ಅಡಗಿರುವಂತಿದೆ.

## ೭. ಇದರ ಮರ್ಮ

ವೇದಾಂತ ಶಾಸ್ತ್ರದಲ್ಲಿ ಇದೊಂದು ಮುಖ್ಯ ಪ್ರಶ್ನೆ ಏಳುತ್ತದೆ : ಮನುಷ್ಯರು ಮಾಡತಕ್ಕ ಪಾಪಗಳು, ಭಗವಂತನನ್ನು ಶರಣು ಹೋದ ಮಾತ್ರದಿಂದ ಹೋಗುತ್ತವೆ, ಎಂದು ಕೇಳುತ್ತೇವೆಯಷ್ಟೆ! ಹಾಗಾದರೆ ಪಾಪ ಕರ್ಮಗಳ ಪರಿಣಾಮವು ಮಂಗಮಾಯವಾಗಿ ಹೋಗುವುದೇ ? ಶರಣಾಗತ ನಾದವನಿಗೆ, ಪಾಪಫಲವು ಬಾಧಿಸದೆ ಹೋಗುವುದು ಎಂಬುದನ್ನು ಒಪ್ಪಿ ದರೂ, ಅದು ಮುಂದೆ ಎಲ್ಲಿ ಹೋಗುವುದು ? ಎಂದು ಕೇಳುವವರುಂಟು. ಮಾನವನ ಆತ್ಮಾರ್ಪ್ತೀಯ ಸಮರ್ಪಣೆಯೊಂದಿಗೆ ಅವನ ಪಾಪವೂ ಈಶ್ವರ ನನ್ನೇ ಹೋಗಿ ಸೇರುವುದು ಎಂದು ಇಟ್ಟುಕೊಂಡರೂ ಇದರಿಂದ ಈಶ್ವರನಿಗೆ ಏನು ಪ್ರಯೋಜನ ? ಎಂಬ ಪ್ರಶ್ನೆಯೂ ಅಥವಾ ಇದರಿಂದ ಅವನಿಗೆ ಬಾಧೆಯಾಗಲಾರದೇ ? ಎಂಬ ಸಂದೇಹವೂ ಏಳಬಹುದು. ಇದಕ್ಕೆ ಉತ್ತರ ರೂಪವಾಗಿ ಮೇಲಿನ ಮಂತ್ರ ಬಂದಿರುವಂತಿದೆ.

ತೆಂಗಿನ ಗಿಡದಲ್ಲಿ ನಿರಂತರವಾಗಿ ಪ್ರವಹಿಸುವ ರಸ ವಿಶೇಷವು ಅದರ ಕಾಯಿಯ ಗರ್ಭವನ್ನು ಸೇರಿ, ಅಲ್ಲಿರಬೇಕಾದಷ್ಟು ಕಾಲ ಇದ್ದರೆ ಮಾತ್ರ ಅಮೃತವಾಗಬಲ್ಲುದು. ಹಾಗಲ್ಲದೆ, ಇದೇ ರಸವನ್ನು ಕಾಯಿಯವರೆಗೆ ಹೋಗಗೊಡದೆ, ಅರ್ಧದಲ್ಲೇ ಅಡ ಗಟ್ಟಿ, ಅಪೂರ್ಣಾವಸ್ಥೆಯಲ್ಲಿಯೇ

ಹೊರತೆಗೆದರೆ, ಅದೇ ಮನುಷ್ಯನನ್ನು ಕೊಲ್ಲತಕ್ಕ ಸುರಾರೂಪವಾದ ವಿಷವೂ ಆಗಬಲ್ಲುದು. ತೆಂಗಿನ ಗಿಡವು ಹೀಗೆ, ಅಧಿಕಾರಿ ಭೇದದಿಂದ ಅಮೃತ, ವಿಷಗಳೆರಡನ್ನೂ ನೀಡಬಲ್ಲ ಕಲ್ಪವೃಕ್ಷ. ಭಗವಂತನೂ ಹೀಗೆಯೇ ಭಕ್ತರ ಕೋರಿಕೆಯಂತೆ ಅಮೃತರೂಪವಾದ ಪರಮಪದಪ್ರಾಪ್ತಿಯನ್ನೂ ಅಥವಾ ವಿಷರೂಪವಾದ ನರಕ ಸಂಸಾರ ಪ್ರಾಪ್ತಿಯನ್ನೂ ಉಂಟು ಮಾಡಬಲ್ಲನು. ಇದು ಅವನ ವೈಷಮ್ಯದೋಷವಲ್ಲ ಮದ್ಯವನ್ನು ತಯಾರಿಸುವವನು ತನಗಲ್ಲದೆ ಅದನ್ನು ಬಯಸುವವನಿಗೆ ಮಾತ್ರ ಅದನ್ನು ನೀಡುವ ವಿಶೇಷೋಪಮಾನವನ್ನು ಮಂತ್ರದಲ್ಲಿ ಹೇಳಿರುವುದು ಇದಕ್ಕಾಗಿಯೇ. ಇಂತಹ ತಯಾರಕನ ಮನೆಯಲ್ಲಿ ಬಹಳಷ್ಟು ಮದ್ಯವಿದ್ದರೂ, ಅದರಿಂದ ಅವನಿಗೆ ಯಾವ ಬಾಧೆಯೂ ಇಲ್ಲ. (ಮಹಾಭಾರತದ ಧರ್ಮವ್ಯಾಧನ ಕಥೆಯಲ್ಲಿ ಸೂಚಿತವಾದ ಮಾಂಸ ವಿಕ್ರಯ ವೃತ್ತಿಯಂತೆ.) ಇದು ನೋಡುವುದಕ್ಕೆ ನೀಚೋಪಮೆಯಂತೆ ಕಾಣಬಹುದು. ಆದರೆ, ಇದಕ್ಕಿಂತ ವಸ್ತುತಃ ಹೆಚ್ಚು ಮಾರ್ಮಿಕವೂ ಪ್ರಸಂಗೋಚಿತವೂ ಆದ ಉಪಮೆ ಪ್ರಾಯಶಃ ಸಾಧ್ಯವಿಲ್ಲ. ಪಾಪವೆಂಬ ವಿಷಕ್ಕೆ ಮದ್ಯವೇ ಸರಿಯಾದ ಉಪಮಾನ. ಗಿಡದರಸವು. ಪರಿಪೂರ್ಣಾವಸ್ಥೆಯಲ್ಲಿ ಅಮೃತದ ರುಚಿಯನ್ನೂ ಮತ್ತು ಅಪರಿಪೂರ್ಣಾವಸ್ಥೆಯಲ್ಲಿ ವಿಷದ ರೂಪಾಂತರಗಳನ್ನೂ ಹೊಂದುವಂತೆಯೇ ಪೂರ್ಣಜ್ಞಾನಪ್ರೇರಿತವಾದ ಕರ್ಮಗಳೇ ಅಮೃತತ್ವಸಾಧಕಗಳು. ಹಾಗೆಯೇ ಅಪರಿಪೂರ್ಣ ಜ್ಞಾನವೂ, ಕರ್ಮವೂ, ಕಹಿಯಾದ ಒಗರಾದ ಅಥವಾ ಹುಳಿಯಾದ, ಅನುಭವಗಳನ್ನೇ ನೀಡಬಲ್ಲವು. ಸಕಲ ಕರ್ಮಗಳ ಫಲಪ್ರದಾತೃವೂ ಭಗವಂತನೇ ಆದುದರಿಂದ ಒಂದು ಅರ್ಥದಲ್ಲಿ ಈ ಪಾಪ ಫಲಗಳನ್ನು "ಅನುಗ್ರಹಿಸು"ವವನೂ ಭಗವಂತನೇ. ಹೀಗೆ ಇಲ್ಲಿ ಇವನನ್ನು 'ಮದ್ಯದ ತಯಾರಕ'ನಿಗೆ ಹೋಲಿಸಲಾಗಿದೆ. (ತಾನೇ ಕುಡಿಯುವನೆಂಬ ಅರ್ಥದಲ್ಲಿ ಅಲ್ಲ.) ಹೀಗೆ ಈ ಅಗಸ್ತ್ಯ ಸೂಕ್ತದ ಮೂಲಕ, ಪಾಪ ಫಲವನ್ನೂ ಭಗವಂತನು ಪರಿವರ್ತಿಸಬಲ್ಲನೆಂಬುದನ್ನು ಗ್ರಹಿಸಬೇಕು. ಅಪೂರ್ಣತೆಯನ್ನು ಹೋಗಲಾಡಿಸಿ, ಪೂರ್ಣತೆಯನ್ನು ಅನುಗ್ರಹಿಸುವುದು ಭಗವಂತನ ವಿಶಿಷ್ಟ ಕಾರ್ಯ. ಗಿಡದ ಮೇಲೆ ಇನ್ನೂ ಕಾಯಾಗಿರುವ ಪದಾರ್ಥದ ಒಗರು ರುಚಿಯನ್ನು ಸಕಾಲದಲ್ಲಿ ಸಿಹಿಯಾಗಿ ಪರಿವರ್ತಿಸು

ವುದು ಸೂರ್ಯನ ಬಿಸಿಲಿನ ಪ್ರಭಾವವಲ್ಲವೇ? ಹೀಗೆಯೇ ಕೆಟ್ಟ ಪದಾರ್ಥಗಳನ್ನೂ ಒಳ್ಳೆಯವುಗಳನ್ನಾಗಿಯೂ, ಲೋಕಕ್ಕೆ ಕಂಟಕ ವಸ್ತುಗಳನ್ನು ಉಪಕಾರಕಗಳನ್ನಾಗಿಯೂ, ಕುರೂಪಿಗಳನ್ನು ಸುರೂಪಿಗಳನ್ನಾಗಿಸುವುದೂ ಭಗವಂತನ ವಿಚಿತ್ರಕ್ರಿಯೆ. ಹೀಗೆ ಅಸತ್ತಿನಿಂದ ಸತ್ತನ್ನೂ, ಮೃತ್ಯುವಿನಿಂದ ಅಮೃತವನ್ನೂ, ತಮಸ್ಸಿನಿಂದ ಜ್ಯೋತಿಯನ್ನೂ ಉಂಟುಮಾಡುವುದು ಜಗತ್ಸೃಷ್ಟಿಪ್ರವಾಹದ ಅತ್ಯಂತ ಮಾರ್ಮಿಕವಾದ ನಿಗೂಢ ಕ್ರಿಯೆ. ಇದು ಭಗವಂತನೊಬ್ಬನಿಗೇ ವಿಶಿಷ್ಟ ವ್ಯಾಪಾರ. ಇದನ್ನು ಅಗಸ್ತ್ಯರು ಭೇದಿಸಿ ಈ ಸುಂದರವಾದ ಸೂಕ್ತದಲ್ಲಿ ಅನುಗ್ರಹಿಸಿದ್ದಾರೆ. ಇಲ್ಲಿ ಮಂತ್ರದ ಕೊನೆಯಲ್ಲಿ ಉಕ್ತವಾಗಿರುವ ಶಬ್ದಗಳಲ್ಲಿ ಪ್ರಸಿದ್ಧ ಮಧುವಿದ್ಯೆಯು ಸೂಚಿಸಲ್ಪಟ್ಟಿದೆ. "ಯದೇತತ್ ಆದಿತ್ಯಸ್ಯ ವಿಷಯೋಜನಂ, ತೇನ ಚ ಅಮೃತೀಕರಣಂ ಯದಸ್ತಿ, ಏಷಾ ಮಧುವಿದ್ಯಾ" ಎಂದು ಶ್ರೀಸಾಯಣಾಚಾರ್ಯರು ವಿವರಿಸಿದ್ದಾರೆ.

## ೮. ಛಾಂದೋಗ್ಯೋಪನಿಷತ್ತಿನಲ್ಲಿ 'ಮಧು'ವಿದ್ಯೆ

ವೇದ ಸಂಹಿತೆಗಳಿಂದ ಹಿಡಿದು ಉಪನಿಷತ್ತುಗಳ ವರೆಗೆ, ವೇದವಾಙ್ಮಯವೆಲ್ಲ ಒಂದೇ ಅರ್ಥವನ್ನು ಹೊಂದಿದೆ, ಎಂಬ ಪ್ರಾಚೀನ ಸಿದ್ಧಾಂತಕ್ಕೆ ಇಲ್ಲಿ ಒಂದು ನಿದರ್ಶನವನ್ನು ತೋರಿಸಬಹುದು.

ಮೇಲಿನ ಋಕ್‌ಸೂಕ್ತಗಳು ರತ್ನಗಳನ್ನು ಅಡಗಿಸಿಟ್ಟುಕೊಂಡ ಪೆಟ್ಟಿಗೆಯಂತಿದ್ದರೆ. ಛಾಂದೋಗ್ಯ ಉಪನಿಷತ್ತಿನ ೩ನೇ ಅಧ್ಯಾಯದ ಮೊದಲ ೧೧ ಖಂಡಗಳು ಇದರ ಬೀಗದ ಕೈಯಂತಿವೆ. ಈ ಬೀಗದ ಕೈ ಇಲ್ಲದವನಿಗೆ ಮೇಲಿನ ಮಂತ್ರಗಳು ಏನು ತಪ್ಪು ಅರ್ಥವನ್ನು ಕೊಡಬಲ್ಲವೆಂಬುದನ್ನು ಹೀಗೆ ಪರಿಹಾರಾರ್ಥವಾಗಿ ಸೂಚಿಸಬಹುದು. ಇದು "ಐತಿಹಾಸಿಕ ಸಂಶೋಧಕರ" ಸಿದ್ಧಾಂತವೂ ಆಗಬಹುದು, ಈ ಮಂತ್ರಗಳಲ್ಲಿ ಸುರೆಯ ಪ್ರಸ್ತಾಪ ಬಂದಿರುವುದರಿಂದ, ವೇದಕಾಲದ ಬ್ರಾಹ್ಮಣರಿಗೆ ಮದ್ಯದ ಬಳಕೆಯೂ ತಯಾರು ಮಾಡುವ ವಿಧಾನವೂ, ಗೊತ್ತಿದ್ದಿತೆಂದೂ. ಅದನ್ನು ಉಪಯೋಗದ ಹದಕ್ಕೆ ತರಲು ಚರ್ಮದ ಚೀಲಗಳಲ್ಲಿ ತುಂಬಿ ಸೂರ್ಯನ ಬಿಸಿಲಿನಲ್ಲಿ ಇಡು

ತ್ತಿದ್ದರೆಂದೂ, ಇದರಿಂದ ತಮ್ಮ ಮಟ್ಟಿಗೆ ಇದು ಪಾನಾರ್ಹವಸ್ತುವಾಯಿತೆಂದೂ, ಇತರರನ್ನು ಮೋಸದಿಂದಲೂ ಬಾಯಿಬಡಿಯುವುದಕ್ಕಾಗಿ ಕೆಲವು ಮಂತ್ರೋಚ್ಚಾರಣೆಯ ನಾಟಕವನ್ನು ಅವರು ಮಾಡುತ್ತಿದ್ದರೆಂದೂ ಅಂತಹ ಒಂದು ನಾಟಕ ಭಾಗವೇ ಇಲ್ಲಿ ಹೇಳಲ್ಪಟ್ಟಿದೆಯೆಂದೂ ಹೇಳಬಹುದು. **ಇವರಿಗೆ ವೇದದಿಂದ ಆಗತಕ್ಕ ಪ್ರಯೋಜನವೇನು ?**

ಇಲ್ಲಿ ಚರ್ಮದಿಂದ ಮಾಡಿದ ಚೀಲ ಎಂಬ ಅರ್ಥದಲ್ಲಿ "ದೃತಿಂ" ಎಂಬ ಶಬ್ದ ಪ್ರಯೋಗವಿದೆ. ಇಲ್ಲಿ ಅಗಸ್ತ್ಯರು ನಿರ್ದೇಶಿಸಿ ಹೇಳುತ್ತಿರುವ ಈ ವಿಷದ ಚೀಲ ಯಾವುದು? ಸಾಯಣರು "ವಿಷಾಪ್ಲುತೋ ಅಗಸ್ತ್ಯೋಽಹಂ" ಎಂದು ಭಾಷ್ಯದಲ್ಲಿ ವಿವರಿಸಿರುವಂತೆ ಅಗಸ್ತ್ಯರು ತಮ್ಮ ಶರೀರವನ್ನೇ **ಇಂತಹ ಒಂದು ಚೀಲಕ್ಕೆ ಹೋಲಿಸಿಕೊಂಡಿದ್ದಾರೆ.** ಅದರಲ್ಲಿ ತುಂಬಿರುವ ವಿಷವೆಂದರೆ ಜ್ಞಾತಾಜ್ಞಾತರೂಪವಾದ ಪಾಪಗಳು. ಅಲ್ಲದೇ, ಇದೇ ಮಂತ್ರದಲ್ಲಿ "**ವಯಂ**" ಎಂದೂ ಬಹುವಚನದಲ್ಲಿ "ತಮ್ಮಂತಹವರಿಗಾಗಲೀ ಸೂರ್ಯನಿಗಾಗಲೀ ಮರಣ ಭೀತಿಯಿಲ್ಲ" ಎಂದೂ ಫಲಶ್ರುತಿಯನ್ನು ಹೇಳಿರುವುದರಿಂದ, ಇಲ್ಲಿ ಅಗಸ್ತ್ಯ ದೇಹವಲ್ಲದೆ ಸಕಲ ಮಾನವರ ದೇಹಗಳನ್ನೂ, ಪರ್ಯಾಯವಾಗಿ, ಪಾಪ ತುಂಬಿದ ಚೀಲಗಳೆಂದೇ ಕರೆದಂತಾಯಿತು. ಆದುದರಿಂದ ಇಲ್ಲಿ ಮದ್ಯದ ತಯಾರಿಕೆಯ 'ವಿಧಾನವನ್ನು' ಗಮನಿಸುವ ಸಂಶೋಧಕನ ದೃಷ್ಟಿ ಸಂಪೂರ್ಣವಾಗಿ ತಪ್ಪು ದಾರಿಯದು. ಈ ಸೂಕ್ತದ ಮೇಲೆ ಭಾಷಾಂತರ ವಿವರಣೆಗಳನ್ನು ಬರೆದಿರುವ ಗ್ರಿಫಿತ್ ಮಹಾಶಯನು ಈ ಪ್ರಸಂಗದಲ್ಲಿ ಸಾಯಣಾಚಾರ್ಯರ ವಿವರಣೆಯನ್ನು ಒಪ್ಪದೆ ತಾನೂ ಅಲ್ಲಿ ಬದಲಾಗಿ ಮತ್ತೇನನ್ನೂ ಬರೆಯಲಾಗದೆ ಹೀಗೆ ಬರೆದುಕೊಂಡಿದ್ದಾನೆ.

''I generally follow Sayana. But his explanations are not always satisfactory, and several passages must be left in their original obscurity.'' (**the Hymns of The Rigveda** Vol. I. P. 255)

ಸಾಯಣರು ಇಲ್ಲಿ ಒಂದು ಮಂತ್ರ ತಂತ್ರ ಶಾಸ್ತ್ರ ಪ್ರಕ್ರಿಯೆಯನ್ನೂ ಸೂಚಿಸಿದ್ದಾರೆ; ಸೂರ್ಯಮಂಡಲದ ಆಕೃತಿಯಲ್ಲಿ ಚಿತ್ರವನ್ನು ಬರೆದು,

ವಿಷದಿಂದ ಬಳಲುತ್ತಿರುವ ಮನುಷ್ಯನ ಶರೀರದಿಂದ ರಕ್ತವನ್ನು ಮಾಂತ್ರಿಕನು ಅನಾಮಿಕೆಯೆಂಬ ಬೆರಳಿನಿಂದ ಹೊರತೆಗೆದು ಆ ಚಿತ್ರದಲ್ಲಿ ಸಂಯೋಜಿಸಿ ಈ ಮಂತ್ರವನ್ನು ಪಠಿಸಿದರೆ, ವಿಷ ಪರಿಹಾರವಾಗುತ್ತದೆ ಎಂಬುದು ವಿಷವಿದ್ಯೆಯಲ್ಲಿ ಹೇಳಲ್ಪಟ್ಟಿದೆ ಎಂದು ಅವರ ಅಭಿಪ್ರಾಯ. ಅನೇಕ ವೇದ ಮಂತ್ರಗಳು ತಾಂತ್ರಿಕ ಶಕ್ತಿಯನ್ನು ಹೊಂದಿವೆಯೆಂಬುದೂ ಸುಪ್ರಸಿದ್ಧ. ಆದರೆ ಕೇವಲ ತಂತ್ರ ಪ್ರಯೋಗವು ಮಟ್ಟಿಗೆ ಎಲ್ಲ ಮಂತ್ರಗಳ ಪರಮೋದ್ದೇಶವಲ್ಲ. ಅಧ್ಯಾತ್ಮ ತತ್ವಗಳು ಅವಕ್ಕಿಂತ ಮುಖ್ಯವಾದವು. ಇಲ್ಲಿ ಅಗಸ್ತ್ಯರು ತಾಂತ್ರಿಕರೇ ಅಥವಾ ಆಧ್ಯಾತ್ಮಿಗಳೇ ಎಂಬ ಪ್ರಶ್ನೆ ಏಳುತ್ತದೆ. ಭಗವದ್ಗೀತೆಯಲ್ಲಿಯೂ ವಿಶ್ವರೂಪಾಧ್ಯಾಯದಲ್ಲಿ "ರಕ್ಷಾಂಸಿ ಭೀತಾನಿ ದಿಶೋ ದ್ರವಂತಿ" ಎಂಬ ವಾಕ್ಯದಲ್ಲಿ ಮಂತ್ರಶಕ್ತಿಯಿದೆಯೆಂದು ಭಾಷ್ಯಕಾರರು ಬರೆದಿದ್ದಾರೆ. ಆದರೆ ಇದರಿಂದ ಗೀತಾಚಾರ್ಯನು ಕೇವಲ ಮಾಂತ್ರಿಕನೆಂದು ಸಿದ್ಧವಾದಂತಾಯಿತೇ ? ಅವನ ಅಧ್ಯಾತ್ಮ ಸಂದೇಶಕ್ಕೆ ಈ ವಾಕ್ಯದ ಮಂತ್ರಶಕ್ತಿಯು ಹೇಗೆ ಪ್ರಾಸಂಗಿಕವೋ ಮತ್ತು ಪ್ರಧಾನವಲ್ಲವೋ ಹಾಗೆಯೇ ಇಲ್ಲೂ ಮಹ್ಷಿತರ ಕಡೆಗಳಲ್ಲೂ ತಿಳಿಯಬೇಕು. ಈ ರೀತಿಯಾಗಿ ಮಧುವಿದ್ಯಾಸ್ವರೂಪವನ್ನು ಗ್ರಹಿಸದ ಮೂಢನು ಏನನ್ನು ಬರೆದರೂ, ಅದು ವೇದಕ್ಕೂ, ವೇದಾರ್ಥಕ್ಕೂ ಬಾಹ್ಯವೇ ಆಗುವುದು.

"ಸೂರ್ಯದೇವನು ವಿಷವನ್ನೂ ಅಮೃತವನ್ನಾಗಿ ಮಾಡಬಲ್ಲವ"ನೆಂದು ಹಿಂದಿನ ಋಙ್ಮಂತ್ರದಲ್ಲಿ ಹೇಳಿದೆಯಷ್ಟೆ; ಈಗ ಈ ಆದಿತ್ಯನನ್ನೇ ದಿವ್ಯವಾದ ಮಧುವನ್ನಾಗಿ, ಶ್ರುತಿಯು 'ಮಧು ವಿದ್ಯೆಯಲ್ಲಿ' ವರ್ಣಿಸಿರುವುದನ್ನು ನೋಡೋಣ.

"ಈ ಆದಿತ್ಯನು ದೇವತೆಗಳಿಗೆ ಸಂತೋಷಕಾರಣನಾದ ಮಧುವಾಗಿದ್ದಾನೆ. (ಅಂದರೆ ಅವನನ್ನು 'ಮಧು' ಎಂಬ ಭಾವನೆಯಿಂದ ನೋಡತಕ್ಕದ್ದು.) ಈ 'ಜೇನು' ದೇವಲೋಕವೆಂಬ ಅಡ್ಡ ತೊಲೆಯನ್ನು ಆಶ್ರಯಿಸಿದೆ. ಅಂತರಿಕ್ಷವೆಲ್ಲ ಜೇನುಗೂಡಾಗಿದೆ. ಮತ್ತು ಅವನ ರಶ್ಮಿಗಳಲ್ಲಿ ಅಡಗಿಕೊಂಡಿರುವ ನೀರಿನ ಕಣಗಳು ದುಂಬಿಗಳಿಗೆ ಬೀಜಭೂತಳಾದ ಮೊಟ್ಟೆಗಳು. ಪೂರ್ವದಿಕ್ಕಿನ ರಶ್ಮಿಗಳೇ ಮಧುನಾಡಿಗಳೆಂಬ ರಂಧ್ರಗಳು. ಋಗ್ವೇದದ ಮಂತ್ರಗಳೇ ಜೇನುದುಂಬಿಗಳು. ಋಗ್ವೇದವಿಹಿತವಾದ ಕರ್ಮಗಳೇ ಪುಷ್ಪ

ಗಳು. ಈ ಕರ್ಮದಲ್ಲಿ ಪ್ರಯೋಗವಾಗುವ ಸೋಮ, ಆಜ್ಯ, ಇತ್ಯಾದಿ ದ್ರವ್ಯವಿಶೇಷಗಳೇ ನೀರೆಂಬ ಅಮೃತ. ಹೀಗೆ ಋಕ್ಕುಗಳು ತಪಸ್ಸಿನಿಂದ ಕರ್ಮವನ್ನು ಅನುಷ್ಠಾನ ಮಾಡಿದಾಗ, ತೇಜಸ್ಸು, ಇಂದ್ರಿಯ, ರಸ ಅನ್ನಾದ್ಯ ಇವು ಉಂಟಾದವು. ಹೀಗೆ ಲೋಕದಲ್ಲಿ ಉತ್ಪತ್ತಿಯಾದ ವೈದಿಕ ಕರ್ಮ ಫಲರೂಪವಾದ ರಸವೆಲ್ಲವೂ ಸೂರ್ಯನನ್ನೇ ಆಶ್ರಯಿಸಿದ್ದು, ಮತ್ತೆ ಅವನ ಕಡೆಗೆ ಹೊರಟಿತು. ಸೂರ್ಯನಲ್ಲಿ ಕೆಂಪು ಬಣ್ಣದ ಅಂಶ ಯಾವುದಿದೆಯೋ ಅದೇ ಇದು. ಹೀಗೆಯೇ ಸೂರ್ಯನ ದಕ್ಷಿಣ ದಿಕ್ಕಿನ ರಶ್ಮಿಗಳೇ ಯಜುರ್ವೇದವೆಂಬ ಮಧುನಾಡಿಗಳೆಂದೂ, ಇದರಿಂದ ಉಂಟಾದ ರಸವೇ ಸೂರ್ಯನಲ್ಲಿರುವ ಬಿಳಿಯ ಅಂಶವೆಂದೂ, ಸೂರ್ಯನ ಪಶ್ಚಿಮ ರಶ್ಮಿಗಳೇ ಸಾಮವೇದವೆಂಬ ಮಧುನಾಡಿಗಳೆಂದೂ, ಇವುಗಳಲ್ಲಿ ತುಂಬಿದ ರಸವು ಕಪ್ಪು ಬಣ್ಣದ್ದೆಂದೂ, ಹಾಗೆಯೇ ಸೂರ್ಯನ ಉತ್ತರ ದಿಕ್ಕಿನ ರಶ್ಮಿಗಳೇ ಅಥರ್ವ ವೇದವೆಂಬ ಮಧುನಾಡಿಗಳೆಂದೂ, ಇದರಲ್ಲಿ ಶೇಖರಿಸಲ್ಪಟ್ಟ ರಸವು ಅತ್ಯಂತ ಕಪ್ಪು ಬಣ್ಣದ್ದೆಂದು ಆದಿತ್ಯನ ಊರ್ಧ್ವಭಾಗದ ರಶ್ಮಿಗಳೇ ಉಪನಿಷತ್ತೆಂಬ ಮಧುನಾಡಿಗಳೆಂದೂ, ಇವು ಪ್ರಣವವನ್ನು ಕುರಿತು ತಪಸ್ಸು ಮಾಡಿದಾಗ ಉಂಟಾದ ರಸವೇ ಆದಿತ್ಯನ ಮಧ್ಯದಲ್ಲಿ ಕ್ಷೋಭೆಗೊಳಿಸುವಂತೆ ಕಾಣುವ ದಿವ್ಯ ತೇಜಸ್ಸೆಂದೂ, ಹೀಗೆ ಚತುರ್ವೇದಗಳ ದಿವ್ಯಸಾರರೂಪವೇ ಅನುಭವದ ಸಕಲ ರಸಗಳಿಗೂ, ರಸವಾಗಿ ಆದಿತ್ಯನಲ್ಲಿ ಶೇಖರಿಸಲ್ಪಟ್ಟಿದೆ." ಎಂದು ಉಪನಿಷತ್ತಿನಲ್ಲಿ ವರ್ಣಿಸಲ್ಪಟ್ಟಿದೆ. (ಛಾಂದೋಗ್ಯ III-1-5)

"ತೇ ವಾ ಏತೇ ರಸಾನಾಂ ರಸಾ ವೇದಾ ಹಿ ರಸಾಃ...."

ಮುಂದೆ ಇಂತಹ ದಿವ್ಯವಾದ ಮಧುವನ್ನು ದೇವತೆಗಳು ಉಪಭೋಗ ಮಾಡುವ ಕ್ರಮವನ್ನು ವರ್ಣಿಸಲಾಗಿದೆ. "ದೇವತೆಗಳು ತಿನ್ನುವುದೂ ಇಲ್ಲ; ಕುಡಿಯುವುದೂ ಇಲ್ಲ. ಈ ಅಮೃತವನ್ನು ನೋಡಿದ ಮಾತ್ರದಿಂದಲೇ ತೃಪ್ತರಾಗುತ್ತಾರೆ"—"ನ ವೈ ದೇವಾಃ ಅಶ್ನಂತಿ, ನ ಪಿಬಂತಿ, ಏತದೇವ ಅಮೃತಂ ದೃಷ್ಟ್ವಾ ತೃಪ್ಯಂತಿ" ಎಂದು ಹೇಳಿದೆ. ಅಲ್ಲದೆ ಅವರೂ ಈ ಮಧುರೂಪವನ್ನೇ ಪ್ರವೇಶಿಸಿ, ಇದರ ಸಾರೂಪ್ಯವನ್ನೇ ಹೊಂದುತ್ತಾರೆ ಎಂದೂ ವರ್ಣಿಸಿದೆ. ಹೀಗೆ ವಸು ರುದ್ರಾದಿತ್ಯ ಮರುತ

**ಸಾಧ್ಯರೂಪಿಗಳಾದ ಸಕಲ ದೇವತೆಗಳೂ ಸೂರ್ಯನೆಂಬ ಮಧುವನ್ನೇ ಆಶ್ರಯಿಸಿ, ಅಮೃತರಾಗಿದ್ದಾರೆ, ಎಂದು ಉಪದೇಶ.** ಈ ತತ್ವವನ್ನು ಸಾಕ್ಷಾತ್ಕಾರ ಮಾಡಿಕೊಂಡ ಬ್ರಹ್ಮನಿಷ್ಠನು ಸಕಲ ದೇವತೆಗಳ ಆಧಿಪತ್ಯವನ್ನೂ ಸ್ವಾರಾಜ್ಯವನ್ನೂ ಪಡೆದು ಮತ್ತೆ ಮುಂದೆ ನಡೆದು ಎಲ್ಲಿ ಸೂರ್ಯನು ಉದಯಿಸುವುದೂ ಇಲ್ಲವೋ, ಅಸ್ತಮಿಸುವುದೂ ಇಲ್ಲವೋ ಅಲ್ಲಿ, ಅಂತಹ ಆದಿತ್ಯನಿಗೂ ಅಂತರಾತ್ಮನಾದ ಪರಂಜ್ಯೋತಿ ಸ್ವರೂಪನಾದ ಪರಮಾತ್ಮನನ್ನು ಹೊಂದಿ ಶಾಶ್ವತವಾಗಿ ನಿಲ್ಲುತ್ತಾನೆ, ಎಂದು ಈ ವಿಷಯದಲ್ಲಿ ಶ್ರುತಿಯೇ ಪ್ರಾಚೀನವಾದ ಒಂದು ವಾಕ್ಯವನ್ನು ಪ್ರಮಾಣವಾಗಿ ಉದಹರಿಸುತ್ತದೆ. "ಎಲೈ ದೇವತೆಗಳೇ, ಬ್ರಹ್ಮಲೋಕದಲ್ಲಿ ಉದಯಾಸ್ತಮಾನಗಳಿಂದ ಬರತಕ್ಕ ಆಯುಃ ಪರಿಮಿತಿ ಎಂಬುದಿಲ್ಲ. ಆದಿತ್ಯಾಂತರ್ಯಾಮಿಯಾದ ಪರಮಾತ್ಮನಿಗೆ ಉದಯ ಅಸ್ತಮಾನಗಳೇ ಇಲ್ಲ. ಈ ಸತ್ಯ ವಚನದಿಂದ ನಾನು ಬ್ರಹ್ಮಸ್ವರೂಪಕ್ಕೆ ವಿರೋಧ ಬಾರದಂತೆ ನಡೆಯುವಂತಾಗಲಿ".

ಹೀಗೆ ಈ ಬ್ರಹ್ಮೋಪನಿಷತ್ತನ್ನು ತಿಳಿದವನಿಗೆ **ಸೂರ್ಯೋದಯ ಸೂರ್ಯಾಸ್ತಮಾನಗಳಿಲ್ಲದೆ ಸರ್ವದಾ ಹಗಲೇ ಆಗಿರುತ್ತದೆ,** ಎಂದು ಉಪನಿಷತ್ತು ಬೋಧಿಸುತ್ತಿದೆ. ಈ ಮಧುವಿದ್ಯೆಯು ಪ್ರಜಾಪತಿ, ಮನು, ಉದ್ದಾಲಕಾರುಣಿ, ಮುಂತಾದ ಗುರುಪರಂಪರೆಯಲ್ಲಿ ಲೋಕಕ್ಕೆ ಕೊಡುಗೆಯಾಗಿ ಬಂದಿವೆ.

ಹೀಗೆ ಲೋಕದಲ್ಲಿ ಮಾನವನ ಸಕಲ ಅನುಭವಗಳನ್ನೂ ಅವುಗಳಲ್ಲಿನ ವಿಷಾಂಶ ಸ್ವಭಾವದಿಂದ ಅಮೃತ ಸ್ವಭಾವದ ಕಡೆಗೆ ಪರಿವರ್ತಿಸುವವನೇ ಅಪ್ರಾಕೃತ ಜ್ಯೋತಿ ಸ್ವರೂಪನಾದ, ಆದಿತ್ಯಾಂತರ್ಮಿಯಾದ ಭಗವಂತನು. ಸಮಸ್ತ ವೇದಗಳೂ ಮಧುವಿನ ಸಂಗ್ರಹಗಳು ಇವುಗಳನ್ನು ಪಾನಮಾಡಿ ಅವುಗಳ ತತ್ವ ಸಾಕ್ಷಾತ್ಕಾರದಿಂದ ಮಾನವನು ದೇವತೆಯಾಗಬಲ್ಲನೆಂದೂ, ಇನ್ನೂ ಮೇಲಾಗಿ, ಸರ್ವದಾ 'ಹಗಲೇ' ಆಗಿರುವ ವೈಕುಂಠವೆಂಬ ಪರಮ ಪದವನ್ನೂ ಹೊಂದಿ, ಭಗವಂತನ ದಿವ್ಯತೇಜೋ ದರ್ಶನವನ್ನು **'ಸದಾ ಪಶ್ಯಂತಿ ಸೂರಯಃ'** ಎಂಬಂತೆ ಸದಾದರ್ಶನ ಮಾಡುತ್ತಿರಬಹುದೆಂದೂ ಮಧುವಿದ್ಯೆಯು ಉಪದೇಶಿಸುತ್ತಿದೆ.

# ೯. ಮಧುವಿದ್ಯೆಯ ವಿಶಾಲಾರ್ಥ

ಬಹು ವಿಶಾಲಾರ್ಥದಲ್ಲಿ ನೋಡಿದರೆ "ಮಧುವಿದ್ಯೆ"ಯು ಇಡೀ ಜೀವನದ ದಿವ್ಯ ಪ್ರವಾಹವನ್ನೇ ಸೂತ್ರಭೂತವಾಗಿ ಪ್ರತಿಬಿಂಬಿಸುತ್ತದೆ. ಜೀವನದಲ್ಲಿ ಸಕಲ ವಸ್ತುಗಳೂ ಕ್ಷಣಕ್ಷಣಕ್ಕೂ ಪರಿಣಾಮಕ್ಕೆ ಒಳಗಾಗಿ 'ವಿನಾಶ'ವನ್ನು ಹೊಂದುವುದು ಎಲ್ಲರಿಗೂ ಬರಿಗಣ್ಣಿಗೆ ಕಾಣುವುದಷ್ಟೆ! ಇಂದು ಗಟ್ಟಿಮುಟ್ಟಾದ ಶರೀರವುಳ್ಳವನಿಗೆ ಮುಂದೊಂದು ದಿನ ಶರೀರವು ಜೀರ್ಣವಾಗಿ, ವಿಕಾರವಾಗಿ, ಮರಣವು ಅನಿವಾರ್ಯ ಅಂತ್ಯವಾಗುತ್ತದೆ. ಸುಂದರ ವಸ್ತುಗಳಿಗೆ ವಿಕಾರವೂ, ಒಳ್ಳೆಯ ಸ್ಥಿತಿಯ ವಸ್ತುಗಳಿಗೆ ಕೆಟ್ಟ ಸ್ಥಿತಿಯೂ ಜೀವನ ಪ್ರವಾಹದಲ್ಲಿ ಸಿದ್ಧವಾದ ಮೇಲೆ, ಈ ಪ್ರವಾಹದ ಗುರಿಯು ಏನು ತಾನೇ ಆಗಿರುವುದು? ಎಂಬ ಪ್ರಶ್ನೆ ಏಳುತ್ತದೆ, ಮೂಢನು ಕಣ್ಣಿಗೆ ಕಂಡಷ್ಟನ್ನೇ ನಂಬಿ "ವಿನಾಶ"ವೇ ಸಕಲ ಜೀವನ ಪ್ರವಾಹದ ಗುರಿ ಎಂದು ತಿಳಿಯುತ್ತಾನೆ. ಇದರಲ್ಲಿ "ಸೃಷ್ಟಿ"ಯೂ ಸೇರಿದೆಯಲ್ಲವೆ? ಎಂದು ಕೇಳಿದರೆ, ಇಲ್ಲಿ ಇನ್ನೊಂದು ಪ್ರಶ್ನೆ ಏಳುತ್ತದೆ: "ಸೃಷ್ಟಿ"ಯಾಗುವುದು 'ವಿನಾಶ"ದ ಗುರಿಗಾಗಿದೆಯೋ, ಅಥವಾ "ವಿನಾಶ"ವು "ಸೃಷ್ಟಿ"ಯ ಮೊದಲ ಮೆಟ್ಟಲಾಗಿದೆಯೋ? ಇದು ಜೀವನದ ದಿಕ್ಕನ್ನೇ ಗುರುತು ಹಚ್ಚುವ ಗಾಢ ಪ್ರಶ್ನೆ.

ಮನುಸ್ಮೃತಿಯಲ್ಲಿ "ಜೀವೋ ಜೀವಸ್ಯ ಜೀವನಂ" ಎಂದೂ, "ಸರ್ವಂ ಪ್ರಾಣಸ್ಯ ಭೋಜನಂ" (V-28) ಎಂದೂ ಒಂದು ವಿಧವಾಗಿ ಜೀವನದ ಗತಿಯನ್ನು ವರ್ಣಿಸಲಾಗಿದೆಯಷ್ಟೆ! ಇದನ್ನೇ ಪಾಶ್ಚಾತ್ಯ ತತ್ವಶಾಸ್ತ್ರಜ್ಞನಾದ ವ್ಹೈಟ್‌ಹೆಡ್ ಎಂಬ ಮಹಾನುಭಾವನು: ''life is robbery'' ಎಂದು ವರ್ಣಿಸಿದ್ದಾನೆ. ಆದರೆ: ''It is at this point that with life morality becomes acute. The robber requires justification'' ಎಂದು ಕೂಡಲೇ ಹೇಳಲು ಅವನು ಮರೆಯಲಿಲ್ಲ. **(Process and Reality**, p. 160) ["ಜೀವನವು ಒಂದು ರೀತಿಯ ದರೋಡೆ. ಹಾಗೆಂದ ಮೇಲೆ ಜೀವನದಲ್ಲಿ ನೀತಿಯ ಪ್ರಶ್ನೆ ಜಟಿಲವಾಯಿತು. ದರೋಡೆಕಾರನಿಗೆ ಸಮರ್ಥನೆಯೊಂದು ಅವಶ್ಯಕ" ಎಂದು

ಭಾವ. ] ಉದಾಹರಣೆಗೆ ಗೋವು ಸಸ್ಯಗಳನ್ನೂ ನೀರನ್ನೂ 'ದರೋಡೆ' ಮಾಡಿ ಬದುಕಿತೆನ್ನೋಣ. ಅಂದರೆ ಆಹಾರದ ಉಪಯೋಗವೆಲ್ಲ ಒಂದು ರೀತಿಯ ಕಳವು, ದರೋಡೆ ಎಂದಂತಾಯಿತು. ಈಗ ಗೋವಿನ ಬದುಕಿನಲ್ಲಿ 'ಸಿದ್ಧ'ವಾದದ್ದೇನು ? ಗೋವಿನಿಂದ 'ಸಂಪಾದಿತ'ವಾದುದೇನು ? (Achievement), ? "ವನಸ್ಪತಿಯ ಕ್ಷಯ"ವಷ್ಟೇ ಎಂದು ಯಾರಾದರೂ ಹೇಳಿದರೆ, ಇವನನ್ನು ಮೂಢನೆನ್ನಬೇಕಾಗುತ್ತದೆ. ಏಕೆಂದರೆ ಗೋವು ತಾನು 'ತಿಂದ', 'ದರೋಡೆ' ಮಾಡಿದ ವಸ್ತುಗಳನ್ನು ದಿವ್ಯವಾದ ಕ್ಷೀರವನ್ನಾಗಿಸಿತು. ಹೀಗೆ, ಪ್ರಕೃತ ಉದಾಹರಣೆಯಲ್ಲಿ ಪದಾರ್ಥಕ್ಷಯ ವೆಂಬುದು ಒಂದು ಮುಖವಾದರೆ, ಇದರ ಮೂಲಕ ಇನ್ನೊಂದು ದಿವ್ಯ ವಸ್ತುವಿನ ಉತ್ಪತ್ತಿಯೂ ಆಗಿರುತ್ತದೆ ಎಂಬುದು ಇನ್ನೊಂದು ಮುಖ. ಆಕಳ ಮಟ್ಟಿಗೆ ಈ ಕ್ಷೀರ ನಿರುಪಯುಕ್ತವಾಗಿರಬಹುದು. ಆದರೆ ಪ್ರಕೃತಿ ಚಕ್ರದಲ್ಲಿ ಕೇವಲ ನಿರುಪಯುಕ್ತ ವಸ್ತುವೆಂಬುದಿಲ್ಲ. ಹೀಗೆ ಕಾಲದ ಗತಿ ಯನ್ನು ನೋಡುವುದಕ್ಕೆ ಇಲ್ಲಿ ಎರಡು ದೃಷ್ಟಿಗಳಲ್ಲಿ ಭೇದವಿದ್ದಂತೆ ಸಿದ್ಧವಾಗುತ್ತದೆ.

ಬುದ್ಧಿವಂತನಾದ ಯುವಕನೊಬ್ಬನು, ಅಧ್ಯಯನ ಸಂಪನ್ನನಾಗಿ, ವಿವಾಹಿತನಾಗಿ, ಪುತ್ರಪೌತ್ರ, ಮಿತ್ರರನ್ನು ಸಂಪಾದಿಸಿ ಅನೇಕ ಲೋಕೋಪ ಯುಕ್ತ ಕಾರ್ಯಗಳನ್ನು ಮಾಡಿ ಮುಗಿಸಿ, ಕೊನೆಗೊಂದು ದಿನ "ಸಾಯು" ವಾಗ, ಅವನು ಆ ವರೆಗೆ "ಸಂಪಾದಿಸಿದ್ದೇನು ?" ಎಂದು ಕೇಳಿದರೆ, ಮೊದಲನೇ ದೃಷ್ಟಿಯಿಂದ ಬರುವ ಉತ್ತರ : "ಬ್ರಹ್ಮಚಾರಿಯಾಗಿದಾಗ, ತನ್ನ ಗುರುಗಳ ಕಾಲ, ಶಕ್ತಿಗಳನ್ನು ಕ್ಷಯಿಸುವಂತೆ ಮಾಡಿದುದು; ವಿವಾಹಿತ ನಾದ ಮೇಲೆ ಪತ್ನಿಯ ಜೀವವನ್ನು ಹೀರಿದುದು; ಅವಳ ಸೌಂದರ್ಯವನ್ನು ನಾಶ ಮಾಡಿದುದು; ಕೊನೆಗೆ ತನ್ನದೇ ಇಂದ್ರಿಯಗಳ ನಾಶವನ್ನು ಸಾಧಿಸಿ ಕೊಂಡುದು; ಮಕ್ಕಳಾದಾಗ ಅವರೆಲ್ಲರನ್ನು ತನ್ನ ಕ್ಷೇಮಕ್ಕಾಗಿ'ಸವೆಸಿದುದು': ಹೀಗೆ ನಾಶದಿಂದ ನಾಶಕ್ಕೇ ಅವನ ಜೀವನ ಸಾಗಿತು" ಎಂಬುದು. ಬುದ್ಧನು ಜೀವನದಲ್ಲಿ ಸಂಗತಿಗಳನ್ನು ವಿಸಂಗತವಾಗಿ ನೋಡಿ ಜುಗುಪ್ಸೆ ಗೊಂಡುದೇ ಹೀಗೆ ಎಂದು ಅವನ ಚರಿತ್ರೆಯಲ್ಲಿ ನೋಡುತ್ತೇವೆ. ಜನ್ಮ, ಮೃತ್ಯು, ಜರೆಯ ಹೊರತು ಜೀವನದಲ್ಲಿ ಮತ್ತೇನೂ ಇಲ್ಲವಾದುದರಿಂದ,

ಪ್ರತೀತ್ಯಸಮುತ್ಪಾದ ತತ್ತ್ವದಂತೆ ಅವಿದ್ಯಾಮೂಲವಾದ ಈ ಭ್ರಾಂತಿಯನ್ನು ನೀಗಲು, ಜೀವನದಿಂದ ನಿರ್ಗಮಿಸುವುದೊಂದೇ ದಾರಿ ಎಂಬ ಅಪಸಿದ್ಧಾಂತಕ್ಕೆ ಈ ದುದೃಷ್ಟಿ ಖಂಡಿತ ಎಡೆ ಮಾಡಿಕೊಡುತ್ತದೆ. ಇದನ್ನು "ರಾತ್ರಿ"ಪೂಜೆ ಎಂದು ಬೇಕಾದರೆ ಕರೆಯಬಹುದು.

ಇದಕ್ಕೆ ಸಂಪೂರ್ಣ ಭಿನ್ನವಾದ ಎರಡನೆಯ ದೃಷ್ಟಿಯೇ ವೈಜ್ಞಾನಿಕವಾದ ವೈದಿಕ ದರ್ಶನದ ದೃಷ್ಟಿ. ಇಲ್ಲಿ ವಸ್ತುವಿನಾಶವೆಂಬುದು ಇಲ್ಲ; ಇಲ್ಲಿರುವುದು, ಯಜ್ಞಪ್ರವಾಹ, ಸೃಷ್ಟಿಸಂತಾನ ಮಾತ್ರ. ಮೇಲಿನ ಉದಾಹರಣೆಯಲ್ಲಿ ವೈದಿಕ ದೃಷ್ಟಿಯಲ್ಲಿ ಕಾಣುವುದೇನನ್ನು ? ಎಂದರೆ : "ಆ ಯುವಕನು ಬ್ರಹ್ಮಚಾರಿಯಾಗಿದ್ದಾಗ ತನ್ನ ಶಕ್ತಿ, ಕಾಲಗಳನ್ನು, ಗುರುವಿನ ಶಕ್ತಿ, ಕಾಲಗಳ ಸದುಪಯೋಗದಿಂದ ಜ್ಞಾನ ಸಂಪಾದನೆಗಾಗಿ ಉಪಯೋಗಿಸಿಕೊಂಡನು. ವಿವಾಹಿತನಾಗಿ, ಪಿತೃಋಣವನ್ನು ತೀರಿಸಿ, ಲೋಕಕ್ಕೂ ಸತ್ಸಂತಾನದ ಕೊಡುಗೆಯನ್ನಿತ್ತನು. ಪತ್ನಿಯ ಜೀವನವನ್ನು ತನ್ನ ಜೀವನದೊಡನೆ ಕೂಡಿಸಿ ಸಾರ್ಥಕ್ಯದ ಬಾಳಿಗಾಗಿ ವಿನಿಯೋಗಿಸಿ, ಅವಳ ಪೂರ್ಣತೆಗೂ, ತನ್ನ ಪೂರ್ಣತೆಗೂ ಸಾಧನೆಯನ್ನಾಗಿಸಿಕೊಂಡನು; ತನ್ನ ಇಂದ್ರಿಯಗಳ ಸದುಪಯೋಗದಿಂದ ಜ್ಞಾನಾರ್ಜನೆ, ಲೋಕ ಸೇವೆ ಮುಂತಾದ ಸಾರ್ಥಕ ಪ್ರಯೋಜನವನ್ನು ಪಡೆದನು. ಮಕ್ಕಳ ಮೂಲಕ ತಾನು ಸಂಪಾದಿಸಿದ ಜ್ಞಾನವು ನಿರಂತರವಾಗಿ ಲೋಕದಲ್ಲಿ ಉಳಿಯುವಂತೆ ಏರ್ಪಾಡು ಮಾಡಿದನು. ಹೀಗೆ ಅಸಾರ್ಥಕ್ಯದಿಂದ ಸಾರ್ಥಕ್ಯಕ್ಕೆ, ಅಪರಿಪೂರ್ಣತೆಯಿಂದ ಪರಿಪೂರ್ಣತೆಯ ಕಡೆಗೆ ಅವನ ಜೀವನ ಸಾಗಿತು" ಎಂದು ಕಾಣುತ್ತದೆ. ತೈತ್ತಿರೀಯ ಶ್ರುತಿಯು ಜೀವನವನ್ನು ವರ್ಣಿಸಿರುವುದೇ ಹೀಗೆ :

## ೧೦. ಪಂಚ ಮಹಾ ಸಂಹಿತೆಗಳು

"ಅಥಾತಸ್ಸಗ್ಂಹಿತಾಯಾ ಉಪನಿಷದಂ ವ್ಯಾಖ್ಯಾಸ್ಯಾಮಃ । ಪಂಚಸ್ವಧಿಕರಣೇಷು । ಅಧಿಲೋಕಮಧಿಜ್ಯೌತಿಷಮಧಿವಿದ್ಯಮಧಿಪ್ರಜಮಧ್ಯಾತ್ಮಮ್ । ತಾ ಮಹಾಸಗ್ಂಹಿತಾ ಇತ್ಯಾಚಕ್ಷತೇ...." (ತೈ. ಉ. I–3)

"(ಜೀವನವು ಹೆಣೆದುಕೊಂಡಿರುವ) ಸಂಹಿತೆಯ ರಹಸ್ಯವನ್ನು ವ್ಯಾಖ್ಯಾನಿಸುತ್ತೇವೆ, ಐದು ಅಧಿಕರಣಗಳಲ್ಲಿ. ಅಧಿಲೋಕ, ಅಧಿಜ್ಯೌತಿಷ, ಅಧಿವಿದ್ಯ, ಅಧಿಪ್ರಜ, ಅಧ್ಯಾತ್ಮ ಎಂಬುದಾಗಿ, ಇವನ್ನು ಜ್ಞಾನಿಗಳು ಮಹಾ ಸಂಹಿತೆಗಳು–ದೊಡ್ಡ ಹೆಣಿಕೆಗಳು–ಎಂದು ಕರೆಯುತ್ತಾರೆ" ಎಂದು ತೊಡಗಿ, ಪೃಥ್ವೀದ್ಯುಲೋಕಗಳ ಸಂಗಮ, ಆದಿತ್ಯಾಗ್ನಿ ಸಂಯೋಗ, ಆಚಾರ್ಯಶಿಷ್ಯ ಸಂಯೋಗ, ಮಾತಾಪಿತೃ ಸಂಗಮ, ಮೇಲ್ತುಟಿ ಕೆಳತುಟಿಗಳ ಸಂಯೋಗ–ಇವುಗಳಲ್ಲೇ ಇಡೀ ಜೀವನ ಸಂತಾನ ಇರುವುದನ್ನು ತೋರಿಸಿದೆ. (**ವೇದ ಸಂಸ್ಕೃತಿಯ ಪರಿಚಯ**, ಸಂಪುಟ ೧, ಪಂಚಾಗ್ನಿ ವಿದ್ಯೆ, ಯಜ್ಞ ತತ್ತ್ವ, ಪುಟ ೧–೧೩ ನೋಡಿರಿ.)

## ೧೧. ಕಾಲದ ಬಗೆಗೆ ಎರಡು ದೃಷ್ಟಿ

ಹೀಗೆ "**ಕಾಲ**"ದ ಬಗೆಗೆ ಎರಡು ದೃಷ್ಟಿಗಳಲ್ಲಿ ಅಂತರವಿದೆ. ಕಾಲವು **ಕ್ಷಯಕಾರಿಯೋ, ವೃದ್ಧಿಕಾರಿಯೋ ?** ಎಂದರೆ ಮೂಢನ ಪಾಲಿಗೆ ಕಾಲವು ವಿನಾಶಕಾರಿಯಾಗಿ ಕಂಡರೂ, ಜಾಣನ ಪಾಲಿಗೆ ಅದು ಒಳ್ಳೆಯದನ್ನು ತರುವ ದೂತನೇ. ಇಂದಿನ ದಿನ ನಾಳೆಯಿಲ್ಲ; ನಿಜ; ಆದರೆ ನಾಳೆಯು ಇಂದಿಗೀತ ಇನ್ನೊಂದು ನವೀನಾಂಶವನ್ನು (Novelty) ತಂದೇ ತರುತ್ತದೆ. ನವೀನವನ್ನು ಸೃಷ್ಟಿಸುವುದೇ **ಕಾಲದ ಕೆಲಸ.** ಇದಕ್ಕೆ ಇಂದಿನ ದಿನವನ್ನು (ವರ್ತಮಾನವನ್ನು) ಭೂತವನ್ನಾಗಿಸುವುದು ಒಂದು ಅನಿವಾರ್ಯ ಪ್ರಥಮ ಮೆಟ್ಟಿಲು ಮಾತ್ರ. "**ತೇ ಹಿ ನೋ ದಿವಸಾ ಗತಾಃ**"— "(ಅಯ್ಯೋ) ಆ ದಿನಗಳು ಕಳೆದು ಹೋದವಲ್ಲಾ" ಎಂಬುದು ಒಂದು ಉದ್ಗಾರವಾದರೆ "**ಜೀವನ್ ಭದ್ರಾಣಿ ಪಶ್ಯತಿ**", "ಬದುಕಿದ್ದರೆ, ಒಳ್ಳೆಯದನ್ನು ನೋಡುತ್ತಾನೆ" ಎಂಬುದು ಇನ್ನೊಂದು ಉದ್ಗಾರ. ಈ ಎರಡನೆಯದು ವೈದಿಕ ದೃಷ್ಟಿ. ಮೊದಲನೆಯದು ಮಾನವ ಸಹಜವಾದ, ದುರ್ಬಲವಾದ, ಅಸಹಾಯಕ ಸ್ಥಿತಿಯ ದೃಷ್ಟಿ. ನೆನ್ನೆಯೇ, ಇಂದೂ ನಾಳೆಯೂ ಇರುವಂತಾಗಬೇಕೆಂದು ಬಯಸುವುದು ಸೋತ ಮನೋಭಾವ. ಇದರಲ್ಲಿ ವೀರ ಮನೋಭಾವವಿಲ್ಲ. **ನಾಳಿನ ಶುಭಕ್ಕಾಗಿ, ಇಂದಿನ ಮಂಗಳ ಮುಹೂರ್ತ ವಿನಿಯೋಗವಾಗಬೇಕೆಂಬ ದೃಷ್ಟಿಯಲ್ಲಿ ಕಾಲಪುರುಷನು ಸೃಷ್ಟಿಕರ್ತ**

**ನೆಂಬ ದಿವ್ಯ ಘೋರಣೆಯಿದೆ.** ಈ ಲೋಕವು ಅನಿತ್ಯ, ಅಸುಖವೆಂಬುದೇ ಪರಮಾರ್ಥವಲ್ಲ. ಇದನ್ನು ಹೇಳಿದ ಗೀತಾಚಾರ್ಯನು :

"ಅನಿತ್ಯಂ ಅಸುಖಂ ಲೋಕಂ ಇಮಂಪ್ರಾಪ್ಯ ಭಜಸ್ವಮಾಂ" ಎಂದು ಕರೆಕೊಟ್ಟಿರುವುದನ್ನು ಗಮನಿಸಬೇಕು. ಈ ಅನಿತ್ಯ, ಅಸುಖ ಲೋಕವೇ ಭಗವದ್ಭಜನೆಯ ಮೂಲಕ ಶಾಶ್ವತ ಪುರುಷಾರ್ಥ ಸಿದ್ಧಿಗೆ ಸಾಧನೆಯಾಗುತ್ತದೆ ಎಂದು ಭಾವ.

ಹೀಗೆ ಈ ಲೋಕದಲ್ಲಿ ಯಾವುದೂ ತುಚ್ಛವಲ್ಲವೆಂದೂ, ಎಲ್ಲವೂ ಅಮೃತ ತತ್ತ್ವಕ್ಕೆಸಾಧಕವೆಂದೂ ಬೋಧಿಸುವುದೇ ಮಧುವಿದ್ಯೆಯ ವೈಶಿಷ್ಟ್ಯ. ಮೇಲೆ ಛಾಂದೋಗ್ಯ ಶ್ರುತಿಯಲ್ಲಿ ಬರುವ ಈ ಪ್ರಸ್ತಾಪವನ್ನು ಎತ್ತಿದ್ದಾಗಿದೆ. ಈಗ ಬೃಹದಾರಣ್ಯಕ ಶ್ರುತಿಯೂ ಇದನ್ನೇ ಹೇಗೆ ಹೇಳುತ್ತದೆಯೆಂದು ನೋಡೋಣ :

## ೧೨. ಬೃಹದಾರಣ್ಯಕದಲ್ಲಿ 'ಮಧು' ವಿದ್ಯೆ

**"ಇಯಂ ಪೃಥಿವೀ ಸರ್ವೇಷಾಂ ಭೂತಾನಾಂ ಮಧು, ಅಸ್ಯೈ ಪೃಥಿವ್ಯೈ ಸರ್ವಾಣಿ ಭೂತಾನಿಮಧು"** ಎಂದು ತೊಡಗಿ **"ಇಮಾಆಪಃ" "ಅಯಮಗ್ನಿಃ" "ಅಯಂವಾಯುಃ", "ಅಯಮಾದಿತ್ಯಃ", "ಇಮಾ ದಿಶಃ", "ಅಯಂ ಚಂದ್ರಃ", "ಇಯಂ ವಿದ್ಯುತ್", "ಅಯಂ ಸ್ತನಯಿತ್ನುಃ", "ಅಯಮಾಕಾಶಃ", "ಅಯಂ ಧರ್ಮಃ", "ಇದಂ ಸತ್ಯಂ" "ಇದಂ ಮಾನುಷಂ", "ಅಯಮಾತ್ಮಾ"** ಎಂದು ಪರಮಾತ್ಮನ ತನಕ ಸಕಲ ಚರಾಚರ ವಸ್ತುಗಳನ್ನೂ ತತ್ತ್ವಗಳನ್ನೂ, ನಿಯಮಗಳನ್ನೂ ಮಧುಮಯವನ್ನಾಗಿ ಇಲ್ಲಿ ವರ್ಣಿಸಲಾಗಿದೆ. (II-5-1 ರಿಂದ 19)

"ಮಧು"ವೆಂದರೆ ಜೇನು. ಜೇನು ನಾನಾ ಪರಿಮಳ ಪುಷ್ಪಗಳ ರಸ ಘನ. ಅಷ್ಟೇ ಅಲ್ಲ, ನಮಗೆ ಮಧುರಹಿತವಾಗಿ ಕಾಣುವ ಪುಷ್ಪಗಳಲ್ಲಿಯೂ ರಸವು ಇದ್ದೇ ಇದ್ದು, ನಮಗೆ ಎಟುಕದ ಆ ರಸವು, "ದುಂಬಿ"ಗೆ ಮಾತ್ರ ಎಟುಕುವುದಷ್ಟೆ ? ಬೇಲಿಯ ಗಿಡದಲ್ಲಿ ಜೇನಿದೆಯೆಂದು ಯಾರು ನಂಬುತ್ತಾರೆ? ದುಂಬಿಗೆ ಮಾತ್ರ ಸಕಲ ಪುಷ್ಪಗಳ ಮಕರಂದವೂ ನಿಲುಕುತ್ತದೆ. ಭಗವಂತನೇ "ದುಂಬಿ"; ಸಕಲ ವಸ್ತುಗಳೂ ಅವನ ವಿನಿಯೋಗಕ್ಕಾಗಿಯೇ

ಇವೆ. ನಮಗೆ "ಕಹಿ"ಯಾದದ್ದು ಅವನಿಗೆ "ಸಿಹಿ"ಯಾಗಿಯೇ ಇದೆ. ಈಗ ಸಿಹಿಯಾಗಿಲ್ಲದಿದ್ದರೂ, ಕಾಲಾಂತರದಲ್ಲಿ ಅದನ್ನು ಸಿಹಿಯಶಾಗಿಸಿಕೊಳ್ಳು ವುದೇ ಅವನ ಕಸಬು-ಅವನ ಜಾಣ್ಮೆ. ಏಕೆಂದರೆ ಅವೆಲ್ಲ ಅವನಿಗಾಗಿಯೇ ಇವೆ. ತನಗೇ ಬೇಕಾದ ಒಂದು ಪದಾರ್ಥವನ್ನು ಯಾವನಾದರೂ ನಿರುಪ ಯೋಗವಾಗುವಂತೆ ಸೃಷ್ಟಿಸುವುದುಂಟೇ ?

ಹೀಗೆ ಒಬ್ಬ ಜೂಜುಕೋರನಿಗೆ ಭೂಮಿಯೇ ಬೇಡವಾಗಬಹುದು; ಎಲ್ಲರೂ ಅವನನ್ನು ಸಾಲದ ಹಣದ ವಸೂಲಿಗಾಗಿ ಕಾಡುವಾಗ, ಆತ್ಮಹತ್ಯೆಗೆ ಎಳಸುವ ಅವನಿಗೆ ಪೃಥ್ವಿಯು ವಿಷದಂತೆ ಎನಿಸಬಹುದು. ಆದರೆ ಇದೇ ದೊಡ್ಡ ಸಿದ್ಧಾಂತವೇ ? ಎಂದರೆ—

"ಇಯಂ ಪೃಥಿವೀ ಸರ್ವೇಷಾಂ ಭೂತಾನಾಂ ಮಧು" ಎನ್ನುತ್ತದೆ. ಶ್ರುತಿ. ಎಲ್ಲರಿಗೂ ಹಿತಕರವಾಗಿ ಮಧುಪ್ರಾಯವಾಗಿದೆ ಪೃಥ್ವಿ. ಹಾಗೆಯೇ ಪೃಥ್ವಿಗಾದರೂ ಎಲ್ಲ ಪ್ರಾಣಿಗಳೂ "ಮಧುವೇ." ಯಾರಿಗಾದರೂ ಯಾವುದಾದರೂ "ವಿಷ"ವಾಗಿದ್ದರೆ, ಇದು ದಡ್ಡತನ ಮಾತ್ರ; ಭಗವತ್ ಪ್ರಸಾದದಿಂದ, ಬುದ್ಧಿಯಿಂದ, ಇದನ್ನು "ಮಧು"ವಾಗಿಸಿ ಕೊಳ್ಳಬಹುದು. ಏಕೆಂದರೆ, ಪೃಥ್ವಿಯು ಎಲ್ಲರಿಗೂ 'ಮಧು'ವಾಗುವಂತೆ, ಅದರಲ್ಲಿ :

"ಅಸ್ಯಾಂ ಪೃಥಿವ್ಯಾಂ ತೇಜೋಮಯೋಽಮೃತಮಯಃ
ಪುರುಷಃ...."

ಎಂಬಂತೆ ಸ್ವಯಂ ಪ್ರಕಾಶ ಜ್ಞಾನಮಯನೂ, ಮರಣ ಧರ್ಮ ಶೂನ್ಯನೂ ಅಪಹತಪಾಪ್ಮತ್ವ ಮುಂತಾದ ದಿವ್ಯ ಗುಣ ಸಂಪನ್ನನೂ ಆದ ಪರಮಾತ್ಮನು ಅಂತರ್ಯಾಮಿಯಾಗಿ, ಪೃಥ್ವೀತತ್ತ್ವಜಾತವಾದ ಸಕಲ ಪದಾರ್ಥಗಳಲ್ಲೂ ಇದ್ದು, ನಮ್ಮ ನಮ್ಮ ಶರೀರಗಳಲ್ಲೂ ದೇಹೇಂದ್ರಿಯಮನಃ ಪ್ರಾಣ ಜೀವ ಸಂಘಾತದಲ್ಲಿ ಅಂತರ್ಯಾಮಿಯಾಗಿರುವುದರಿಂದ, ಶರೀರ ರೂಪ ಪೃಥ್ವಿಯು ಜೀರ್ಣವಾಗತಕ್ಕದ್ದಾದರೂ, ಅದು "ಮಧು"ವೇ ಆಗಿದೆ. ಅಂದರೆ ಹೊರಗೆ ಪೃಥ್ವಿಯಾಗಿ ( ಬೇಲಿಗಿಡದ ಹೂವಿನಂತೆ ) ಕಾಣುವ ವಸ್ತುವಿನಲ್ಲೂ ಒಳಗಿರುವವನು "ಮಧು" ರೂಪಿಯಾದ 'ಅವನೇ'

"ಅಯಮೇವ ಸ ಯೋ$\cdot$ಯಮಾತ್ಮಾ, ಇದಮಮೃತಂ
ಇದಂ ಬ್ರಹ್ಮ, ಇದಂ ಸರ್ವಂ ‖"

ಹೀಗೆಯೇ ಪಂಚಮಹಾಭೂತಗಳಲೆಲ್ಲಾ, ಆದಿತ್ಯನಲ್ಲಿ, ದಿಕ್ಕುಗಳಲ್ಲಿ, ಚಂದ್ರನಲ್ಲಿ, ವಿದ್ಯುತ್ತಿನಲ್ಲಿ, ಗುಡುಗಿನಲ್ಲಿ, ಆಕಾಶದಲ್ಲಿ, ಭಗವಂತನಿರುವುದರಿಂದ ಎಲ್ಲವೂ ಮಧುವೇ. ಇನ್ನೂ ಮುಂದೆ, ಧರ್ಮ, ಸತ್ಯಗಳೂ, ಮನುಷ್ಯವರ್ಗವೂ, ಜೀವಾತ್ಮನೂ–ಎಲ್ಲವೂ ಮಧುಮಯವಾಗಿದೆಯೆಂದು ವರ್ಣಿತವಾಗಿದೆ. ಆತ್ಮನಸ್ತು ಕಾಮಾಯ ಸರ್ವಂಪ್ರಿಯಂಭವತಿ" ಎಂದು ಮೈತ್ರೇಯೀ ಬ್ರಾಹ್ಮಣದಲ್ಲೂ (ಬೃ. ಉ. II-4), ಇನ್ನು ಮುಂದೆ "ಯಃ ಪೃಥಿವ್ಯಾಂ ತಿಷ್ಠನ್... ಏಷ ತ ಆತ್ಮಾಂತರ್ಯಾಮ್ಯಮೃತಃ" ಇತ್ಯಾದಿಯಾಗಿ ಅಂತರ್ಯಾಮಿ ಬ್ರಾಹ್ಮಣದಲ್ಲೂ (III-7-) ವರ್ಣಿತವಾಗಿರುವಂತೆ, ಪರಮಾತ್ಮನು ಎಲ್ಲ ವಸ್ತುಗಳಲ್ಲಿಯೂ ಅಂತರ್ಯಾಮಿಯಾಗಿರುವುದರಿಂದಲೇ ಸೃಷ್ಟಿಯೆಲ್ಲವೂ ಮಧುಮಯವಾಗಿದೆಯೆಂದು ಇಲ್ಲಿಯೂ ಉಕ್ತವಾಗಿದೆ. (ಈ ವಿದ್ಯೆಯನ್ನು ಸಾಕ್ಷಾತ್ಕರಿಸಿದ ದಧ್ಯಙ್ ಅಥರ್ವನು ಅಶ್ವಿನಿದೇವತೆಗಳಿಗೆ ಇದನ್ನು ಒಂದಾನೊಂದು ಸಂದರ್ಭದಲ್ಲಿ ಉಪದೇಶಿಸಿದನೆಂಬ ವಿಷಯ ಋಗ್ವೇದದಲ್ಲಿ ಅನೇಕ ಕಡೆಗಳಲ್ಲಿ ಬಂದಿರುವುದಲ್ಲದೆ, ಪ್ರಕೃತದ ಬೃಹದಾರಣ್ಯಕದ ಪ್ರಕರಣದಲ್ಲೂ ಉಕ್ತವಾಗಿ, ಕೆಲವು ಋಕ್ಕುಗಳೇ ಉದಾಹೃತವಾಗಿವೆ. ಋಕ್ಸಂಹಿತೆಯ I-116-12 ನೆಯ ಮತ್ತು I-117-22 ನೆಯ ಮಂತ್ರಗಳು ಇಲ್ಲಿ ಪೂರ್ಣವಾಗಿ ಆವಿರ್ಭವಿಸಿವೆ. ದಧೀಚನಿಗೆ ಇಂದ್ರನ ಒಂದು ನಿರ್ಬಂಧವಿದ್ದಿತು.: ಈ ವಿದ್ಯೆಯನ್ನು ಯಾರಿಗಾದರೂ ಉಪದೇಶಿಸಿದರೆ ಅವನ ತಲೆ ಬಿದ್ದು ಹೋಗುವುದೆಂದು. ಅಶ್ವಿನೀದೇವತೆಗಳು ಈ ಗಂಡಾಂತರದಿಂದ ಅವನನ್ನು ಉಳಿಸಲೆಂದು ಮೊದಲೇ ಅಲ್ಲಿ ಅವನ ತಲೆಗೆ ಬದಲಾಗಿ, 'ಕುದುರೆ'ಯ ತಲೆಯನ್ನಿಟ್ಟರೆಂದೂ, ಇದು ವಿದ್ಯೋಪದೇಶಾಂತ್ಯದಲ್ಲಿ ಬೀಳಲಾಗಿ, ಅಲ್ಲಿ ಪುನಃ ಅವನ ಮೊದಲಿನ ತಲೆಯನ್ನೇ ಇಟ್ಟರೆಂದೂ ಕಥೆ ಋಗ್ವೆದದಲ್ಲೇ ಬಂದಿದೆ; ಇಲ್ಲೂ ಉಕ್ತವಾಗಿದೆ. 'ಮಧು'ವಿದ್ಯೆಗೂ, 'ಮಧು' ಕೈಟಭಸಂಹಾರಿಯಾದ ಹಯಗ್ರೀವಮೂರ್ತಿಗೂ ಇರುವ ಮಾರ್ಮಿಕ ಸಂಬಂಧವನ್ನು ದಧೀಚನು ಹಯಗ್ರೀವನಾಗಿ ಮಧುವಿದ್ಯೆಯನ್ನುಪದೇಶಿಸಿದನೆಂಬ ಈ ಪ್ರಕರಣ ಸೂಚಿಸುವಂತಿದೆ.) ಒಟ್ಟಿನಲ್ಲಿ :

"ಪುರಶ್ಚಕ್ರೇ ದ್ವಿಪದಃ ಪುರಶ್ಚಕ್ರೇ ಚತುಷ್ಪದಃ ।
ಪುರಃ ಸ ಪಕ್ಷೀಭೂತ್ವಾಪುರಃ ಪುರುಷ ಆವಿಶತ್ ॥"
"ಸ ವಾ ಅಯಂ ಪುರುಷಃ ಸರ್ವಾಸು ಪೂರ್ಷು ಪುರಿಶಯಃ
ನೈನೇನ ಕಿಂಚನಾವೃತಂ, ನೈನೇನ ಕಿಂಚನಾ
ಸಂವೃತಮ್ ॥೧೮॥ (II–5–18)

ಎಂಬಂತೆ ಎರಡು ಕಾಲಿನ ಮತ್ತು ನಾಲ್ಕು ಕಾಲಿನ ಸಕಲ ಪ್ರಾಣಿಗಳೂ ಪರಮಾತ್ಮನಿಗೆ 'ಪುರ'ಗಳಾಗಿ, ಅವನು 'ಪುರುಷ'ನಾಗಿ, 'ಪುರಿಶಯ'ನಾಗಿ, ಈ ಪ್ರತಿ ಪುರಗಳಲ್ಲಿಯೂ ಶಯನಿಸಿರುವುದರಿಂದ, ಇವನಿಂದ ಆವರಿಸಲ್ಪಡದಿರುವುದೂ ಮತ್ತು ಸಂವರಿಸಲ್ಪಡದಿರುವುದೂ ಯಾವುದೂ ಇಲ್ಲವಾದುದರಿಂದ, ಇಡೀ ಸೃಷ್ಟಿಯೂ ಸೃಷ್ಟವಾದ ಎಲ್ಲ ಪದಾರ್ಥಗಳೂ ಎಲ್ಲ ಅವಸ್ಥೆಗಳಲ್ಲಿಯೂ ಬಿಡಿಯಾಗಿಯೂ, ಇಡಿಯಾಗಿಯೂ, ಮಧುಮಯವೇ ಆಗಿರುವುದೆಂದು ಮಧುವಿದ್ಯೆಯ ಸಾರಾಂಶ.

ಇದನ್ನೇ ಛಾಂದೋಗ್ಯ ಶ್ರುತಿಯಲ್ಲಿಯೂ, ರೂಪಕದಲ್ಲಿ, ಜೇನು-ಗೂಡಿನಾಕೃತಿಯಲ್ಲಿರುವ "ಆದಿತ್ಯ"ನೆಂಬುದಾಗಿ ವರ್ಣಿಸಿರುವುದನ್ನು ಹಿಂದೆ ತೋರಿಸಲಾಗಿದೆ. ಸೂರ್ಯನಿಗೇ ಇಲ್ಲಿ ಏಕೆ ಹೋಲಿಕೆಯನ್ನು ಕೊಟ್ಟಿದೆಯೆಂದರೆ ಆವನು ಕಾಲಸ್ವರೂಪನೂ ಆದುದರಿಂದ, ಕಾಲಪ್ರವಾಹವೂ ಈ 'ಮಧು'ಶೇಖರಣೆಯಲ್ಲಿಯೇ ತೊಡಗಿದ್ದು ಹೀಗೆ ಶೇಖರಿಸಲ್ಪಟ್ಟ ಮಧುವೇ ಸಮಸ್ತಕಾಲಸ್ವರೂಪನಾದ ಆದಿತ್ಯನಾಗಿದ್ದಾನೆಂದು, ವಿಷವನ್ನೂ ಅಮೃತವನ್ನಾಗಿಸುವ ಕಾಲಸ್ವರೂಪದ ಮಹತಿಯನ್ನು ಕೊಂಡಾಡುವುದಕ್ಕಾಗಿ, ಸೂರ್ಯನನ್ನೇ ಶ್ರುತಿಯಲ್ಲಿ ಈ ದೃಷ್ಟಿಯಿಂದ ಹೀಗೆ ವರ್ಣಿಸಲಾಗಿದೆ.

## ೧೩. 'ಐದು ಕಾಲಿನ' ತಂದೆ

ಪಂಚಪಾದಂ ಪಿತರಂ ದ್ವಾದಶಾಕೃತಿಂ
ದಿವ ಆಹುಃ ಪರೇ ಅರ್ಧೇ ಪುರೀಷಿಣಂ ।
ಅಥೇಮೇ ಅನ್ಯ ಉಪರೇ ವಿಚಕ್ಷಣಂ ಸಪ್ತಚಕ್ರೇ
ಷಡರ ಆಹುರರ್ಪಿತಂ ॥ಇತಿ॥ (ಪ್ರಶ್ನೋಪನಿಷತ್–I–11)

"ಕಾಲಸ್ವರೂಪನಾಗಿ ಸಕಲಜೀವಲೋಕಕ್ಕೂ "ಪಿತೃ" ಆಗಿರುವ "ಆದಿತ್ಯ"ನಿಗೆ ಐದು ಕಾಲುಗಳುಂಟು; ವತ್ಸರ, ಸಂವತ್ಸರ, ಪರಿವತ್ಸರ, ಇದಾವತ್ಸರ, ಅನುವತ್ಸರಗಳೆಂಬುವೇ ಈ ಐದು ಪಾದಗಳು; ಅಥವಾ ಹೇಮಂತಶಿಶಿರ ಋತುಗಳನ್ನು ಒಂದೆಂದು ಗ್ರಹಿಸಿದರೆ ಐದೇ ಋತುಗಳಾಗುವುದರಿಂದ, ಇವೇ ಅವನ ಪಾದಗಳು. ಹನ್ನೆರಡು ಆಕೃತಿಗಳು ಇವನಿಗೆ ಹೇಗೆಂದರೆ, ಹನ್ನೆರಡು ತಿಂಗಳಿರುವುದರಿಂದ. ("ನಾನಾಲಿಂಗತ್ವಾದೃತೂನಾಂ ನಾನಾ ಸೂರ್ಯತ್ವಂ" ಎಂಬ ತೈ. ಆ. I ರ ವಾಕ್ಯವನ್ನು ಇಲ್ಲಿ ನೆನೆಯಬಹುದು.) ಪರಮಪದದ ಪರಾರ್ಧದಲ್ಲಿ ಇವನ ಸ್ಥಾನವಿದೆ; ಸ್ವರ್ಣಮಯವಾದ ಬ್ರಹ್ಮಾಂಡ ಗೋಳದ ಆವರಣವುಳ್ಳವನು ಈ ಆದಿತ್ಯ-ಹೀಗೆ ಕೆಲವರು ಹೇಳುತ್ತಾರೆ. ಬೇರೆ ಕೆಲವರು ಶ್ರೇಷ್ಠಜ್ಞಾನಿಗಳು (ಕಾಲತ್ತ್ವವಿದರು) ಹೀಗೆಯೂ ಹೇಳುವುದುಂಟು. ಆದಿತ್ಯಾದಿಗ್ರಹ ಸಪ್ತಕ ಲಕ್ಷಣವುಳ್ಳ ಚಕ್ರಗಳಿಂದ ಕೂಡಿದುದೂ, ಆರು ಋತುಗಳೆಂಬ ಲಕ್ಷಣವನ್ನುಳ್ಳ ಸಂವತ್ಸರವೆಂಬ ಖ್ಯಾತಿಯನ್ನು ಪಡೆದುದೂ ಆದ ರಥದಲ್ಲಿ ಕುಳಿತು ಕುಶಲನಾಗಿ, ನಿಶ್ಚಲಭಾವದಿಂದ ಜಗತ್ತು ಕ್ಷೇಮವಾಗಿರುವಂತೆ ಇರತಕ್ಕವನು, ಎಂದು." (ಈ ಮಂತ್ರ ಋಕ್ಸಂಹಿತೆ, I-164-12 ರಲ್ಲಿಯೂ ಬಂದಿದೆ. ದೀರ್ಘತಮಸ್ಸೆಂಬ ಋಷಿಗಳು ಇದರ ದೃಷ್ಟಾ ಆಗಿದ್ದು, ಜಗತ್ಪ್ರಸಿದ್ಧವಾಗಿದೆ.)

## ೧೪. ಏಳು ಕುದುರೆಗಳ, ಒಂದೇ ಚಕ್ರದ ರಥ !

ಸಪ್ತ ಯುಂಜಂತಿ ರಥಮೇಕ ಚಕ್ರಂ ಏಕೋ
ಅಶ್ವೋ ವಹತಿ ಸಪ್ತ ನಾಮಾ ।
ತ್ರಿನಾಭಿಚಕ್ರಮಜರಮನರ್ವಂ ಯತ್ರೇಮಾ ವಿಶ್ವಾ
ಭುವನಾನಿ ತಸ್ಥುಃ ॥ (ಋ. ಸಂ. I-104-2)

"ಒಂದೇ ಚಕ್ರವುಳ್ಳ (ಸೂರ್ಯನ) ರಥಕ್ಕೆ ಏಳು ಕುದುರೆಗಳನ್ನು ಜೋಡಿಸಲಾಗಿದೆ. ಒಂದೇ ಕುದುರೆಯು ಏಳು ಹೆಸರುಗಳನ್ನು ಹೊಂದಿ ಈ ರಥವನ್ನು ನಡೆಸುತ್ತದೆ. ಈ ರಥಕ್ಕೆ ಮೂರು ನಾಭಿಗಳುಂಟು:

ಇದು ಎದುರಿಸಲ್ಪಡಲಾಗದ, ಮರಣ ರಹಿತವಾದ ರಥ. ಸಮಸ್ತ ಭುವನಗಳೂ (ಲೋಕಗಳೂ) ಇದನ್ನು ಆಶ್ರಯಿಸಿವೆ."

ಇದೂ ವಿಚಿತ್ರವಾದ ವರ್ಣನೆ. ಸೂರ್ಯನ ರಥಕ್ಕೆ ಏಳು ಕುದುರೆಗಳೆಂಬ ಪ್ರಸಿದ್ಧಿಯನ್ನು ಎಲ್ಲರೂ ಬಲ್ಲರು. (ವಾರದ ಏಳು ದಿನಗಳೇ ಅಥವಾ ಸೂರ್ಯಕಿರಣದ ಏಳು ಬಣ್ಣಗಳೇ ಈ ಕುದುರೆಗಳಿರಬಹುದು.) ಅಥವಾ ಸೂರ್ಯನೇ ಕುದುರೆಯೆಂದೂ ಪ್ರಸಿದ್ಧ. ಯಾಜ್ಞವಲ್ಕ್ಯರಿಗೆ ಅವನು ವೇದೋಪದೇಶ ಮಾಡಿದುದೇ ಕುದುರೆಯ ರೂಪದಲ್ಲಿ. "ವಾಜಿ" ರೂಪದಲ್ಲಿ. ಅದಕ್ಕೇ ಶುಕ್ಲಯಜುಸ್ಸಂಹಿತೆಗೆ ವಾಜಸನೇಯಿ ಸಂಹಿತೆಯೆಂದು ಹೆಸರಾಗಿದೆ. ಕಾಲಸ್ವರೂಪದಲ್ಲಿ ಸಂವತ್ಸರವೇ 'ಕುದುರೆ'ಯ ಶರೀರವೆಂದೂ, ಉಷಸ್ಸೇ ಇದರ ತಲೆಯೆಂದೂ, ಸೂರ್ಯನೇ ಇದರ ಕಣ್ಣೆಂದೂ ಮುಂತಾಗಿ ಅದ್ಭುತ ವರ್ಣನೆಯನ್ನು, ಬೃಹದಾರಣ್ಯಕೋಪನಿಷತ್ತಿನ ಆದಿಯಲ್ಲೇ "ಉಷಾ ವಾ ಅಶ್ವಸ್ಯ ಮೇಧ್ಯಸ್ಯ ಶಿರಃ..."ಇತ್ಯಾದಿ ಮಾಡಲಾಗಿದೆ. "ಅಶ್ವಮೇಧ" ಯಾಗಕ್ಕೆ ವಿಶೇಷವಾದ ಮಾರ್ಮಿಕಾರ್ಥ ಇರುವುದು ಗಮನೀಯ.

ಸೂರ್ಯನೇ ಒಂದು ಕುದುರೆಯಾದರೆ, ಕಾಲಸ್ವರೂಪಿಯಾದ ಇವನಿಗೇ ವಾರದಲ್ಲಿ ದಿನಕ್ಕೊಂದು ಹೆಸರಾದುದರಿಂದ, ಏಳು ಬೇರೆ ಬೇರೆ ಹೆಸರುಗಳು ಮಾತ್ರವೇ ಹೊರತು ಬೇರೆ ಬೇರೆ ಕುದುರೆಗಳಿಲ್ಲ ಎಂತಲೂ ಭಾವಿಸಬಹುದು. ಅಥವಾ ಸಪ್ತರಶ್ಮಿಗಳು ಇವನಿಗಾಗಿ ರಸವನ್ನು ಹೀರುತ್ತವೆ ಎಂದೋ, ಸಪ್ತರ್ಷಿಗಳಿಂದ ಸ್ತುತಿಸಲ್ಪಡುವವನು ಎಂದೋ ತಿಳಿಯಬಹುದೆಂದು ನಿರುಕ್ತ ವ್ಯಾಖ್ಯಾನ (IV-27).

## ೧೫. ಸಂವತ್ಸರ, ಯಜ್ಞ, ಕಾಲಸ್ವರೂಪ

ಮುಂದೆ ಸಂವತ್ಸರ ಸ್ವರೂಪಿಯಾದ ಆದಿತ್ಯನಿಗೆ ಗ್ರೀಷ್ಮ, ವರ್ಷ, ಹೇಮಂತಗಳೆಂಬ ಋತುತ್ರಯಗಳೇ 'ನಾಭಿ'ಗಳು-ತ್ರಿನಾಭಿಚಕ್ರಂ. ಇದು ಅಮರವಾಗಿ ಶಾಶ್ವತವಾಗಿದೆ. ಲೋಕಗಳೆಲ್ಲವೂ ಕಾಲಾಧೀನವಾಗಿ ಈ ಚಕ್ರವನ್ನೇ ಆಶ್ರಯಿಸಿವೆ. ಅಥವಾ ಸಂಧ್ಯಾತ್ರಯಗಳಾದರೂ ಈ ಮೂರು

'ನಾಭಿ'ಗಳಾಗಬಹುದು. ಭೂತ, ಭವಿಷ್ಯತ್, ವರ್ತಮಾನಗಳೂ ಇಂತಹ ನಾಭಿತ್ರಯಗಳೆಂದು ಭಾವಿಸಲ್ಪಡಬಹುದು.

ಯಜ್ಞತತ್ತ್ವಕ್ಕೂ ಕಾಲತತ್ತ್ವಕ್ಕೂ ಬಹುನಿಕಟ ಸಂಬಂಧವಿದೆ. ಕಾಲಪ್ರವಾಹವೆಲ್ಲಾ ಒಂದು ಬಗೆಯ ನಿರಂತರ ಯಜ್ಞವರ್ಧನೆಯೇ (Creativity) ಈ ಮುಂದಿನ ಮಂತ್ರದಲ್ಲಿ ಇದನ್ನು ಸಪ್ತತಂತು ಎಂದು ಕರೆಯಲಾಗಿದೆ. ಮತ್ತು ಈ ಪ್ರಶ್ನೆಯನ್ನು ಕೇಳಲಾಗಿದೆ :

## ೧೬. ದೀರ್ಘತಮಸರ 'ಸಪ್ತತಂತು'ವಿನ ಬಗೆಗೆ ಪ್ರಶ್ನೆ

ಪಾಕಃಪೃಚ್ಛಾಮಿ ಮನಸಾ ವಿಜಾನನ್ ದೇವನಾಮೇವ
ನಿಹಿತಾ ಪದಾನಿ।
ವತ್ಸೇ ಬಷ್ಕಯೇಽಧಿ ಸಪ್ತತಂತೂನ್ ವಿತತ್ನಿರೇ ಕವಯ
ಓತವಾ ಉ ॥ (I-164-5)

"ದೇವತೆಗಳಿಗೂ ತಿಳಿಯದಷ್ಟು ನಿಗೂಢವಾದವು ಈ ತತ್ತ್ವಾರ್ಥಗಳು. ನಾನಾದರೋ ಮನಸ್ಸಿನ ಶಕ್ತಿಯಲ್ಲೂ, ಬುದ್ಧಿಶಕ್ತಿಯಲ್ಲಿಯೂ ಅಪರಿಪೂರ್ಣನೂ ಅಶಕ್ತನೂ ಆಗಿದ್ದೇನೆ. ಆದರೆ ತಿಳಿಯಬೇಕೆಂಬಾಸೆಯಿಂದ ಕೇಳುತ್ತೇನೆ. ಸಮಸ್ತವಿಶ್ವಕ್ಕೂ ಆಧಾರನಾದ ಆದಿತ್ಯನಲ್ಲಿ ಮಹಾಮೇಧಾವಿಗಳಾದ ಋಷಿಗಳು ಏಳು ತಂತಿಗಳನ್ನು ಹರಡಿದ್ದಾರೆ. (ಕಂಡಿದ್ದಾರೆ) (ಲೋಕಗಳನ್ನೆಲ್ಲಾ ತನ್ನೊಳಗೆ ಹೊಂದಿ ಅವುಗಳಿಗೆ ಹಾಸುಹೊಕ್ಕಂತಿರುವ ಈ ಏಳು ತಂತಿಗಳು ಯಾವುವು ?)"

ಈ ಏಳು, ಸಪ್ತಛಂದಸ್ಸುಗಳಾಗಿರಬಹುದು; ಹೋತೃ ಮುಂತಾದ ಏಳು ವಿಧವಾದ ಕರ್ಮವಿಸ್ತಾರಮಾಡತಕ್ಕ ವಷಟ್‌ಕರ್ತರಿರಬಹುದು; ಅಗ್ನಿಷ್ಟೋಮ ಮುಂತಾದ ಏಳು ಯಾಗಭೇದಗಳಿಂದ ಯಜ್ಞಸ್ವರೂಪವೇ ಆಗಬಹುದು. ಆದರೂ ಇನ್ನೂ ವಿಶೇಷಾರ್ಥವಿರುವಂತಿದೆ. ಸೂಕ್ತದ ಋಷಿಗೇ ಇಲ್ಲಿ ಪ್ರಶ್ನೆ ಉದಿಸುವಾಗ ಬೇರೆ ಯಾವ ಭಾಷ್ಯಕಾರರು ತಾನೇ ಸಮರ್ಪಕವಾಗಿ ವಿವರಿಸಬಲ್ಲರು ?

ಜೀವನ ಸೃಷ್ಟಿಯೆಲ್ಲವೂ, ಸಂಗೀತ ಲೋಕದಂತೆ, ಸಾಮಗಾನಲೋಲ ನಾದ ಭಗವಂತನ ವಿಚಿತ್ರ ವ್ಯಾಪಾರವಾದರೆ, ಈ ಸಂಗೀತದ ಏಳು (ಸಪ್ತ) ಸ್ವರಗಳೇ, ಈ 'ಸಪ್ತತಂತು'ವಾಗಿರಬಹುದಲ್ಲವೆ ? ಏಳು ತಂತಿಯ ವೀಣೆಯಂತೆ, ಯಜ್ಞವು, ವಿರಾಟ್ಪುರುಷನಾದ, ಪುರುಷಸೂಕ್ತ ಪ್ರತಿಪಾದ್ಯನಾದ ಭಗವಂತನ ಉಪಕರಣವಾಗಿ, ಸೃಷ್ಟವಾದ ಸಕಲ ವಿಶ್ವವೂ ಈ ಏಳು ತಂತಿಗಳಲ್ಲೇ ಅಡಗಿವೆ ಎಂಬ ಮಾತಿಗೆ ಎಷ್ಟು ದೊಡ್ಡ ಅರ್ಥವಿದೆಯೆಂದು ಮೇಲ್ನೋಟಕ್ಕೂ ಕಾಣುತ್ತದೆ. (ಸಪ್ತಪ್ರಾಣಾಃ ಪ್ರಭವಂತಿ ತಸ್ಮಾತ್.... ಇತ್ಯಾದಿ ತೈ. ನಾ. ಯದ ಸೂಕ್ತಿಯನ್ನು ಇಲ್ಲಿ ನೆನೆಯಬಹುದು.)

ಇಲ್ಲೇ ಇನ್ನೂ ಮುಂದೆ ಸಂವತ್ಸರ ರೂಪವಾದ ಈ ಕಾಲಚಕ್ರವನ್ನೇ ಹೀಗೆ ವರ್ಣಿಸಲಾಗಿದೆ :

## ೧೭. 'ಕಾಲ' ಚಕ್ರಸ್ವರೂಪ

ದ್ವಾದಶ ಪ್ರಧಯಃ ಚಕ್ರಮೇಕಂ ತ್ರೀಣಿ ನಭ್ಯಾನಿ ಕ ಉ
ತಚ್ಚಿಕೇತ ।
ತಸ್ಮಿನ್ ಸಾಕಂ ತ್ರಿಶತಾ ನ ಶಂಕವೋಽರ್ಪಿತಾಃ ಷಷ್ಟಿಃ
ನಚಲಾಚಲಾಸಃ ॥

(I-164-48)

ಈ ಚಕ್ರಕ್ಕೆ ಹನ್ನೆರಡು ಪರಿಧಿಗಳೂ, ಮೂರು ನಾಭಿಗಳೂ ಉಂಟು. "ಈ ರಹಸ್ಯವನ್ನು ತಿಳಿದವನಾರು ?" ಎಂದು ಕೇಳಲಾಗಿದೆ. ಇದರಲ್ಲಿ ಸುತ್ತುತ್ತಿರುವ ಮೂನ್ನೂರ ಅರವತ್ತು ಅವಯವಗಳು ಇವೆ ಎನ್ನುತ್ತದೆ ಮಂತ್ರ. ವರ್ಷದ ಹನ್ನೆರಡು ತಿಂಗಳೂ, ತಿಂಗಳ ೩೦ ದಿನಗಳಂತೆ ಒಟ್ಟು ಚಾಂದ್ರಮಾನದ ೩೬೦ ದಿನಗಳೂ ಚಕ್ರದ ಭಾಗಗಳಂತೆ ವರ್ಣಿತವಾಗಿವೆ.

ಇದೇ ದೀರ್ಘತಮಸ್ಸೆಂಬ ಋಷಿಗಳಿಂದ ದೃಷ್ಟವಾದ ವಿಷ್ಣುಸೂಕ್ತದಲ್ಲಿ ( ಋ. ಸಂ. I--155-6 ) ಈ ಕೆಳಗಿನ ವರ್ಣನೆಯಿದೆ :

ಚತುರ್ಭಿಸ್ಸಾಕಂ ನವತಿಂ ಚ ನಾಮಭಿಃ ಚಕ್ರಂ ನವೃತ್ತಂ
ವ್ಯತೀ॰ಗ್ಂ ರವೀವಿಪತ್

ಬೃಹಚ್ಛರೀರೋ ವಿಮಮಾನ ಋಕ್ವಭಿಃ ಯುವಾಕುಮಾರಃ
ಪ್ರತ್ಯೇತ್ಯಾಹವಂ ।

"(ವಿಷ್ಣುವು ತನ್ನ ಇಷ್ಟ ಬಂದಂತೆ ಪ್ರೇರಣ ವಿಶೇಷದಿಂದ ಸುತ್ತುವಂತೆ ಈ ಚಕ್ರವನ್ನು ತಿರುಗಿಸುತ್ತಾನೆ. ಇದಕ್ಕೆ ೯೪ ಕಾಲಾವಯುವಗಳಿವೆ. ಬೃಹಚ್ಛರೀರಿಯೂ, ದೇವತಿರ್ಯಗಾದಿ ನಾನಾ ರೂಪ ಶರೀರಗಳನ್ನು ಸ್ವರೂಪವನ್ನಾಗಿ ಧರಿಸಿದವನೂ, ನಿತ್ಯಯೌವ್ವನಶಾಲಿಯೂ, ಶಿಶುರೂಪಿಯಲ್ಲದವನೂ ಆದ ಈ ವಿಷ್ಣುವು ನಮ್ಮ ಪ್ರಾರ್ಥನೆಯಂತೆ ಇದೋ ಯಜ್ಞ ಭೂಮಿಗೆ ಬರುತ್ತಿದ್ದಾನೆ."

## ೧೮. ವಿಷ್ಣು ಚಕ್ರಸ್ವರೂಪ

ಇಲ್ಲಿ ಕಾಲಸ್ವರೂಪವನ್ನು ವಿಷ್ಣುಚಕ್ರವೆಂದು ವರ್ಣಿಸಲಾಗಿದೆ. **"ತಂ ಯಥಾ ಶತ್ರೋರುಪರಿ ಪ್ರಕ್ಷೇಪೇಣ ಭ್ರಮಯತಿ ತದ್ವದುಕ್ತ ಸಂಖ್ಯಾನ್ ಕಾಲಾವಯವಾರ್ ಅವೀವಿಪತ್ । ಕಂಪಯತಿ । ಭ್ರಮಯತಿ ||"** ಎಂದು ಸಾಯಣ ಭಾಷ್ಯ. ಶತ್ರುಗಳ ಮೇಲೆ ಪ್ರಯೋಗಿಸಲ್ಪಡುವ ವೇಳೆಯಲ್ಲಿ ವಿಷ್ಣುಚಕ್ರವು ತಿರುಗುವಂತೆ, ಈ ಕಾಲಚಕ್ರವು ತಿರುಗುತ್ತಿದೆಯೆಂದು ಭಾವ. (ಸುದರ್ಶನ ತತ್ತ್ವಕ್ಕೆ ಇಂಥ ಅನೇಕ ರಹಸ್ಯಗಳು ವೇದದಲ್ಲಿ ಪ್ರಮಾಣಗಳಾಗಿವೆ,) ಇಲ್ಲಿ ಈ ೯೪ ಯಾವುವು? "ಚತುರ್ಭಿಸ್ಸಾಕಂ ನವತಿಂ"—ಎಂದರೆ "ಚತುರ್ಭಿಃ ಸಹಿತಾಂ ನವತಿಂ" "ಚತುರಧಿಕ ನವತಿ ಸಂಖ್ಯಾನ್ ಎಂಬಂತೆ, ೯೪ ಎಂದು ಸಾಯಣರು ಅರ್ಥಮಾಡಿ ಒಂದು ವರ್ಷ+೨ ಅಯನಗಳು+೫ ಋತುಗಳು+೧೨ ತಿಂಗಳುಗಳು+೨೪ ಅರ್ಧಮಾಸಗಳು+೩೦ ಅಹೋರಾತ್ರಗಳು+೮ಯಾಮಗಳು+೧೨ ಲಗ್ನಗಳು= ಹೀಗೆ ೯೪ ಕಾಲಾವಯುವಗಳೆಂದು ತೋರಿಸಿದ್ದಾರೆ. ಆದರೆ ಈ ೯೪ ಎಂಬ ಸಂಖ್ಯೆಯು ಬೇರೆಲ್ಲೂ ಹೀಗೆ ಹೇಳಲ್ಪಟ್ಟಿಲ್ಲ. ಚತುರ್ಭಿಸ್ಸಾಕಂ ನವತಿಂ" ಎಂದರೆ ೯೦ರ ನಾಲ್ಕುಗಳು. ಎಂದರೆ ೯೦x೪ ಎಂದು ಗ್ರಹಿಸಿದರೆ ೩೬೦ ದಿನಗಳಾಗಿ ಹಿಂದೆ ವಿವರಿಸಿದಂತೆ ಸಂವತ್ಸರದ ೩೬೦ ಭಾಗಗಳಾಗಿ ಸ್ಪಷ್ಟವಾಗಬಹುದು. ೯೦ನ್ನು "ನಾಲ್ಕರ ಸಮೇತವಾಗಿ" ಎಂದರೆ, "ನಾಲ್ಕಾವರ್ತಿ ಕೂಡಿಸಿ" ಎಂದು ಗ್ರಹಿಸಿದರೆ ೯೦+೯೦+೯೦+೯೦=೩೬೦

ಆಗಿ, ಸ್ಪಷ್ಟವಾಗುವುದು, ಸಮಂಜಸ. ಮೇಲಿನ ಪ್ರಕರಣಗಳಲ್ಲೆಲ್ಲಾ ವರ್ಣಿತನಾದ ಆದಿತ್ಯನು ಕೇವಲ ಸೂರ್ಯನಲ್ಲದೆ ಭಗವಂತನ ತೇಜೋ-ಮೂರ್ತಿಯೆಂದು ವಿವರಿಸಿರುವುದಕ್ಕೆ ಪ್ರಕೃತ ಸೂಕ್ತವು ವಿಷ್ಣುಪಕವಾಗಿದ್ದು ಬೆಂಬಲ ನೀಡುತ್ತದೆ. ಆದರೂ ಗ್ರಿಫಿತ್ ಮಹಾಶಯನು : This Verse is not very intelligible'' ಎಂದು ಬರೆದಿದ್ದಾನೆ. (Tr. Rigveda Vol. I. P. 208.) ಜ್ಯಾಮಿತಿ ಎಂಬ ರೇಖಾ ಗಣಿತ ಶಾಸ್ತ್ರದಲ್ಲಿ ಒಂದು ವೃತ್ತದಲ್ಲಿ ೩೬೦ ಡಿಗ್ರಿಗಳಿರುವುವೆಂದೂ, ಇದನ್ನು ನಾಲ್ಕು ವಿಭಾಗಗಳನ್ನಾಗಿ ಮಾಡಿದರೆ ಒಂದೊಂದರಲ್ಲಿ ೯೦ ಡಿಗ್ರಿಗಳು ಬರುವುವೆಂದೂ ಇದಕ್ಕೆ ಮೀರಿದ ಒಂದು ಯಾವುದೇ ಕೋನದ ಅಳತೆಯಿಲ್ಲವೆಂದೂ, ಪೂರ್ಣತತ್ತ್ವವು ಇದರಲ್ಲಿ ಅಡಕವಾಗಿದೆಯೆಂದೂ ಮುಂತಾಗಿ ಹೇಳುವ ಅತಿ ಸೂಕ್ಷ್ಮ ಗಣಿತ ಶಾಸ್ತ್ರ ಪ್ರಕ್ರಿಯಾ ರಹಸ್ಯಗಳೆಲ್ಲವೂ ಈ ಮಂತ್ರದಲ್ಲಿ ಅಡಗಿರುವಂತಿದೆ. ಇದನ್ನೊಪ್ಪಲು ಇಷ್ಟವಿಲ್ಲದಿದ್ದರೆ, ಮಂತ್ರವು ಕಷ್ಟವಾಗದೆ ಹೇಗೆ ಹೋದೀತು? ಪ್ರಾಚೀನ ಋಷಿಗಳಿಗೆ ಇವೆಲ್ಲ ತಿಳಿದಿರುವ ಸಂಭವವಿಲ್ಲವೆಂದು ದುರಾಗ್ರಹ ಪೀಡಿತರಾದವರಿಗೆ ಈ ಮಂತ್ರದಲ್ಲಾಗಲೀ ಮತ್ತಾವ ಮಂತ್ರದಲ್ಲಾಗಲೀ ತಿಳಿಯಲು ಏನು ತಾನೇ ಇದೆ ?)

## ೧೯. ಕಾಲನೇ 'ಅಡಿಗೆಯವನು'

ಹೀಗೆ ಕಾಲಸ್ವರೂಪಿಯಾಗಿ, "ಸುದರ್ಶನ"ನಾದ ಭಗವಂತನು ಎಲ್ಲವನ್ನೂ ಅಪೂರ್ಣತ್ತ್ವದ ಕಡೆಯಿಂದ ಸರ್ವದಾ ಪೂರ್ಣತ್ತ್ವದ ಕಡೆಗೆ ಒಯ್ಯುತ್ತಿರುವನೆಂಬುದನ್ನೇ ಮಧುವಿದ್ಯೆಯು ಪರ್ಯಾಯವಾಗಿ ತಿಳಿಸಿ ಬೋಧಿಸುತ್ತದೆ. "ವಿಷವನ್ನೂ ಅಮೃತವನ್ನಾಗಿಸುವ"ಮರ್ಮ ಇದೇ ಆಗಿದೆ. ಶ್ರೀ ಮಹಾಭಾರತದ ಯಕ್ಷ ಪ್ರಶ್ನೆಯಲ್ಲಿ (ವನಪರ್ವ 313-14 ರಿಂದ 18 "ಕಾ ಚ ವಾರ್ತಿಕಾ" ಎಂಬ ಪ್ರಶ್ನೆಗೆ ಉತ್ತರವಾಗಿ ಧರ್ಮಪುತ್ರನು.

ಅಸ್ಮಿನ್ ಮಹಾಮೋಹಮಯೇ ಕಟಾಹೇ
ಸೂರ್ಯಾಗ್ನಿನಾ ರಾತ್ರಿದಿವೇಂಧನೇನ ।
ಮಾಸರ್ತುದರ್ವೀ ಪರಿಘಟ್ಟನೇನ
ಭೂತಾನಿ ಕಾಲಃ ಪಚತೀತಿ ವಾರ್ತಾ ॥

ಎಂದು ಉತ್ತರಿಸುತ್ತಾನೆ. "ಜೀವನ ಪ್ರವಾಹವೆಂಬುದೇ ದೊಡ್ಡದಾದ, ಮಹಾಮೋಹಮಯವಾದ ಒಂದು ಬೇಯಿಸುವ ಪಾತ್ರೆ, ಕಡಾಯಿ; ಸೂರ್ಯನೇ ಇದರ ಕೆಳಗಿರುವ ಅಗ್ನಿ; ಹಗಲು ರಾತ್ರಿಗಳೇ ಕಟ್ಟಿಗೆಗಳು; ಮಾಸ, ಋತು ಮುಂತಾದ ಎಲೆಗಳನ್ನು ಒಟ್ಟಿ, ಕಾಲಪುರುಷನು ಸಕಲ ಪ್ರಾಣಿಜಾತವನ್ನೂ ಈ ಪಾತ್ರೆಯಲ್ಲಿ ಅನವರತವೂ ಬೇಯಿಸುತ್ತಿದ್ದಾನೆಂಬುದೇ ಅತಿ ದೊಡ್ಡ ವಾರ್ತೆ." ಪರಿಪಕ್ವತೆ ಬರುವುದೇ, ಹಣ್ಣಾಗುವುದೇ, 'ಮಧು' ಆಗುವುದೇ, ಕಾಲಪುರುಷನಾದ 'ಸೂರ್ಯ'ನಿಂದ ಎಂದು ಭಾವ. "ಕಾಲೋಽಸ್ಮಿ" ಎಂದು ಭಗವದ್ಗೀತೆಯ ವಿಶ್ವರೂಪಾಧ್ಯಾಯದಲ್ಲಿ ತನ್ನನ್ನು ತಾನೇ ಶ್ರೀ ವಾಸುದೇವನು ವರ್ಣಿಸಿಕೊಂಡಿರುವುದು ಇಲ್ಲಿ ಸ್ಮರಣೀಯ.

ಹೀಗೆ ಕಾಲಗತಿಯಿಲ್ಲದಿದ್ದರೆ ಎಲ್ಲರೂ "ಅಪಕ್ವ"ರಾಗಿ, ಅಪರಿಪೂರ್ಣರಾಗಿ, ಜೀವನವು ನಾವೀನ್ಯರಹಿತವಾದ ಮರಳುಗಾಡಾಗುತ್ತಿತ್ತು. ಆದುದರಿಂದ ಕಾಲವು "ವಿನಾಶಕಾರಿ" ಎಂದು ತಿಳಿಯುವುದಕ್ಕಿಂತ "ನೂತನತೆಯನ್ನು ಸೃಜಿಸುವ ಶಕ್ತಿ" ಎಂದು ಪರಿಗಣಿಸುವುದೇ ಸಮಂಜಸವಾದ ವೈದಿಕ ದೃಷ್ಟಿ. ಇದನ್ನೇ ಶ್ರೀ ಮಹಾಭಾರತದಲ್ಲಿ :

"ಚಕ್ರಂ ತದ್ವಾಸುದೇವಸ್ಯ ಮಾಯಯಾ ವರ್ತತೇ
ವಿಭೋ ||" ಎಂದೂ
"ಕಾಲಚಕ್ರಂ ಜಗಚಕ್ರಂ ಯುಗಚಕ್ರಂ ಚ ಕೇಶವಃ |
ಆತ್ಮಯೋಗೇನ ಭಗವಾನ್ ಪರಿವರ್ತಯತೇಽನಿಶಂ ||" ಎಂದೂ
(ಉದ್ಯೋಗ ಪರ್ವ, ೬೮-೨, ೧೨)

ವರ್ಣಿಸಲಾಗಿದೆ. ಇದಿಲ್ಲದಿದ್ದರೆ ಜಗದ್ವ್ಯಾಪಾರವು ಅರ್ಥಶೂನ್ಯವಾಗಿ, ಭಗವಂತನು ಅತಿದೊಡ್ಡ ಅನರ್ಥಕಾರಿಯಾದಂತೆ ಮೂಢರು ಭಾವಿಸುವುದಕ್ಕೆ ಅವಕಾಶವಾಗುತ್ತದೆ. ಜೀನನದ ಪರಿವರ್ತನೆಯು ಗಾಣದ ಎತ್ತಿನಂತೆ ಯಾಂತ್ರಿಕವಾಗಿ ನಡೆಯುವ ಪರಿಭ್ರಮಣೆಯಲ್ಲ; ಇದೂ ನಿಯಮಬದ್ಧವಾಗಿರುವುದೆಂಬುದು ನಿಜ; ಆದರೆ ಇದರಲ್ಲಿ ಏನೊಂದು ನವಿನತೆಯೂ ಉಂಟಾಗದೇ ಬೇಸರ ತರುವುದರಿಂದ ಇಂತಹ ಸುತ್ತಾಟವನ್ನು ಕೇವಲ "ಸಂಸಾರ", "ಸುತ್ತಿದಲ್ಲೇ ಸುತ್ತುವುದು" ಎಂದು ನಮ್ಮ ಪೂರ್ವಿಕರು

ಕರೆದರು, "ಸಂಸಾರವು" ನೀಗಿ ಸಾರ್ಥಕತೆಯು, ಋತಮಯವಾದ, ಜೀವನ ಗತಿಯೇ "ಋತು"ವಾಗುತ್ತದೆ. ಸಂಸಾರಕ್ಕೂ ಋತಕ್ಕೂ ಹೀಗಿರುವ ಅಜ–ಗಜಾಂತರ ವ್ಯತ್ಯಾಸವನ್ನು ಪಾಶ್ಚಾತ್ಯ ತತ್ವಜ್ಞಾನಿಯೊಬ್ಬನು ಹೀಗೆ ವರ್ಣಿಸಿದ್ದಾನೆ :

"Order is not sufficient. What is required, is something much more complex. It is order entering upon novelty; so that the massiveness of order does not degenerate into mere repetition; and so that the novelty is always reflected upon a back-ground of system." (Whitehead in **Process and Reality**, p 515.) ಇದರ ಅರ್ಥ : "ಕ್ರಮಬದ್ಧತೆಯಷ್ಟೇ ಸಾಲದು. ಇಲ್ಲಿ ಅಗತ್ಯವಾದದ್ದು ಇನ್ನಷ್ಟು ಜಟಿಲ್ವಾದದ್ದು. ಕ್ರಮಬದ್ಧತೆಯು ನಾವೀನ್ಯತೆಯೊಳಗೆ ಪ್ರವೇಶವಾಗಬೇಕು: ಏಕೆಂದರೆ ಕ್ರಮಬದ್ಧತೆಯ ದೊಡ್ಡ ಭಾರವು ಕೇವಲ ಪುನರಾವೃತ್ತಿಯ ಮಟ್ಟಕ್ಕೆ ಇಳಿಯಬಾರದು; ಮತ್ತು ನಾವೀನ್ಯತೆಯು ಸದಾ ಸುಬದ್ಧತೆಯ ಹಿನ್ನೆಲೆಯಲ್ಲಿಯೇ ಪ್ರತಿಬಿಂಬವಾಗಬೇಕು" ಎಂದು. ಹೀಗೆ ವೇದೋಕ್ತವಾದ ಋತ ಪ್ರವಾಹದಲ್ಲಿ, ಜೀವನದ ಉತ್ಕರ್ಷಾಂಶವು ನಷ್ಟವಾಗದಂತೆ ಒಂದು ನಿತ್ಯ ನಾವೀನ್ಯವು ಉದಿಸುವುದನ್ನೇ ಮಧುವಿದ್ಯೆಯು ಬೋಧಿಸುವಂತಿದೆ.

## ೨೦. ಉದಯ ಅಸ್ತಮಾನಗಳಿಲ್ಲದ 'ಸೂರ್ಯ' !

ಹಿಂದೆ ಪ್ರಸ್ತಾಪಿಸಲ್ಪಟ್ಟ ಛಾಂದೋಗ್ಯದ ಮಧುವಿದ್ಯೆಯಲ್ಲಿ "**ಸೂರ್ಯನು ಜ್ಞಾನಿಗಳ ಕಣ್ಣಿಗೆ ಉದಯಿಸುವುದೂ ಇಲ್ಲ, ಅಸ್ತಮಿಸುವುದೂ ಇಲ್ಲ**"ವೆಂದು ಹೇಳಿರುವುದು ಬಹು ಮಾರ್ಮಿಕವಾಗಿದೆ. ಇದೇ ವಿಷಯವನ್ನು ಋಗ್ವೇದದ ಐತರೇಯ ಬ್ರಾಹ್ಮಣದಲ್ಲೂ (XIV-6 ) ಹೇಳಿದೆ. ವೇದಗಳೆಲ್ಲವನ್ನೂ ಅಮೃತವೆಂದೂ, ಇವುಗಳೆಲ್ಲದರ ಹೆಪ್ಪುಗಟ್ಟಿದ ಜೇನಿನಗೂಡೇ "ಆದಿತ್ಯ"ನೆಂದೂ ವರ್ಣಿಸಿದ ಉಪನಿಷತ್ತು, ಇವುಗಳ ಐದು ವಿಧವಾದ ರಸವನ್ನು, ಕ್ರಮವಾಗಿ, ವಸು, ರುದ್ರ, ಆದಿತ್ಯ, ಮರುತ, ಸಾಧ್ಯ

ರೆಂಬ ದೇವತೆಗಳು "ಉಪಭೋಗಿಸುವ"ರೆಂದೂ (ತಿನ್ನದೇ, ಕುಡಿಯದೇ, ನೋಡಿದ ಮಾತ್ರದಿಂದಲೇ ತೃಪ್ತಿಹೊಂದುವರೆಂದೂ) ಹೇಳಿದಮೇಲೆ–

"ಅಥ ತತ ಊರ್ಧ್ವ ಉದೇತ್ಯ ನೈವೋದೇತಾ ನಾಸ್ತಮಿತಾ ಏಕಲ ಏವ ಮಧ್ಯೇ ಸ್ಥಾತಾ" (ಛಾಂ. III-II )
—"ಇದರ ಮೇಲೆ ಉದಿಸುವ ಸೂರ್ಯನು, ಉದಿಸುವುದೂ ಇಲ್ಲ, ಅಸ್ತಮಿಸುವುದೂ ಇಲ್ಲ: ನಡುವೆ, ತಾನೇ ತಾನಾಗಿ ನಿಂತಿದ್ದಾನೆ." ಎಂದು ವರ್ಣಿಸಿ, ಇದಕ್ಕೆ ಪ್ರಾಚೀನವಾದ ಒಂದು ಪ್ರಮಾಣವನ್ನು ಕೊಟ್ಟಿದೆ :

ನ ವೈ ತತ್ರ ಸನಿಮ್ಲೋಚ ನೋದಿಯಾಯ ಕದಾಚನ ।
ದೇವಾಃ ತೇನಾಹಂ ಸತ್ಯೇನ ಮಾ ವಿರಾಧಿಷಿ ಬ್ರಹ್ಮಣಾ ॥ಇತಿ॥

"ಎಲೈ ದೇವತೆಗಳೇ ಅಲ್ಲಿ ( ಆದಿತ್ಯಾಂತರ್ಯಾಮಿಯಾದ ಪರಮಾತ್ಮನು ) ಅಸ್ತಮಿಸಲೂ ಇಲ್ಲ, ಉದಿಸಲೂ ಇಲ್ಲ. ಈ (ಯೋಗಿಯ) ಸತ್ಯವಚನಕ್ಕೆ ನಾನು ವಿರೋಧಿಸದಂತೆ ನಡೆಯುವಂತಾಗಲೀ." ಈ ಪ್ರಾರ್ಥನೆಯ ನಂತರ ಬರುವ ಫಲಶ್ರುತಿಯೂ ಮಾರ್ಮಿಕವಾಗಿದೆ : "ಯಾವನು ಈ ಬ್ರಹ್ಮೋಪನಿಷತ್ತನ್ನು ಹೀಗೆ ತಿಳಿಯುವನೋ ಅವನಿಗೆ ಸೂರ್ಯನು ಉದಯಾಸ್ತಮಾನಗಳನ್ನು ಹೊಂದದೆ, ಸರ್ವದಾ ಹಗಲೇ ಆಗಿರುತ್ತದೆ"— "ಸಕೃದ್ದಿವಾ ಹೈವಾಸ್ಮೈಭವತಿ."

ಇದು ವೇದೋಕ್ತವಾದ "ಹಗಲಿನ" ಹಂಬಲ. ವೈಕುಂಠ ಶಬ್ದಕ್ಕೆ ಹಗಲೆಂಬುದೇ ಅರ್ಥ. (ಉತ್ತರಾದಿ ವೈಷ್ಣವ ಪಂಥದವರು ಇದನ್ನೇ "ಗೋಲೋಕ"ವೆಂದೇ ವ್ಯವಹರಿಸುತ್ತಾರೆ.) ಇಲ್ಲೆಲ್ಲಾ ಪ್ರಸ್ತಾಪಿಸಲ್ಪಟ್ಟ ಸೂರ್ಯನ ವಿಷಯಕ್ಕೆ "ಅಸಾವಾದಿತ್ಯೋ ಬ್ರಹ್ಮ" ಎಂಬ ಶ್ರುತಿಯಂತೆ ಪರಮಾತ್ಮನೇ ಎಂದು ಅರ್ಥ. ಈ ಮಧುವಿದ್ಯೆಯ ರಹಸ್ಯವನ್ನು ತಂದೆಯು ಜ್ಯೇಷ್ಠ ಪುತ್ರನಿಗೆ, ಅಥವಾ ಪಾತ್ರನಾದ ಶಿಷ್ಯನಿಗೆ ಮಾತ್ರ ಹೇಳತಕ್ಕದೆಂದೂ, "ನಾನ್ಯಸ್ಮೈ ಕಸ್ಮೈಚನ" ಎಂದೂ, ಒಂದು ವೇಳೆ ಇಡೀ ಭೂಮಂಡಲವನ್ನೇ ಧನಸಮೃದ್ಧವಾದುದನ್ನು ದಾನಕೊಟ್ಟು ಈ ರಹಸ್ಯವನ್ನು ಪ್ರಾರ್ಥಿಸಿದರೂ, ಬೇರೆಯವರಿಗೆ (ಅಪಾತ್ರರಿಗೆ) ಕೊಡದೆ, ಆ ಎಲ್ಲ ನಿಧಿಗಳಿಗಿಂತಲೂ, "ಏತದೇವ ತತೋ ಭೂಯಃ" ಎಂದು, "ಇದು ಅವೆಲ್ಲಕ್ಕಿಂತಲೂ ದೊಡ್ಡ"

ದೆಂದು ತಿಳಿಯಬೇಕೆಂದೂ ಶ್ರುತಿಯು ಆದೇಶ ನೀಡಿದೆ. ಅಂದಮೇಲೆ ಈ ಆದಿತ್ಯನು ಯಾರೆಂಬ ವಿಷಯಕ್ಕೆ ಸಂದೇಹವೇ ಬೇಡವಲ್ಲವೆ? ಪ್ರಶ್ನೋಪನಿಷತ್ತಿನಲ್ಲಿಯೂ (I–8), ಮೈತ್ರಾಯಣೀಯೋಪನಿಷತ್ತಿನಲ್ಲಿಯೂ ಬರುವ ಈ ಮಂತ್ರವು ಪ್ರಶಸ್ತವಾಗಿದೆ :

ವಿಶ್ವರೂಪಂ ಹರಿಣಂ ಜಾತವೇದಸಂ ಪರಾಯಣಂ
ಜ್ಯೋತಿರೇಕಂ ತಪಂತಂ ।
ಸಹಸ್ರರಶ್ಮಿಃ ಶತಧಾ ವರ್ತಮಾನಃ
ಪ್ರಾಣಃ ಪ್ರಜಾನಾಂ ಉದಯತ್ಯೇಷಸೂರ್ಯಃ ॥

"ಸರ್ವಶರೀರನಾದವನೂ, ಎಲ್ಲರಿಗೂ ಜ್ಞಾನವನ್ನು ಅನುಗ್ರಹಿಸತಕ್ಕವನೂ, ಪರಮ ಪ್ರಾಪ್ಯನಾಗಿ ಎಲ್ಲರ ಜೀವನಗತಿಯ ಕೊನೆಯ ಸ್ಥಾನದವನೂ, ಸರ್ವಪ್ರಕಾಶಕನಾಗಿ ತೇಜೋಮಯ ಶರೀರವುಳ್ಳವನೂ, ಅದ್ವಿತೀಯನೆನಿಸಿ ಸಕಲೇತರ ವಿಲಕ್ಷಣನಾಗಿರುವವನೂ, ಜಾಠರಾಗ್ನಿಯೇ ಮುಂತಾದ ನಾನಾರೂಪದ ಅಗ್ನಿಯಾಗಿ ತಪಿಸುವವನೂ, ಶ್ರೀಹರಿಯೆನಿಸಿದವನೂ, ಜಗತ್ತಿನ ಹಿಂದೆ ಅನುವರ್ತಿಸಿ ಯೋಗಕ್ಷೇಮ ವಿಚಾರಕನಾದವನೂ, ಸಕಲ ಜ್ಞಾನರೂಪ ರಶ್ಮಿಗಳುಳ್ಳವನೂ, ಸ್ಥಾವರ ಜಂಗಮಾತ್ಮಕವಾದ ಎಲ್ಲ ಪ್ರಾಣಿಗಳ ಪ್ರಾಣವಾಗಿದ್ದು ಧಾರಕನಾದ, ಸರ್ವಾಂತರ್ಯಾಮಿಯಾದ, ಪ್ರೇರಕನಾದ 'ಸೂರ್ಯನು'— ಇದೋ ದೇವಮನುಷ್ಯಾದಿ ನಾನಾವಿಧ ಶರೀರಗಳಲ್ಲಿ ಅಂತರ್ಯಾಮಿಯಾಗಿ 'ಸುಷುಪ್ತಿ' ದೆಸೆಯಿಂದ 'ಜಾಗ್ರತ'ನಾಗಿ ಉದಿಸುತ್ತಿದ್ದಾನೆ."

ಇಂತಹ ಭಗವಂತನು ಹಿರಣ್ಮಯವಾದ ರಥದಲ್ಲಿ ಹತ್ತಿ ಕುಳಿತು ಸಕಲ ಲೋಕಗಳನ್ನೂ ಕಟಾಕ್ಷಿಸುತ್ತಾ, ಎಲ್ಲೆಲ್ಲಿ 'ಅಂಧಕಾರ'ವೋ ಅಲ್ಲಲ್ಲಿ ಅದನ್ನು ಓಡಿಸುತ್ತಾ, ಸಕಲ ಜೀವಿಗಳನ್ನೂ (ಅಮೃತಸ್ವರೂಪವಾದ ದೇವತೆಗಳನ್ನೂ ಮತ್ತು ಮರಣ ಧರ್ಮವುಳ್ಳ ಮಾನವರನ್ನೂ) ತಮ್ಮ ತಮ್ಮ ಕರ್ಮಾನುಸಾರವಾದ ಗತಿಗಳಲ್ಲಿ ನಿಲ್ಲಿಸಿ, ಸರ್ವದಾ ನಮ್ಮ ಸುತ್ತ ಬರುತ್ತಿರುತ್ತಾನೆ ಎಂದು ಶ್ರುತಿಯು ವರ್ಣಿಸಿದೆ.

ಆ ಕೃಷ್ಣೇನ (ಸತ್ಯೇನ) ರಜಸಾ ವರ್ತಮಾನೋ ನಿವೇಶಯನ್ನಮೃತಂ ಮರ್ತ್ಯಂ ಚ ।

**ಹಿರಣ್ಯಯೇನ ಸವಿತಾ ರಥೇನಾದೇವೊಯಾತಿ ಭುವಿನಾನಿ ಪಶ್ಯನ್ ॥**

ಮಾಧ್ಯಾಹ್ನಿಕ ಸಂಧ್ಯಾಕಾಲದಲ್ಲಿ ಸೂರ್ಯೋಪಸ್ಥಾನಕ್ಕಾಗಿ ಪ್ರಯೋಗಿಸಲ್ಪಡುವ ಈ ಮಂತ್ರದ ದಿವ್ಯಾರ್ಥವು ಬಹಳ ಗೂಢವಾದುದು. ಪರಮಾತ್ಮನು ಸರ್ವ ಸಾಕ್ಷಿಯಾಗಿದ್ದು ನಿಂತಲ್ಲಿ ನಿಲ್ಲದೇ, ಮರ್ತ್ಯ, ಅಮರ್ತ್ಯ ಸ್ವರೂಪಿಗಳಾದ ಸಕಲ ಜೀವಿಗಳ ಕರ್ಮ ಸಾಕ್ಷಿಯಾಗಿದ್ದು ಅವರವರ ಕರ್ಮಗಳಿಗೆ ಉಚಿತವಾದ ಫಲಗಳನ್ನು ಕೊಟ್ಟು ಅವುಗಳನ್ನು ಅವರು ಅನುಭವಿಸುವಂತೆ ನಿಲ್ಲಿಸುವ ವಿಧಾಯಕನೆಂಬುದು ವೈದಿಕ ಪ್ರಜ್ಞೆಯ ಅಡಿಗಲ್ಲು. ಇದನ್ನು ಮರೆತರೆ ಸರ್ವನಾಶ.

**ಪ್ರಾತಃಸಂಧ್ಯೆಯಲ್ಲಿಯೂ ಸೂರ್ಯಶ್ಚ, ಮಾಮನ್ಯುಶ್ಚ, ಮನ್ಯುಪತಯಶ್ಚ........**" ಇತ್ಯಾದಿ ಮಂತ್ರಗಳಲ್ಲಿಯೂ ಮನುಷ್ಯನು ಸಕಲ ಇಂದ್ರಿಯಗಳಿಂದಲೂ, ಮಾಡಿದ ಪಾಪಗಳು ಹೋಗುವುದಕ್ಕಾಗಿ ಈ ಪಾಪಗಳನ್ನು "**ಅಮೃತಯೋನೌ ಸೂರ್ಯೇ ಜ್ಯೋತಿಷಿ ಜುಹೋಮಿ ಸ್ವಾಹಾ**" ಎಂದು ಸೂರ್ಯನಲ್ಲಿಯೇ ಅರ್ಪಿಸಬೇಕೆಂಬ ವಿಧಿಯಿದೆ. ಪರಮಾತ್ಮನು ಸಕಲ ಪಾಪನಿವಾರಕನಾಗಿ, ಮೋಕ್ಷಪ್ರದನಾದುದರಿಂದ ಅವನ ತೇಜಸ್ಸಿನಲ್ಲಿ ನಾವು 'ಮಧು'ವಾಗಿ ಪಕ್ವಗೊಳ್ಳಬೇಕಾಗಿದೆ. ಹಿಂದೆ ವಿವರಿಸಿದ ಮಧು ವಿದ್ಯೆಯ ಹಿನ್ನೆಲೆಯಲ್ಲಿಯೇ ಈ ಮಂತ್ರವು ಬಂದಿರುವುದು ಗಮನೀಯ.

## ೨೧. ಶ್ರೀ ವಿಷ್ಣು ಸಹಸ್ರನಾಮದಲ್ಲಿ 'ಸೂರ್ಯ'

ಶ್ರೀವಿಷ್ಣು ಸಹಸ್ರನಾಮದಲ್ಲಿಯೂ 'ಸೂರ್ಯ' ಪರ್ಯಾಯವಾದ ಅನೇಕ ಶ್ರೀನಾಮಗಳು ವಸ್ತುತಃ ಪರಮಾತ್ಮನನ್ನೇ ಕುರಿತು ಹೇಳುತ್ತವೆಯೆಂದು ಭಾವಿಸಲ್ಪಟ್ಟು ಸೇರಿಸಲ್ಪಟ್ಟಿವೆ: ಸ್ತುತಿಸಲ್ಪಡುವವನಾದುದರಿಂದ ಅರ್ಕನೆಂದೂ (801) (**"ಗಾಯಂತಿ ತ್ವಾ ಗಾಯತ್ರಿಣೋರ್ಚಂತಿ ಅರ್ಕಂ ಅರ್ಕಿಣಃ**" ಎಂಬ ಶ್ರುತಿವಾಕ್ಯವನ್ನು ಇಲ್ಲಿ ನೆನೆಸಬಹುದು: ಋ. ಸಂ. (I-10-1). ತೈ. ಸಂ. I-೬-12; ಇದರರ್ಥ:

"(ನಿನ್ನನ್ನು) ಗಾಯತ್ರೀತತ್ತ್ವಬಲ್ಲವರು ಗಾನರೂಪದಲ್ಲಿಯೂ, ಅರ್ಚನೆಯ ತತ್ತ್ವವನ್ನು ಬಲ್ಲವರು ಮಂತ್ರಗಳಿಂದಲೂ ಅರ್ಕನೆಂದೂ ಅರ್ಚಿಸುವರು.") ಆದಿತ್ಯನೆಂದೂ, (39, 568, 569). ಕಪಿಃ (900). ಅರ್ಚಿಷ್ಮಾನ್ (639). ಗಭಸ್ತಿನೇಮಿಃ(487), ಜ್ಯೋತಿಃ(881), ಜ್ಯೋತಿರ್ಗಣೇಶ್ವರಃ (625). ದೀಪ್ತಮೂರ್ತಿಃ (724). ದ್ಯುತಿಧರಃ (764), ಪ್ರಕಾಶನಃ (275), ಪ್ರಕಾಶಾತ್ಮಾ (277), ಪ್ರತಾಪನಃ (278), ಭಾಸ್ಕರದ್ಯುತಿಃ (283), ರವಿಃ (884), ವೃಷಾಕಪಿಃ (102), ಸಪ್ತವಾಹನಃ (833).— ಇತ್ಯಾದಿ ಅನೇಕ ಗಂಭೀರಾರ್ಥವುಳ್ಳ ಶ್ರೀನಾಮಗಳಲ್ಲಿ ಕೊಂಡಾಡಲಾಗಿದೆ.

## ೨೨. 'ಸೂರ್ಯನ' ರೂಪಾಂತರಗಳು

೧) ಸವಿತೃ ಎಂಬ ಶಬ್ದಕ್ಕೆ ವ್ಯಾಖ್ಯಾನ ಮಾಡುತ್ತಾ ಶ್ರೀಯಾಸ್ಕರುಃ "ಸವಿತಾ, ಸರ್ವಸ್ಯ ಪ್ರಸವಿತಾ", "ಆದಿತ್ಯೋಽಪಿ ಸವಿತಾ ಉಚ್ಯತೇ" (X–31–32) ಎಂದು ಅರ್ಥ ಮಾಡಿದ್ದಾರೆ: "ಎಲ್ಲವನ್ನೂ ಹಡೆಯುವವನು; ಸೂರ್ಯನಿಗೂ (ಆದಿತ್ಯ) ಸವಿತೃವೆಂಬ ಹೆಸರಿದೆ." ಎಂದರ್ಥ. "ಷು" (ಸೂ) ಧಾತುವಿನಿಂದ "ಉತ್ಪಾದಿಸು", "ಆಹುತಿ ಕೊಡು", "ಪ್ರಚೋದಿಸು" ಎಂಬ ಮೂರು ಅರ್ಥಗಳೂ ಈ ಶಬ್ದದಲ್ಲಿ ಅಡಗಿವೆಯೆನ್ನುವದಕ್ಕೆ ವೇದದಲ್ಲಿ ಬಹಳ ಆಧಾರವಿದೆ. "ಪ್ರಜಾಪತಿಃ ಸವಿತಾ ಭೂತ್ವಾ ಪ್ರಜಾ ಅಸೃಜತ" (ತೈ. ಬ್ರಾ. I–6–4) ಎಂಬಲ್ಲಿ ಸೃಷ್ಟಿಕರ್ತನೆಂಬ ಅರ್ಥ "ಸವಿತೃ"ವಿಗೆ ಇದೆ. ನಾರಾಯಣೋಪನಿಷತ್ತಿನಲ್ಲಿ ಹೇಳಿರುವಂತೆ: "ಯತಃ ಪ್ರಸೂತಾ ಜಗತಃ ಪ್ರಸೂತೀ ತೋಯೇನ ಜೀವಾನ್ ವ್ಯಸಸರ್ಜ ಭೂಮ್ಯಾಂ..." ಈ 'ಪ್ರಸೂತಿ' ಕಾರ್ಯವು ಭಗವಂತನ ವಿಶಿಷ್ಟ ಕರ್ತವ್ಯವಾದುದರಿಂದ ಸವಿತೃ ಶಬ್ದವು ಭಗವಂತನ ಸರ್ವಸೃಷ್ಟಿ ಶಕ್ತಿಯನ್ನು ಬಿಂಬಿಸುತ್ತದೆ. ಶ್ರೀಸಾಯಣಾಚಾರ್ಯರು: "ಉದಯಾತ್ ಪೂರ್ವಭಾವೀ ಸವಿತಾ, ಉದಯಾಸ್ತಮಯವರ್ತೀ ಸೂರ್ಯಃ" (V–81–4) ಎಂದು ವಿವರಿಸಿದ್ದಾರೆ. ಉಷಃ ಕಾಲದಲ್ಲಿ ಸೂರ್ಯೋದಯಕ್ಕೆ ಕೊಂಚ ಪೂರ್ವದಲ್ಲಿ ಧ್ಯಾನಿಸಲ್ಪಡುವ ಆದಿತ್ಯನಿಗೇ 'ಸವಿತೃ' ಎಂದು ಹೆಸರು ಎಂದು ಭಾವ. ಋ. ಸಂ I–35–9 ರಲ್ಲಿ 'ಸವಿತೃವು

ಸೂರ್ಯನ ಕಡೆಗೆ ಹೋಗುತ್ತಾನೆ'ಂಬ ಭಾವವನ್ನು ವಿವರಿಸುತ್ತಾ ಶ್ರೀಸಾಯಣರು : "ಯದ್ಯಪಿ ಸವಿತೃಸೂರ್ಯಯೋಃ ಏಕದೇವತಾತ್ವಂ ತಥಾಪಿಮೂರ್ತಿಭೇದೇನ ಗಂತೃಗತವ್ಯಭಾವಃ" ಎಂದು ಬರೆದಿದ್ದಾರೆ: "ಸವಿತೃ–ಸೂರ್ಯರು ಒಂದೇ ದೇವತೆಯಾಗಿದ್ದರೂ, ಮೂರ್ತಿಭೇದದಿಂದ ಒಬ್ಬನ ಬಳಿಗೆ ಇನ್ನೊಬ್ಬನು ಹೋಗತಕ್ಕವನೆಂಬ ಭಾವ" ಎಂದು ಯಾಸ್ಕರೂ : "ತಸ್ಯ ಕಾಲೋ ಯದಾ ದ್ಯೌರಪಹತತಮಸ್ಕಾ, ಆಕೀರ್ಣರಶ್ಮಿರ್ಭವತಿ" ಎಂಬುದಾಗಿ, "ಯಾವಾಗ ದ್ಯುಲೋಕದ ಕತ್ತಲೆಯು ನಿವಾರಿತವಾಗಿರುವುದೋ, ಬೆಳಕಿನ ರಶ್ಮಿಗಳು ಚೆಲ್ಲಲ್ಪಟ್ಟಿರುತ್ತವೆಯೋ "ಅದೇ ಸವಿತೃವು ಗೋಚರಿಸುವ ಕಾಲ, ಎಂದು (ನಿ. XII-12) ಬರೆದಿದ್ದಾರೆ. (ಗಾಯತ್ರೀಮಂತ್ರದಲ್ಲಿ 'ಸೂರ್ಯನ' ಈ ರೂಪವನ್ನೇ ಧ್ಯಾನಿಸುವಂತೆ ಆದೇಶ ನೀಡಿರುವುದರ ಮರ್ಮವನ್ನು ಯೋಗ ಬಲದಿಂದ ತಿಳಿಯಬೇಕು.) "ಅನುಪ್ರಯಾಣ ಮುಷಸೋ ವಿರಾಜತಿ" (ಋ. ಸಂ. V-81-2) ಎಂಬ ಶ್ರುತಿಯಂತೆ, ಉಷೋದೇವಿಯ ಉದಯಾನಂತರ ಅವಳನ್ನನುಸರಿಸಿ, ಜಗತ್ತನ್ನು ಮತ್ತಷ್ಟು ಪ್ರಕಾಶಗೊಳಿಸುತ್ತಾ ಉದಿಸುತ್ತಾನೆ, ಸವಿತೃ.

## ೨೨. "ಹಿರಣ್ಮಯ"

ಇವನನ್ನು ಚಿನ್ನದಂತೆ ಕಣ್ಣುಳ್ಳವನೆಂದೂ, (ಹಿರಣ್ಯಾಕ್ಷ) ಬಂಗಾರದ ಕೈಯುಳ್ಳವನೆಂದೂ (ಹಿರಣ್ಯಪಾಣಿ), ಬಂಗಾರದ ನಾಲಗೆಯುಳ್ಳವನೆಂದೂ, (ಹಿರಣ್ಯಜಿಹ್ವ) ಹಿರಣ್ಯಕೇಶನೆಂದೂ, ಅನೇಕ ಕಡೆಗಳಲ್ಲಿ ಋಙ್ಮಂತ್ರಗಳಲ್ಲಿ ಹೇಳಿರುವುದನ್ನೇ ಉಪನಿಷತ್ತಿನಲ್ಲಿಯೂ "ಯ ಏಷೋಽನ್ತರಾದಿತ್ಯೇ ಹಿರಣ್ಮಯಃ ಪುರುಷೋ ದೃಶ್ಯತೇ ಹಿರಣ್ಯಶ್ಮಶ್ರುಃ ಹಿರಣ್ಯಕೇಶಃ ಆಪ್ರಣಖಾತ್ಸರ್ವ ಏವ ಸುವರ್ಣಃ....", "ಈ ಯಾವ ಸೂರ್ಯನಲ್ಲಿ ಹಿರಣ್ಮಯನಾದ (ಪರಮ) ಪುರುಷನು ಕಾಣಲ್ಪಡುತ್ತಾನೋ, ಅವನು ಚಿನ್ನದ ಮೀಸೆಗಳನ್ನೂ ತಲೆಕೂದಲು ಮೊದಲಾದವನ್ನೂ ಹೊಂದಿದ್ದು ನಖದಿಂದ ಶಿಖೆಯವರೆಗೂ ಸುವರ್ಣಮಯನಾಗಿಯೇ ಇದ್ದಾನೆ...." (ಛಾಂದೋಗ್ಯ 1-7), ಎಂಬುದಾಗಿ ವರ್ಣಿಸಲಾಗಿದೆ. (ಬ್ರಹ್ಮಸೂತ್ರದ "ಅಂತರಧಿಕರಣ"ಕ್ಕೆ

I-1-21 ಇದು ವಿಷಯವಾಕ್ಯವಾಗಿದೆ) ಗಾಯತ್ರೀ ಮಂತ್ರವು "ಸವಿತೃ" ವನ್ನು ಕುರಿತದ್ದಾದುದರಿಂದ, "ಸಾವಿತ್ರೀ" ಎಂದೂ ಜಗತ್ಪ್ರಸಿದ್ಧವಾಗಿದೆ.

೨) ಭಗ: 'ಸವಿತೃ'ವಿಗಿಂತಲೂ (ಉಷಸ್ಸಿಗೂ) ಪೂರ್ವದಲ್ಲಿ ಬರಿಗಣ್ಣಿಗೆ ಕಾಣದ, "ಅದೃಷ್ಟ"ನಾದ ಆದಿತ್ಯರೂಪವನ್ನೇ "ಭಗ" ಎಂದು ವರ್ಣಿಸಲಾಗಿದೆ. ಯಾಸ್ಕರು ನಿರುಕ್ತದಲ್ಲಿ: "ಅಂಧೋ ಭಗ ಇತ್ಯಾಹುಃ। ಅನುತ್ಸ್ಪೃಷ್ಟೋ ನದೃಶ್ಯತೇ 'ಪ್ರಾಶಿತ್ರಮಸ್ಯಾಕ್ಷಿಣೀ ನಿರ್ಜಘಾನ' ಇತಿ ಚ ಬ್ರಾಹ್ಮಣಂ। ಜನಂ ಭಗೋ ಗಚ್ಛತೀತಿ ವಾ ವಿಜ್ಞಾಯತೇ। ಜನಂ ಗಚ್ಛತ್ಯಾದಿತ್ಯ ಉದಯೇನ" "ಕೆಲವರು ಭಗನನ್ನು ಕುರುಡನೆಂದು ಕರೆಯುವರು. ಆದರೆ ಹಾಗಲ್ಲ. ಸೂರ್ಯನೊಡನೆಯೇ ಇರುವುದರಿಂದ ಪ್ರತ್ಯೇಕವಾಗಿ ನೋಡಲಾಗುವುದಿಲ್ಲ. ಕಣ್ಣಿಗೆ ಕಾಣದುದರಿಂದ ಕುರುಡತನ ಆರೋಪಿತವಾಗಿದೆ, ಭಗನೇ ಜನರನ್ನು ಕುರಿತು ಆದಿತ್ಯನೊಡನೆ ಹೋಗುತ್ತಾನೆ" ಎಂದು ವಿವರಿಸಿ ಮತ್ತೊಂದು ಕೌಷೀತಕಬ್ರಾಹ್ಮಣ ವಾಕ್ಯವನ್ನು ಇಲ್ಲಿ ಉದಹರಿಸಿದ್ದಾರೆ. ಪ್ರಾಶಿತ್ರನೆಂಬುವನು ಇವನ ಕಣ್ಣುಗಳನ್ನು ನಾಶ ಮಾಡಿದನಂತೆ!

ಆದರೆ ಋಕ್ಸೂಕ್ತವೊಂದು "ಭಗನ ನೇತ್ರವು ರಶ್ಮಿಗಳಿಂದ ಅಲಂಕೃತವಾಗಿದೆ" ಎಂದು ಹೇಳಿದೆ. ಕುರುಡತನ ಇರುವುದು ಅವನಿಗಲ್ಲ; ಅವನನ್ನು ಕಾಣಬೇಕಾದ ಕಾಲದಲ್ಲಿ ಕಾಣುವುದಕ್ಕೆ ಏಳದೇ ಕಣ್ಣುಮುಚ್ಚಿಕೊಂಡಿರುವವರಿಗೆ. "ಅದೃಷ್ಟ"ನಾದ ಅವನ ದರ್ಶನ ಸಿಗುವುದೇ "ಭಾಗ್ಯ"! ('ಭಗ' ಸಂಬಂಧವಾದದ್ದು.) ಹೀಗೆ ಐಶ್ವರ್ಯವು 'ಭಗ'ನ ಅನುಗ್ರಹವೆಂದೂ, 'ಭಗ'ನ ಅನುಗ್ರವುಳ್ಳವರು "ಭಗವಂತ"ರೆಂದೂ ("ಉತ ಇದಾನೀಂ ಭಗವಂತಸ್ಸ್ಯಾಮ," ಋ. ಸಂ, VII-41-4), ಐಶ್ವರ್ಯವನ್ನು ಕೊಡುವುದರಿಂದ ಭಗನೇ "ಭಗವಂತ"ನೆಂದೂ, ವೈದಿಕಭಾಷೆಯ ವ್ಯವಹಾರ ಏರ್ಪಟ್ಟಿದೆ. ಎಲ್ಲರೂ ಒಟ್ಟಿಗೇ ಐಶ್ವರ್ಯಾದಿ ಸಂಪನ್ನರಾಗದೇ ಇರಲು ಕಾರಣವೇನೆಂದರೆ, ಕೆಲವರು "ಭಗ"ದರ್ಶನ ಮಾಡಿರುವುದೂ, ಉಳಿದವರು ಕುರುಡರಾಗಿರುವುದೂ ಆದುದರಿಂದ "ಐಶ್ವರ್ಯವನ್ನು ಅವರವರ ಯೋಗ್ಯತಾನುಸಾರ ಹಂಚಿಕೊಡುವವನು" ಎಂಬ ಸುಪ್ರಸಿದ್ಧಾರ್ಥದಲ್ಲಿ 'ಭಗ' ಶಬ್ದವು

ಸರ್ವಸಾಮಾನ್ಯವಾಗಿ ವೇದದಲ್ಲಿ ಬಂದಿದೆ. "ರಾಯೋವಿಭಕ್ತಾ" (ಋ.ಸಂ. IV-17-II ), "ಭಗೋ ವಿಭಕ್ತಾ" (V-46-6), "ಜ್ಯೇಷ್ಠಂಚ ರತ್ನಂ ವಿಭಜಂತಂ" ( V-49-2 ) ಇತ್ಯಾದಿ ಉದಾಹರಣೆಗಳಿವೆ. "ಭಗಃ ಭಜನೀಯಃ" ಎಂದೂ ("ಪೂಜೆಗೆ ಯೋಗ್ಯನಾದವನು") ಸಾಯಣರು ಅನೇಕ ಕಡೆ ವ್ಯಾಖ್ಯಾನಿಸಿರುತ್ತಾರೆ. "ಉಷೆ"ಯು ಇವನ 'ಸಹೋದರಿ' ಎಂದು ಪರಿಗಣಿಸಲ್ಪಟ್ಟು. ("ಭಗಸ್ಯ ಸ್ವಸಾ ವರುಣಸ್ಯಜಾಮಿಃ ಉಷಃ",I-123-5;) "ಭಗಿನೀ" ಆಗಿದ್ದಾಳೆ: "ಭಗಿನೀ ಸ್ಥಾನೀಯಾಸಿ" ಎಂದು ಇಲ್ಲಿ ಸಾಯಣ ವ್ಯಾಖ್ಯಾನ ಪಂಕ್ತಿ. 'ಭಗ'ನಿಗೆ ಸೇರಿದುದು, ಎಂಬಂರ್ಥದಲ್ಲಿ 'ಭಾಗ', 'ಭಾಗಧೇಯ' ಎಂಬ ಶಬ್ದಗಳೂ ಬಂದಿವೆ. ಇಂತಹ ಭಗನನ್ನು ಕುರಿತು :

ತಂ ತ್ವಾ ಭಗ ಪ್ರವಿಶಾನಿ ಸ್ವಾಹಾ ।
ಸ ಮಾ ಭಗ ಪ್ರವಿಶ ಸ್ವಾಹಾ । (ತೈ. ಉ. I.4 )

"ಹೇ ಭಜನೀಯನೇ, ನಾನು ನಿನ್ನನ್ನು ಸೇರುವಂತಾಗಲಿ; ನೀನೂ ನನ್ನಲ್ಲಿ ಪ್ರವೇಶಿಸುವಂತಾಗಲಿ" ಎಂದು ಮಾಡಿರುವ ಪ್ರಾರ್ಥನೆಯು ಶ್ರೇಯೋರೂಪವಾದ ಮೋಕ್ಷಕ್ಕಾಗಿ ಮಾಡಿದ ಪ್ರಾರ್ಥನೆಯಷ್ಟೆ! ಭಗ ಸಂಬಂಧವಾದ ಈ ಪ್ರಾರ್ಥನೆಯೇ 'ಭಜನೆ'. ಇವರ ಭಾವವೇ "ಭಕ್ತಿ". ಭಕ್ತಿ ಎಂದರೆ "ಒಡೆಯುವುದು" ಎಂದು ಕೆಲವರು ಕುಚೋದ್ಯ ಮಾಡಿದರೂ ಸಹ, ಈ ಭೇದವು 'ಭಗ'ನ ಅನುಗ್ರಹ ತಾರತಮ್ಯಕ್ಕೆ ಮೂಲವಾದ ದೇವಾಸುರ 'ವಿಭಾಗ'ದ ಪರಿಜ್ಞಾನದ ಮೂಲಕ ಬರುವ ಪರದೇವತೆಯ ಹಿರಿಮೆಯ ಅರಿವು. 'ಭಗ'ನೇ ವಿಭಜಿಸುವವನಾದ ಮೇಲೆ, ಸದ್-ಅಸದ್ ವಿವೇಕದಿಂದ ನಾವೂ ಒಳ್ಳೆಯ ಕೆಟ್ಟವಸ್ತುಗಳನ್ನು ವಿಭಜಿಸಿ 'ಒಡೆಯುವುದು' ಹೇಗೆ ನಿವಾರ್ಯವಾದೀತು ? 'ಭಗ'ನಲ್ಲದುದನ್ನು ಬಿಟ್ಟು 'ಭಗ'ನನ್ನೇ ಆರಿಸುವುದರಲ್ಲಿರುವ ಭಾವವೇ 'ಭಕ್ತಿ' ಎನಿಸುವುದು.

ಈ ಭಾವಗಳೆಲ್ಲ ವೈದಿಕವೇ ಆಗಿದ್ದು "ಭಾಗವತ" ಧರ್ಮದಲ್ಲಿ, ಶ್ರೀಪಾಂಚರಾತ್ರಾದಿ ಶಾಸ್ತ್ರದಲ್ಲಿ ವಿವೃತವಾಗಿ ಪ್ರಸಿದ್ಧವಾಗಿವೆ; ಭಗವದ್ಗೀತೆ, ಭಾಗವತ, ಭಾರತ ಮುಂತಾದ ಸಕಲ ಸನಾತನಧರ್ಮ ಗ್ರಂಥಗಳೂ ಇವನ್ನೇ ಎತ್ತಿ ಹಿಡಿಯುತ್ತಿವೆಯಾದುದರಿಂದ "ಭಾಗವತ ಧರ್ಮವು ಅವೈದಿಕ ಮತ

ವಾಗಿ ಉದಿಸಿತು" ಎಂದೂ, "ಇದಕ್ಕೂ ವೇದಾಂತಕ್ಕೂ ವಸ್ತುತಃ ಇಲ್ಲದ ಸಂಬಂಧವು ಹೇಗೋ ಏರ್ಪಟ್ಟಿ"ತೆಂದೂ ಕೆಲವು ಅಜ್ಞ ಪಾಶ್ಚಾತ್ಯ ಪೌರಾತ್ಯ ಪಂಡಿತರು ಅಪಪ್ರಚಾರ ನಡೆಸುತ್ತಿರುವುದು ಶೋಚನೀಯ.

ಬ್ರಹ್ಮಸೂತ್ರದ ಶ್ರೀಪಂಚರಾತ್ರಾಧಿಕರಣದ **"ಉತ್ಪತ್ತ್ಯಸಂಭವಾತ್"** (II-2-40) ಎಂಬ ಸೂತ್ರಭಾಷ್ಯದಲ್ಲಿ ಶ್ರೀ ಶಂಕರಭಗವತ್ಪಾದರು, **"ತತ್ರ ಭಾಗವತಾ ಮನ್ಯಂತೇ"** ಎಂದು ಆರಂಭಿಸಿ, ಭಾಗವತ ಧರ್ಮದ ಪ್ರಧಾನ ಪ್ರಮೇಯವು ಮೂರು ಅಂಶಗಳನ್ನುಳ್ಳದ್ದೆಂದೂ ಇವುಗಳಲ್ಲಿ ಎರಡು ತಮಗೆ ಪೂರ್ಣ ಒಪ್ಪಿಗೆಯಾಗಿವೆಯೆಂದೂ ಬರೆದಿದ್ದಾರೆ :

**"ತತ್ರ ಯತ್ತಾವದುಚ್ಯತೆ ಯೋಽಸೌ ನಾರಾಯಣಃ ಪ್ರಸಿದ್ಧಃ ಸರ್ವಾತ್ಮಾ....ಇತಿ ತನ್ನ ನಿರಾಕ್ರಿಯತೇ"**, "ನಾರಾಯಣನೇ ಪ್ರಸಿದ್ಧನಾದ ಸರ್ವಾತ್ಮನೆಂಬುದೇನು ಅಲ್ಲಿ ಹೇಳಲ್ಪಟ್ಟಿದೆಯೋ ಅದನ್ನು ನಾವು ನಿರಾಕರಿಸುವುದಿಲ್ಲ"—(೧)

**"ಯದಪಿತಸ್ಯ ಭಗವತೋಽಭಿಗಮನಾದಿ ಲಕ್ಷಣಂ ಆರಾಧನಂ ಅಜಸ್ರಂ ಅನನ್ಯಚಿತ್ತತಯಾ ಅಭಿಪ್ರೇಯತೇ, ತದಪಿ ನ ಪ್ರತಿಷಿಧ್ಯತೇ, ಶ್ರುತಿಸ್ಮೃತ್ಯೋಃ ಈಶ್ವರಪ್ರಣಿಧಾನಸ್ಯ ಪ್ರಸಿದ್ಧತ್ವಾತ್ ॥"**— ಆ ಭಗವಂತನನ್ನು ಕುರಿತ, ಅಭಿಗಮನಾದಿ ಲಕ್ಷಣವುಳ್ಳ ಆರಾಧನೆಯು ಅನವರತವೂ ಅನನ್ಯ ಚಿತ್ತದಿಂದ ಆಗಬೇಕೆಂಬುದೇನು ಅಲ್ಲಿ ಅಭಿಪ್ರಾಯವಾಗಿದೆಯೋ, ಅದನ್ನೂ ಪ್ರತಿಷೇಧಿಸುವುದಿಲ್ಲ— ಏಕೆಂದರೆ ಶ್ರುತಿಸ್ಮೃತಿಗಳಲ್ಲಿ ಈಶ್ವರ ಸೇವೆಯು ಪ್ರಸಿದ್ಧವಾಗಿರುವುದರಿಂದ ॥" ಎಂದು (೨). ಭಗ ಸಂಬಂಧದ ಭಾಗವತ ಮತದ ಹೃದಯವನ್ನೇ ಹೃದಯಪೂರ್ವಕವಾಗಿ ಒಪ್ಪಿ ಬರೆದಿರುವುದು ಗಮನೀಯ. ವಾಸುದೇವನಿಂದ ಸಂಕರ್ಷಣಾದಿಗಳು ಯಾವ ಅರ್ಥದಲ್ಲಿ "ಉತ್ಪತ್ತಿ"ಯಾದರೆಂಬ ಅನತಿ ಮುಖ್ಯ ವಿಷಯದಲ್ಲಿ ಮಾತ್ರ ಮತ ಭೇದವಾದುದರಿಂದ, ಭಾಗವತ ಮತವು ಒಟ್ಟಿನಲ್ಲಿ ಭಗವತ್ಪಾದರಿಗೆ ಒಪ್ಪಿಗೆಯಾಗಿರುವುದಲ್ಲದೆ, "ಶ್ರುತಿಸ್ಮೃತಿಪ್ರಸಿದ್ಧ"ವೆಂದು ಅವರೇ ಅಪ್ಪಣೆ ಕೊಡಿಸಿರುವುದು ಗಮನೀಯ.

ಹೀಗೆ "ವೇದಕಾಲದಲ್ಲಿ 'ಭಗ'ನು ಸಣ್ಣದೇವತೆಯಾಗಿದ್ದ"ನೆಂದೂ, "ಭಾಗವತಮತವು ಇವನನ್ನು ದೊಡ್ಡವನನ್ನಾಗಿಸಿತು" ಎಂಬ 'ಸಂಶೋಧಕ'ರ

ಮಾತಿಗೆ ಅರ್ಥವಿಲ್ಲ. ಭಗವದಂಶದಲ್ಲಿ ಕಾರ್ಯಪ್ರಧಾನ ಬಲದಿಂದ ದೇವತಾ ತಾರತಮ್ಯವೇ ವಿನಾ (functional), ಸೂಕ್ತ ಸಂಖ್ಯೆಗಳ ಬಲದಿಂದ ಈ ವಿಷಯವನ್ನು ನಿರ್ಣಯಿಸುವಂತಿಲ್ಲ ಎಂಬ ವಿಷಯವನ್ನು ನಮ್ಮ "ವೇದ ಸಂಸ್ಕೃತಿಯ ಪರಿಚಯ", ಸಂ. ೧ ರಲ್ಲಿ (ಪುಟ ೮೯–೯೦ ರಲ್ಲಿ ವಿಶೇಷ ವಾಗಿ) ವಿವರಿಸಲಾಗಿದೆ. ಹೀಗೆ 'ಪರಮ ಐಶ್ವರ್ಯ ಸಂಪನ್ನ'ನಾಗಿ, 'ಭಕ್ತರ ಯೋಗ್ಯತಾನುಸಾರ ಫಲಗಳನ್ನು ವಿಭಜಿಸಿ ಕೊಡುವ' ಭಗದೇವನು ವೇದದರ್ಶನದ ಹೃದಯವಾಗಿದ್ದಾನೆ. ವಸಿಷ್ಠ ಋಷಿಗಳಿಂದ ದೃಷ್ಟವಾದ "ಪ್ರಾತರಗ್ನಿಂ..." ಎಂದು ತೊಡಗುವ ( ಋ.ಸಂ. VII-41. ) ಸುಪ್ರಸಿದ್ಧ ಸೂಕ್ತವು 'ಭಗ'ನನ್ನು ಮನಕರಗುವಂತೆ ಪ್ರಾರ್ಥಿಸುತ್ತದೆ.

**ಪ್ರಾತರ್ಜಿತಂ ಭಗಮುಗ್ರಂ ಹುವೇಮ ವಯಂ**
**ಪುತ್ರಮದಿತೇರ್ಯೋವಿಧರ್ತಾ ।**
**ಆಧ್ರಶ್ಚಿದ್ಯಂಮನ್ಯಮಾನಃ ತುರಶ್ಚಿದ್ರಾಜಾ ಚಿದ್ಯಂ**
**ಭಗಂ ಭಕ್ಷೀತ್ಯಾಹ ॥೨॥**

"ಯಾವನೊಬ್ಬ ಸ್ತೋತೃವು ದರಿದ್ರನಾಗಲೀ, ಐಶ್ವರ್ಯಸಂಪನ್ನ ನಾಗಲೀ, ಹೇಗಿದ್ದರೂ ಸಹ, ಭಗನನ್ನೇ ಕುರಿತು (ಅನನ್ಯವಾಗಿ) "ಧನವನ್ನು ವಿಭಜಿಸಿ ನನ್ನದನ್ನು ನನಗೆ ಕೊಡು" ಎಂದು ಪ್ರಾರ್ಥಿಸುವನೋ, ಆ ಸಕಲ ಜಗದ್ಧಾರಕನಾದ, ಪ್ರಾತಃಕಾಲದಲ್ಲಿ ಜಯಶೀಲನಾದ, ಬಲಿಷ್ಠನಾದ, ಅದಿತಿಪುತ್ರನಾದ, ಭಗನನ್ನು, ಈ ಪ್ರಾತಃಕಾಲದಲ್ಲಿ ಕರೆಯುತ್ತೇವೆ."

ಭಗನು ಒಂದು 'ಪಂಗಡ'ದವರ ದೇವತೆಯಲ್ಲವೆಂಬುದು ಇಲ್ಲಿ ಕಣ್ಣಿದ್ದ ವರಿಗೆ ಕಾಣುವುದು; ಎಲ್ಲರ ದೇವರ ಇವನು. ಮುಂದಿನ ಮಂತ್ರದಲ್ಲಿ "ಪ್ರಣೇತಃ" 'ಮಾರ್ಗದರ್ಶಕ'ನೆಂದೂ, "ಸತ್ಯರಾಧಃ", 'ಸತ್ಯವನ್ನೇ ಧನ ವನ್ನಾಗಿ ಉಳ್ಳವ'ನೆಂದೂ. ಕೊಂಡಾಡಿದೆ. ಇದರ ಮುಂದೆ :

"ಭಗ ಏವ ಭಗವಾನ್ ಅಸ್ತು" ಎಂದೇ ಪ್ರಾರ್ಥಿಸಲಾಗಿದೆ. "ಭಗನ ಸರ್ವೈಶ್ವರ್ಯವು ಎಂದೆಂದೂ ಭಗನಿಗೇ ಸೇರಿ, ಅವನು ಸದಾ ಭಗವಂತ ನಾಗಿರಲಿ" ಎಂದು ಅರ್ಥ. ಇದು ಭಗವಂತನಿಗೆ ಮಂಗಳಾ ಶಾಸನವಾಗಿದೆ. "ಭಗವದೈಶ್ವರ್ಯವನ್ನು ಅಪಹರಿಸಲು ಬಯಸುವ ಅಸುರರ ಇಷ್ಟಾರ್ಥವು

ಕೈಗೂಡದೇ, ಪರಮಾತ್ಮನು ಎಂದೆಂದೂ ಸಂಪನ್ನನಾಗಿರಲಿ, ಅವನ ನಿತ್ಯಶ್ರೀಯು ನಿತ್ಯಮಂಗಳವಾಗಿರಲಿ" ಎಂದು ಭಾವ. ಏಕೆಂದರೆ, ಹೀಗಾದಾಗ ಮಾತ್ರ :

"ತೇನ ವಯಂ ಭಗವಂತಃ ಸ್ಯಾಮ"

"ನಾವೂ ಅವನ ಕಟಾಕ್ಷದಿಂದ ಭಕ್ತಿಸಂಪನ್ನರಾಗಿಯೂ, ಮೋಕ್ಷಸಂಪನ್ನರಾಗಿಯೂ, ಪೂಜೆಗೆ ಅರ್ಹರಾಗಿ 'ಭಗವತ್' ಶಬ್ದವಾಚ್ಯರಾಗುತ್ತೇವೆ".

ತಿರುಪತಿ, ಶ್ರೀರಂಗ ಮುಂತಾದ ದಿವ್ಯಕ್ಷೇತ್ರಗಳಲ್ಲಿ ಭಗವದ್ದರ್ಶನ ಮಾಡಿ ಆನಂದಪುಲಕಿತರಾದವರಿಗೆ, ಭಗವಂತನೇ ಸರ್ವರಕ್ಷಕನೆಂಬ ಜ್ಞಾನದೆಶೆಯ ಭಾವವು ಪ್ರೇಮದೆಶೆಯಲ್ಲಿ ವಿಸ್ಮೃತವಾಗಿ, ಅವನೇ ರಕ್ಷಣೀಯ ವಸ್ತುವಾಗಿ, "ಈ ನಿತ್ಯರೂಪಶ್ರೀಯು ಹೀಗೇ ಇರಲಿ" ಎಂಬ ಭಕ್ತಿಯ ಉದ್ಗಾರಗಳು ಬರುವುದು ಹೇಗೆ ಸ್ವಾಭಾವಿಕವೋ ಹಾಗೆ, ಇಲ್ಲೂ ಭಕ್ತಿಪರವಶವಾದ ಸೂಕ್ತಿಯಿದು. ಇಂತಹ ಭಾವ ಪರವಶತೆಯಿಂದ ಶ್ರೀಮದ್ರಾಮಾಯಣದಲ್ಲಿ ಸೀತಾದೇವಿಯೂ ಭಗವಂತನಿಗೆ ಮಂಗಳಾ ಶಾಸನ ಮಾಡುತ್ತಾ ಬಾಗಿಲತನಕ ಬಂದಳೆಂದೂ, ('ಮಂಗಳಾನ್ಯಭಿದಧ್ಯುಷೀ', ಅಯೋಧ್ಯಾಕಾಂಡ, 16–21) ಕೌಸಲ್ಯೆಯೂ ವನವಾಸ ಪ್ರಯಾಣ ಕಾಲದಲ್ಲಿ ಹೀಗೆಯೇ "ಯನ್ಮಂಗಳಂ ಸಹಸ್ರಾಕ್ಷೇ... ತತ್ತೇ ಭವತು ಮಂಗಳಂ" (ಅದೇ, 25–32 ರಿಂದ 36 ) ಎಂದು ಪ್ರಾರ್ಥಿಸಿದಳೆಂದೂ, ಮುಂದೆ ಅರಣ್ಯಕಾಂಡದಲ್ಲಿ ಭಗವಂತನನ್ನು ಸ್ವರಕ್ಷಣೆಗಾಗಿಯೇ ಶರಣುಬಂದ ಋಷಿಗಳೂ ಸಹ, ದರ್ಶಿಸಿ, ಧನ್ಯರಾಗಿ :

ರೂಪಸಂಹನನಂ ಲಕ್ಷ್ಮೀಂ ಸೌಕುಮಾರ್ಯಂ ಸುವೇಷತಾಂ ।
ದದೃಶುಃ ವಿಸ್ಮಿತಾಕಾರಾಃ ರಾಮಸ್ಯ ವನವಾಸಿನಃ ॥(1–13)

ಭಗವಂತನ ರೂಪಸಂಪತ್ತು, ಶ್ರೀವಿಶಿಷ್ಟತ್ವ, ಸೌಕುಮಾರ್ಯಾದಿಗಳಿಂದ ಮೋಹಗೊಂಡು, ಇಂತಹ ರೂಪಕ್ಕೆ ಚ್ಯುತಿಬಾರದಿರಲೆಂದು ಪ್ರೇಮವಿಹ್ವಲರಾಗಿ ರಕ್ಷಕ ಭಾವದಿಂದ

"ಮಂಗಳಾನಿ ಪ್ರಯುಂಜಾನಾಃ ಪ್ರತ್ಯಗೃಹ್ಣನ್ ದೃಢವ್ರತಾಃ"
(ಅದೇ)

ತಾವೇ ಮಂಗಳಾಶಾಸನೆ ಮಾಡುತ್ತಾ ಎದುರುಗೊಂಡರೆಂದೂ ವರ್ಣಿತ ವಾಗಿದೆ, ಶ್ರೀ ಭಾಗವತದಲ್ಲಿಯೂ ದಶಮಸ್ಕಂಧದ ಪೂತನಾವಧ ಘಟ್ಟದಲ್ಲಿ, ಪ್ರೇಮ ವಿಹ್ವಲೆಯಾದ ಯಶೋದೆಯು :

"ರಕ್ಷತು ತ್ವಾಂ ಅಶೇಷಾಣಾಂ..." ಇತ್ಯಾದಿ ವಾಕ್ಯಗಳಲ್ಲಿ ಇದೇ ರೀತಿ ಮಂಗಳಾಶಾಸನ ಮಾಡಿದ ಪ್ರಸ್ತಾಪವಿದೆ. ಹೀಗೆ ಈ ಪರಂಪರೆಯು ವೇದ ದಲ್ಲೇ ಉದಿಸಿರುವುದಲ್ಲದೇ, 'ಭಗ' ಸಂಬಂಧಿಯಾಗೀಯೇ ಬಂದಿರುವುದ ರಿಂದ, ಈ ಸಂಪ್ರದಾಯದ ಪ್ರಾಚೀನತೆಯನ್ನು ಮನಗಾಣಬೇಕು. "ದೇವರು ಚೆನ್ನಾಗಿದ್ದರೆ ನಮ್ಮದೂ ಬದುಕು " ಎಂಬುವ ಭಾವ, ನಮ್ಮ ಈ ಪರಮ ನಾಸ್ತಿಕಕಾಲದಲ್ಲಿ ಸಕಲ ಆಸ್ತಿಕರ ಹೃದಯಪೂರ್ವಕವಾದ ಪ್ರಾರ್ಥನೆಯೇ ಆಗಿದೆ. ದೇವಾಲಯಗಳೂ, ವೈದಿಕರೂ, ದೈವಭಕ್ತರೂ ಅನಾಥರಾಗು ತ್ತಿರುವ ಈ ಕಾಲದಂತೆಯೇ, ಹಿಂದೆಯೂ ಇಂಥ ಪ್ರಸಂಗಗಳು ಬಂದಿದ್ದಾಗ ಲೆಲ್ಲಾ ;

ಭಗ ಏವ ಭಗವಾನ್ ಅಸ್ತು"

ಎಂಬುದೇ ಪ್ರಾರ್ಥನೆಯಾಗಿದ್ದಿರಲು ಸಾಕು. "ಮನೆಗಿಂತ ಗುಡಿಯೇ ಭದ್ರ" ಎಂದು ತೆಲುಗಿನಲ್ಲಿ ಒಂದು ಗಾದೆ. ಎಲ್ಲವೂ ಅಭದ್ರವಾದ ಈ ಕಾಲದಲ್ಲಿ "ದೇವರು ಮೊದಲು ಭದ್ರವಾಗಿರಲಿ" ಎಂಬ ಮಾತಿಗೆ ವೇದಾಂತಾರ್ಥವು ಏನೇ ಇದ್ದರೂ, ಮಾನವನ ಅಸಹಾಯಕ ಭಾವವೂ, ದೇವರಲ್ಲಿ ನಂಬಿಕೆಯ ಆಳವೂ ವ್ಯಕ್ತಪಡುತ್ತದೆ. ಇದೇ ಋಗ್ವೇದ ಖಿಲವಾದ "ಜಿತಂತೇ" ಸ್ತೋತ್ರವು ಭಗವಂತನನ್ನು ವಿಜಯಶಾಲಿಯಾಗಲೆಂದು ಪ್ರಾರ್ಥಿಸಿರುವು ದಲ್ಲದೆ, ಭಾಗವತ ಸಂಪ್ರದಾಯದ ಅತಿ ಪ್ರಾಚೀನ ಸ್ತೋತ್ರವಾಗಿದೆ.

೩. ಮಿತ್ರ : "ಪ್ರಕರ್ಷೇಣ ಸರ್ವೈಃ ಮೀಯತೇ. ಜ್ಞಾಯತೇ, ತಥಾ ಸರ್ವಾನ್ ವೃಷ್ಟಿ ಪ್ರದಾನೇನ ತ್ರಾಯತೇ—ಇತಿವಾ ಮಿತ್ರಃ ಸೂರ್ಯಃ" ಎಂದು ಸಾಯಣರು ಅರ್ಥ ಮಾಡಿದ್ದಾರೆ (ಋ. ಸಂ, III-59-1 ) : "ಚೆನ್ನಾಗಿ ಎಲ್ಲರಿಂದಲೂ ತಿಳಿಯಲ್ಪಡುವವನು, ಮತ್ತು ಮಳೆಯನ್ನು

ಕೊಟ್ಟು ಎಲ್ಲರನ್ನೂ **ಕಾಪಾಡುವವನು**" ಎಂದು ಸೂರ್ಯನೇ **ಮಿತ್ರ** ನೆನಿಸುತ್ತಾನೆಂದು ಭಾವ.

'ಮಿತ್ರ'ನ ಪ್ರಧಾನ ಕಾರ್ಯವೆಂದರೆ **ಮನುಷ್ಯರನ್ನು ಒಟ್ಟು ಗೂಡಿಸುವುದು** ಎಂದು ಮಿತ್ರ ವಿಷಯಕ ಸೂಕ್ತಗಳು ಹೇಳುತ್ತವೆ:

**"ಮಿತ್ರೋ ಜನಾ್ ಯಾತಯತಿ ಬ್ರುವಾಣೋ (ಪ್ರಜಾನ್)...."** ಋ. ಸಂ. III-59-1) ಮತ್ತು ತೈ. ಸಂ. (III-41-1). 'ಯಾತಯತಿ' ಎಂದರೆ 'ಕೃಷಿಯೇ ಮೊದಲಾದ ಕರ್ಮಗಳಲ್ಲಿ ಪ್ರೇರಿಸುತ್ತಾನೆ' ಎಂದು ಸಾಯಣ ಭಾಷ್ಯ. (ಈ ಮಂತ್ರವು ಪ್ರಾತಸ್ಸಂಧ್ಯೆಯಲ್ಲಿ ಸೂರ್ಯೋಪ ಸ್ಥಾನಕ್ಕೆ ವಿನಿಯೋಗಿಸಲ್ಪಡುತ್ತದೆ. **"ಜನಂ ಚ ಮಿತ್ರೋ ಯತತಿ** ಬ್ರುವಾಣೋ..." (VII-36-2) "ಯಾತಯಜ್ಜನ" ವೆಂದರೆ, 'ಕೂಡಿಸಿ ಹಾಕು' ಎಂಬರ್ಥದಲ್ಲಿ ಮಿತ್ರನು ಮೈತ್ರವನ್ನು ಅನುಗ್ರಹಿಸುವನೆಂಬುದೂ ಉಂಟು. ಯಾಸ್ಕರು (ನಿ. X-22) "ಮಿತ್ರೋ ಜನಾನ್ ಆಯಾತ ಯತಿ" ಎಂದು ಗ್ರಹಿಸಿ, "ಜನರನ್ನು ಸನ್ಮಾರ್ಗದಲ್ಲಿ ಕರೆದೊಯ್ಯುತ್ತಾನೆ" ಎಂದರ್ಥ ಮಾಡಿದ್ದಾರೆ.

ಸವಿತೃವು ಹಗಲಿಗೆ **ಮುಂಚೆ** ಧ್ಯಾನಿಸಲ್ಪಡುವ 'ಸೂರ್ಯ'ನ ಅಂಶ ವಾದರೆ, ಮಿತ್ರನು ಹಗಲಿನಲ್ಲಿಯೇ ಧ್ಯಾನಿಸಲ್ಪಡತಕ್ಕವನು. ಮಿತ್ರನು ಪೃಥಿವೀ ದ್ಯುಲೋಕಗಳೆರಡನ್ನೂ ಧರಿಸಿದ್ದಾನೆಂದೂ, (ಮಿತ್ರೋ ದಾಧಾರ ಪೃಥಿವೀಂ ಉತ ದ್ಯಾಂ), ಲೋಕದಲ್ಲಿರುವ, ಕಾರ್ಯೋನ್ಮುಖರಾದ, ಕಸ್ನ ಪ್ರಜೆಗಳನ್ನು "ಅನಿಮಿಷಾ ಅಭಿಚಷ್ಟೇ" — "ಕಣ್ಣು ಮಿಟುಕದೇ" ಅನುಗ್ರಹ ದೃಷ್ಟಿಯಿಂದ ಸರ್ವತಃ ನೋಡುವ"ನೆಂದೂ ಮೇಲಿನ ಮಿತ್ರ ಸೂಕ್ತವು ತಿಳಿಸುತ್ತದೆ. ಕಣ್ಣು ಮಿಟುಕಿದರೆ, ಅಷ್ಟು ಮಾತ್ರ ಕಾಲವಾದರೂ ತನ್ನ ಅನುಗ್ರಹವು ಲೋಕಕ್ಕೆ ಇಲ್ಲದಂತಾಗುವುದೆಂದೂ, ಇದನ್ನು ತಪ್ಪಿಸಲು ತೆರೆದ ಕಣ್ಣುಳ್ಳವನಾಗಿದ್ದಾನೆಂದೂ ಭಾವ. ಇದನ್ನು ಸ್ಮರಿಸಿಯೇ ಋಷಿ ಗಳನ್ನು ಸಂದರ್ಶನ ಮಾಡುವ ಪ್ರಸಂಗಗಳಲ್ಲಿ ಶ್ರೀರಾಮ, ಭರತ ಮುಂತಾ ದವರು: "ಮೈತ್ರೇಣೇಕ್ಷಸ್ವ ಚಕ್ಷುಷಾ" (ಅಯೋ 92-7) ಇತ್ಯಾದಿ ಯಾಗಿ ಪ್ರಾರ್ಥಿಸುವ ಸ್ವಾರಸ್ಯವನ್ನು ಗಮನಿಸಬೇಕು. ಶ್ರೀರಾಮನಾದರೂ

ವಿಭೀಷಣನನ್ನು ಅನುಗ್ರಹ ದೃಷ್ಟಿಯಿಂದ ನೋಡುವಾಗ "ಚಕ್ಷುರ್ಭ್ಯಾಂ ಪ್ರಪಿಬನ್ನಿವ"— "ಕಣ್ಣುಗಳಿಂದಲೇ ಪಾನಮಾಡುವಂತೆ" ಇತ್ಯಾದಿ ವರ್ಣನೆಗಳಿರುವುದರಿಂದ, ಮಿತ್ರನ ಕಾರುಣ್ಯವೂ ಲೋಕಾನುಗ್ರಹ ಸಂಕಲ್ಪವೂ ಅವನ ಅನಿಮೇಷ ಕಟಾಕ್ಷದಲ್ಲಿರುವುದನ್ನು ವೇದವು ಮಾರ್ಮಿಕವಾಗಿ ತಿಳಿಸುತ್ತದೆ.) ಇಂತಹವನ ಪ್ರೇಮಕ್ಕೆ ಪಾತ್ರನಾದವನಿಗೆ ಅನ್ನ ಸಮೃದ್ಧಿಯುಂಟಾಗಿ ಯಾರಿಂದಲೂ, "ನ ಹನ್ಯತೇ ನ ಜೀಯತೇ", "ಕೊಲ್ಲಲ್ಪಡದೇ ಗೆಲ್ಲಲ್ಪಡದೇ" ಪಾಪವೂ ಸಹ ದೂರವಾಗುತ್ತದೆ. "ವಯಂ ಮಿತ್ರಸ್ಯ ಸುಮತೌ ಸ್ಯಾಮ", "ನಾವು ಮಿತ್ರನು ಅನುಗ್ರಹಿಸಿದ ಸದ್ಬುದ್ಧಿಮಾರ್ಗದಲ್ಲಿರೋಣ", ಎಂಬುದು ದಿವ್ಯ ಪ್ರಾರ್ಥನೆ. "ಮಿತ್ರಸ್ಯ ಚರ್ಷಣೀಧೃತಃ" — "ಮಿತ್ರನು ಸಕಲ ಪ್ರಜೆಗಳನ್ನು ಧರಿಸಿರುವವನು" ಎಂಬಲ್ಲಿ ಲೋಕಾನುಗ್ರಹ ತತ್ತ್ವಕ್ಕೆ ಒಡೆಯನೆಂಬ ಭಾವವಿದೆ. (ಈ ಭಾವಗಳನ್ನೊಳಗೊಂಡ ಮೇಲಿನ ಸೂಕ್ತಕ್ಕೆ ವಿಶ್ವಾಮಿತ್ರರು ಋಷಿಗಳು, ವಿಶ್ವಕ್ಕೆ ಮಿತ್ರರಾದವರು, ಎಂಬುದು ಗಮನೀಯ.) "ಮಿತ್ರಸ್ಯ ಯಾಯಾಂ ಪಥಾ", ("ಮಿತ್ರನು ತೋರಿಸಿದ ದಾರಿಯಲ್ಲಿ ನಾನು ಹೋಗುವಂತಾಗಲಿ") ಎಂಬುದು ಪ್ರಾರ್ಥನೆ. V-64-3).

ಹೀಗೆ 'ಮಿತ್ರ', ಮಾನವನಿಗೆ ಅತಿ ಸುಲಭನಾದ ಭಗವಂತನ ಅನುಗ್ರಾಹಕ ಅಂಶ. "ಮಿತ್ರಮತ" (Mithraism) ವೆಂಬುದೊಂದು ಚಾರಿತ್ರಿಕವಾಗಿ ಪ್ರಸಿದ್ಧವಾಗಿ ಪ್ರಚಾರದಲ್ಲಿದ್ದು ಏಷ್ಯಾ ಮೈನರ್, ಈಜಿಪ್ಟ್, ಬೇಬಿಲೋನಿಯಾ ಮುಂತಾದ ಭೂಭಾಗಗಳಲ್ಲಿ ಒಂದಾನೊಂದು ಕಾಲದಲ್ಲಿ ಜನಪ್ರಿಯವಾಗಿದ್ದಂತೆ ಚರಿತ್ರೆಕಾರರು ಹೇಳುತ್ತಾರೆ. (ಕ್ರೈಸ್ತಮತವೂ ಇದರ ರೂಪಾಂತರವೇ ಎಂದೂ ಅಭಿಪ್ರಾಯ ಪಡುವವರೂ ಇದ್ದಾರೆ.)

೪. **ವರುಣನು :** 'ಸೂರ್ಯ'ನು ಅಸ್ತಂಗತನಾದ ಮೇಲೆ ಧ್ಯಾನಿಸಲ್ಪಡುವ ರೂಪವಾಗಿದ್ದು, ಮಿತ್ರನ ಕೂಡೆಯೇ ಸಾಮಾನ್ಯವಾಗಿ ಸ್ತುತಿಸಲ್ಪಟ್ಟಿದ್ದಾನೆ. ವರುಣದೇವತೆಯ ಪರಿಚಯವನ್ನು ವಿಸ್ತಾರವಾಗಿ ನಮ್ಮ ಗ್ರಂಥಮಾಲೆಯ ಪ್ರಥಮ ಸಂಪುಟದಲ್ಲಿ ೯೬–೧೦೮ ಪುಟಗಳಲ್ಲಿ ಮಾಡಿಕೊಡಲಾಗಿದೆ. ಋತ ತತ್ತ್ವಕ್ಕೆ ಅಧಿಪತಿಯಾಗಿರುವ ಭಗವಂತನ

ಅಂಶವು ಅನತಿಕ್ರಮಣೀಯವೆಂಬರ್ಥದಲ್ಲಿ "ವರುಣಪಾಶ"ವು ಎಲ್ಲ ಕಡೆ ವ್ಯಾಪ್ತವಾಗಿದೆ.

೫. ಪೂಷಣ : "ಯದ್ರಶ್ಮಿಪೋಷಂ ಪುಷ್ಯತಿ ತತ್ಪೂಷಾ ಭವತಿ" "ಉದಿಸಿದ ಸೂರ್ಯನು ತೇಜಸ್ಸಿನಿಂದ ಪುಷ್ಟನಾಗಿ ಲೋಕವನ್ನು ರಶ್ಮಿಗಳಿಂದ ಪೋಷಿಸುತ್ತಾನಾದುದರಿಂದ ಅವನೇ ಪೂಷಾ ಆಗುತ್ತಾನೆ" ಎಂದು ನಿರುಕ್ತದಲ್ಲಿ (XII–16) ಯಾಸ್ಕರ ಮತ. ಶತಪಥಬ್ರಾಹ್ಮಣವು : "ಪೂಷೇಯಂ ಹೀದಂ ಸರ್ವಂ ಪುಷ್ಯತಿ ಯದಿದಂ ಕಿಂಚ" (XIV–4–2–25 ) ಎಂಬಂತೆ "ಈ ಎಲ್ಲವನ್ನೂ ಪರಿಪೋಷಿಸುವವನು" ಎಂಬರ್ಥದಲ್ಲಿ ಸೂರ್ಯನನ್ನೇ ಹೀಗೆ ಕರೆದಿದೆ. ಋಕ್ಸಂಹಿತೆಯ ಆರನೇ ಮಂಡಲದಲ್ಲಿ 'ಪೂಷಾ' ವಿಷಯಕವಾದ ಐದುಸೂಕ್ತಗಳ ಬಗೆಗೆ ವಿವರಿಸುತ್ತಾ ಶೌನಕ ಮಹರ್ಷಿಗಳು ಬೃಹದ್ದೇವತೆಯಲ್ಲಿ :

ಪುಷ್ಯನ್ ಕ್ಷಿತಿಂ ಪೋಷಯತಿ ಪ್ರಣುದನ್ ರಶ್ಮಿಭಿಸ್ತಮಃ ।
ತೇನೈನಂ ಅಸ್ತೌತ್ ಪೂಷೇತಿ ಭರದ್ವಾಜಸ್ತು ಪಂಚಭಿಃ ।

ಎಂದು ಹೇಳಿದ್ದಾರೆ : "ಪೂಷನು ರಶ್ಮಿಗಳಿಂದ ಕತ್ತಲೆಯ ಲೋಕವನ್ನು ಪೋಷಿಸುತ್ತಾನಾದುದರಿಂದ ಭರದ್ವಾಜ ಋಷಿ೦ ಸೂಕ್ತಗಳಿಂದ ಸ್ತುತಿಸಿದ್ದಾನೆ." "ಪೂಷನ್" ಎಂದರೆ 'ಪೋಷಕ' ಸಾಯಣ ಭಾಷ್ಯ

ಶುಕ್ರಂತೇ ಅನ್ಯತ್ ಯಜತಂತೇ ಅನ್ಯತ್ ವಿಷುರೂಪೇ
ಅಹನೀ ದ್ಯೌರಿವಾಸಿ।
ವಿಶ್ವಾ ಹಿ ಮಾಯಾ ಅವಸಿ ಸ್ವಧಾ ವೋ ಭದ್ರಾತೇ
ಪೂಷನ್ ಇಹ ರಾತಿರಸ್ತು ॥ (ಋ. ಸಂ. VI–58–1)

"ಹೇ ಪೂಷದೇವ, ನಿನ್ನ ಒಂದು ರೂಪವಾದ ಹಗಲು ಬಿಳಿಯಬಣ್ಣ ವಾಗಿಯೂ, ಮತ್ತೊಂದಾದ ರಾತ್ರಿಯೂ ಕಪ್ಪಾಗಿಯೂ ಇದೆ. ಹೀಗೆ ನಿನ್ನ ರೂಪಗಳೇ ಆದ ಹಗಲು ರಾತ್ರಿಗಳು ವಿಷಮ ವರ್ಣವುಳ್ಳವಾಗಿವೆ. ತೇಜೋವಂತನಾದ ನೀನು ಸಂಪನ್ನನಾಗಿ ಸಕಲಪ್ರಜೆಗಳನ್ನೂ ರಕ್ಷಿಸುವೆ. ನಿನ್ನ ಅನುಗ್ರಹವು ನಮಗಾಗಲಿ." ಇದು ಸುಪ್ರಸಿದ್ಧ ಪ್ರಾರ್ಥನೆ.

"ಅಜಾಶ್ವಃ, "ಪಶುಪಾಃ", 'ಅಜವನ್ನೇ ಅಶ್ವವನ್ನಾಗಿ ಉಳ್ಳವನು', 'ಪಶುಪಾಲಕನು'-ಇದು ಮುಂದಿನ ಮಂತ್ರದಲ್ಲಿ ಬರುವ ಇವನ ವರ್ಣನೆ.

'ಅಜ'-'ಹುಟ್ಟುಸಾವಿಲ್ಲದಿರುವಿಕೆ' ಇವನ ವಾಹನ. 'ಗೋ'ರಕ್ಷಕನೆಂದರೆ ಅರ್ಥಸ್ಪಷ್ಟ !

"ಪಥಸ್ಪತಿ"– "ದಾರಿಯರಕ್ಷಕ" ಎಂಬುದೂ ಇವನ ವರ್ಣನೆ. (VI-53-1), ಇದರಲ್ಲಿ ದೊಡ್ಡ ಮರ್ಮವಿದೆ. ಋಜುಮಾರ್ಗ, ವೇದ ಮಾರ್ಗ, ಧರ್ಮಮಾರ್ಗವೆಂದು ಪ್ರಸಿದವಾದ ಜೀವನದ ದಾರಿಗೆ ಇವನು ಒಡೆಯ. 'ದಾರಿತಪ್ಪಿದ ನಮ್ಮನ್ನು' "ಗೃಹಪತಿಂ ನಯ", "ನಮ್ಮ ಮನೆಯೊಡೆಯನಲ್ಲಿಗೆ ಕರೆದುಕೊಂಡು ಹೋಗು" ಎಂಬ ಪ್ರಾರ್ಥನೆಗೆ ಅರ್ಥವು ಸ್ಪಷ್ಟವಲ್ಲವೆ? ಮನುಷ್ಯನು 'ದಾರಿ' ತಪ್ಪುವುದೆಲ್ಲಿ ? ಎಂದರೆ, ಹೃದಯವು, ದಾನ ಬುದ್ಧಿ ರಹಿತವಾಗಿ, ಕಠಿಣವಾದರೆ, 'ದಾರಿ' ತಪ್ಪುವುದಾದುದರಿಂದ,

ಅದಿತ್ಸಂತಂ ಚಿದಾಘೃಣೇ ಪೂಷನ್ ದಾನಾಯ ಚೋದಯ ।
ಪಣೇಃ ಚಿತ್ ವಿಮ್ರದಾ ಮನಃ ॥

"ಹೇ ಪೂಷನ್ ! ದಾನಶೂನ್ಯನಾದ ಜಿಪುಣನಿಗೆ ದಾನ ಬುದ್ಧಿಯನ್ನು ಕೊಟ್ಟು ಪ್ರಚೋದಿಸು. 'ಪಣಿ'ಗಳ ಹೃದಯವನ್ನು ದಯೆಯಿಂದ ಮೃದುವನ್ನಾಗಿಸು" ಎಂದು ಮಾರ್ಮಿಕ ಪ್ರಾರ್ಥನೆಯಿದೆ. "ಪಣೀನಾಂ ಹೃದಯಾ ಆರಯಾ ಪರಿತೃಂಧಿ" "ಪಣಿಗಳ ಹೃದಯಗಳನ್ನು ಅಂಕುಶಗಳಿಂದ ತಿವಿದು ಮೃದುಗೊಳಿಸು", "ಪಣೇಃ ಇಚ್ಛ ಹೃದಿಪ್ರಿಯಂ", "ಪಣಿಗಳ ಹೃದಯದಲ್ಲಿ ಲೋಕಹಿತ ಬುದ್ಧಿಯು ಪ್ರಿಯವಾಗುವಂತೆ ಪ್ರತಿಷ್ಠಿಸು", "ಪಣೀನಾಂ ಹೃದಯಾ ಆರಿಖ", 'ಪಣಿಗಳ ಹೃದಯಗಳನ್ನು ಸಾಣೆಹಿಡಿದು ಉಜ್ಜಿ', "ಕಿಕಿರಾ ಕೃಣು", 'ಮಾರ್ದವಗೊಳಿಸು', –ಇತ್ಯಾದಿ ಪ್ರಾರ್ಥನೆಗಳು ಈ ಸೂಕ್ತದ ತುಂಬಾ ಬಂದಿವೆ. ಇದೇ ಪೂಷನ "ಮಾರ್ಗದರ್ಶನ". ಇವನ ಅಂಕುಶವು "ಗೋ ಓಪಶಾ", "ಪಶುಸಾಧನೀ"– 'ಗೋ'ವುಗಳನ್ನು ರಕ್ಷಿಸುವುದೂ, ಅವುಗಳಿಗೆ ಮಾರ್ಗದರ್ಶಕವಾದುದೂ ಎಂದು ವರ್ಣಿತವಾಗಿದೆ. "ತಾನೂ ಸನ್ಮಾರ್ಗದಲ್ಲಿದ್ದು ನಮಗೂ ಸನ್ಮಾರ್ಗ ಪ್ರವರ್ತನ ಮಾಡಿಸುವ ಪ್ರಾಜ್ಞನ ಸಹವಾಸವು ನಮಗೆ ಆಗುವಂತೆ ಮಾಡು" (VI-54-1) ಎಂಬ

ಪ್ರಾರ್ಥನೆಯು ಮನೋಜ್ಞವಾಗಿದೆ. ಪೂಷನು "ಚಕ್ರಧಾರಿ"ಯೆಂದೂ, ಈ ಚಕ್ರವು ಅಪ್ರತಿಹತವೆಂದೂ ವರ್ಣಿತವಾಗಿದೆ. 'ಗೋ'ರಕ್ಷಕನಾಗಿ, ನಮ್ಮಲ್ಲಿರುವ ಜ್ಞಾನಕಿರಣ ರೂಪಿಗಳಾದ ಗೋವುಗಳನ್ನು ರಕ್ಷಿಸುತ್ತಾ, ಅವುಗಳ ಹಿಂಬಾಲಕನಾಗಿರಲಿ, **"ಪೂಷಾ ಗಾ ಅನ್ವೇತು"** ಎಂಬ ಪ್ರಾರ್ಥನೆಯೂ ಮಾರ್ಮಿಕವೇ. "ಈ ಗೋವುಗಳಿಗೆ ಹುಲಿಗಳಿಂದ ಬಾಧೆಯಾಗದೇ, ಭಾವಿಗಳಲ್ಲಿ ಬೀಳದೆ, ಜೋಪಾನವಾಗಿ ಸಂಧ್ಯಾಕಾಲಕ್ಕೆ ಮನೆಗೆ ಬರುವಂತಾಗಲಿ" ಎಂಬಲ್ಲಿಯೂ ಮರ್ಮವಿದೆ. ನಿನ್ನ ಆರಾಧನಾ ವ್ರತದಲ್ಲಿ ನಮಗೆ ಬಾಧೆಯಿರದಿರಲಿ" **"ತವ ವ್ರತೇ ವಯಂ ನ ರಿಷ್ಯೇಮ", "ಹಸ್ತಂ ದಧಾತು ದಕ್ಷಿಣಂ"**- "ಬಲಗೈಯ ಅಭಯ ಹಸ್ತವನ್ನು ಕೊಡಲಿ" ಇತ್ಯಾದಿ ನಾನಾ ಪ್ರಾರ್ಥನೆಗಳೂ ಅರ್ಥಪೂರ್ಣವೇ.

ಲೋಕದ ಗತಿಯು ಭದ್ರವಾಗಿ ನಿಂತಿರುವುದೇ **'ದಾನ'** ಬುದ್ಧಿ, ಪ್ರವೃತ್ತಿಗಳಿಂದ. ಇದಕ್ಕೆ ಬದಲು ಅಲ್ಲಿ ವ್ಯಾಪಾರದ ಪ್ರವೃತ್ತಿಯನ್ನು ಪ್ರತಿಷ್ಠಿಸಿ ಸ್ವಾರ್ಥಪರತೆಯನ್ನು ಹರಡುವುದೇ 'ಪಣಿ'ಗಳ ಕೆಲಸ. (ಇಂದು ಇದು ನಡೆಯುತ್ತಿದೆ.) ಜೀವನದಲ್ಲಿ 'ದಾರಿ' ಕೆಟ್ಟು, ಮನುಷ್ಯರು 'ಹುಲಿ'ಗಳ ಬಾಯಿಗೆ ಸಿಗುವುದೇ ಹೀಗೆ. ಈ ಪಣಿಗಳಲ್ಲೂ ದಾತೃತ್ವವುಂಟಾದರೆ ಆಗ'ದುಡ್ಡಿನ ಪೂಜೆ'ಯೆಂಬುದು ನಿಂತು ಮಾನವನು ಮಾನವನಾಗುವ'ದಾರಿ' ಉಂಟಾಗುತ್ತದೆ. ಪ್ರಗತಿಪಥಕ್ಕೆ ಇದೇ ಮೊದಲ ಹೆಜ್ಜೆ. ಇದಾಗದೇ ಯಾವ 'ಯೋಜನೆ'ಗಳನ್ನು ಎಷ್ಟು ದೀರ್ಘಕಾಲ ನಡೆಸಿದರೂ ಫಲವಿಲ್ಲ. ದೇವರು ನಮ್ಮ ಇಂದಿನ ನಗರ ಜೀವನದ ಮಧ್ಯೆ ಪ್ರತ್ಯಕ್ಷನಾಗಿ ಹೀಗೊಂದು ಪ್ರಶ್ನೆ ಕೇಳಿದರೆ ಏನು ಉತ್ತರ ನಮ್ಮಿಂದ ಸಿಕ್ಕೀತು?

ದೇವರು : **"ಈ ಪಟ್ಟಣಕ್ಕೆ ಏನರ್ಥ? ನಿಮ್ಮಲ್ಲಿ ಪರಸ್ಪರ ಪ್ರೀತಿ ಇದೆಯೆಂದು ಹೀಗೆ ಇಷ್ಟು ಸಾಂದ್ರನಾಗಿ ಕೂಡಿಕೊಂಡಿದ್ದೀರಾ ?"**

**(What is the meaning of this city ? Do you huddle close together because you love each other ?)**

ನಮ್ಮ ಉತ್ತರ ಹೀಗಿರುವುದು :

**"ನಾವು ಒಟ್ಟಿಗಿರುವುದೇಕೆಂದರೆ, ಒಬ್ಬರಿಗೊಬ್ಬರು ದುಡ್ಡು ಮಾಡಿಕೊಳ್ಳುವುದಕ್ಕಾಗಿ"**

17

'We all live together to make money from each other.')

ಇದು ಟಿ. ಎಸ್. ಎಲಿಯೆಟ್ ಎಂಬ ಆಂಗ್ಲಕವಿಯ ವಿಶ್ಲೇಷಣೆ. (From : Choruses from 'The Rock')

ಇದನ್ನು ಕೇಳಿ ದೇವರು ನಮ್ಮಿಂದ ಓಡಿ ಹೋಗಬೇಕಷ್ಟೆ ? ಇದು ಎಂದಿಗೆ ನಿಂತು, ಜೀವನ ಅರ್ಥ ಪೂರ್ಣವಾದೀತೋ ಎಂಬ ತವಕ ಪೂಷಣನ ಪ್ರಾರ್ಥನೆಗಳಲ್ಲಿದೆ.

";Though you forget the way to the Temple,
There is one who remembers the way
to your door :"

ಎಂದು ಇದೇ ಕವಿ ಹೇಳುತ್ತಾನೆ. ನಮ್ಮನ್ನು ಹುಡುಕಿಕೊಂಡು ಬಂದು ಮಾರ್ಗದರ್ಶನ ಮಾಡುವವನೇ ಪೂಷಾ, 'ಉಷೆ'ಯ ಉಪಪತಿ ಇವನೆಂದು ಸೂಕ್ತವೊಂದು ಹೇಳುತ್ತದೆ. 'ಸೂರ್ಯ' ರೂಪಿಯಾಗಿ ಉಷೆಯ ಗಂಡನಾಗಿದ್ದು, ಪೂಷಣನ ರೂಪದಿಂದ 'ಉಪ' ಪತಿಯಾಗಿದ್ದಾನೆಂಬುದರಲ್ಲಿ ಪತಿಯದೇ ವೇಷಾಂತರವೇ ವಿನಾ ಬೇರೆಯಲ್ಲ, ಜ್ಞಾನೋದಯಾವಸ್ಥೆಗೆ ಎಷ್ಟು ಜನ ಒಡೆಯರು ? ಎಂದರೆ, ಸೂರ್ಯ, ಭಗ, ಸವಿತೃ, ಪೂಷಾ— ಎನ್ನುವ ಭಾಷೆಗೆ ಬದಲು ಒಬ್ಬನು ಪತಿಯಾಗಿ ಇನ್ನೊಬ್ಬನು 'ಉಪ' ಪತಿ ಎನ್ನುತ್ತದೆ ಶ್ರುತಿ. ಸರಿಯಾಗಿ ತಿಳಿಯದೆ ಅಪಾರ್ಥ ಮಾಡುವವರು ಏನು ಸಾಧಿಸಿದಂತಾಗುತ್ತದೆ ? ಪೂಷಣನೇ ದಾರಿ ತೋರಬೇಕಷ್ಟೆ !

ಹೀಗೆ ಹೃದಯಾಕಾಶದಲ್ಲಿ ಬೆಳಗುವ ಸೂರ್ಯನ ರೂಪಾಂತರಗಳನ್ನೇ ದ್ವಾದಶಾದಿತ್ಯರೆಂದು ವೇದವು ವರ್ಣಿಸಿ ಭಗವನ್ಮಹಿಮೆಗಳ ಮಾರ್ಮಿಕ ಸ್ವರೂಪ ಪರಿಚಯವನ್ನು ಮಾಡಿಕೊಟ್ಟಿದೆ. "ಆದಿತ್ಯಾನಾಂ ಅಹಂ ವಿಷ್ಣುಃ ಜ್ಯೋತಿಷಾಂ ರವಿರಂಶುಮಾನ್" ಎಂದು ಭಗವಂತನೇ ಗೀತೆಯಲ್ಲಿ ಹೇಳಿಕೊಂಡಾಡಿದ್ದಾನಲ್ಲವೆ ! (X-21) ವ್ಯಾಪಕನಾಗಿ, 'ವಿಷ್ಣು'ವಾಗಿ, ಸಕಲ ಲೋಕಪಾಲನಾದ ಈ 'ಸೂರ್ಯ'ನನ್ನು, "ಸೂರ್ಯ ಆತ್ಮಾ ಜಗತಃ

ತಸ್ಥುಷಶ್ಚ", ಚಿದಚಿತ್‌ಮಿಶ್ರವಾದ ಜಗತ್ತಿನ ಅಂತರ್ಯಾಮಿಯೆಂದು ವೇದವು ಸ್ತುತಿಸುತ್ತಿರುವುದನ್ನು ಎಷ್ಟು ನೆನೆದರೂ ಸಾಲದು. ಇಂತಹ ಪರಮಾತ್ಮನನ್ನು ಕೊಂಡಾಡುವ ಒಂದು ದಿವ್ಯ ಸೂಕ್ತದಿಂದ ಈಗ ಉಪಸಂಹಾರ ಮಾಡೋಣ. (ಋ, ಸಂ, X-37-1-12).

"ಎಲೈ ಋತ್ವಿಕ್ಕುಗಳೇ, ಮಿತ್ರಾ ವರುಣರಿಗೂ ಒಡೆಯನಾಗಿ, ಕಣ್ಣಾಗಿ, ಅವರನ್ನೂ ಗಮನಿಸತಕ್ಕವನೂ, ಮಹಾತ್ಮನೂ, ಸಕಲದೇವತಾತ್ಮಕನೂ, ದೂರದಲ್ಲಿದ್ದು ಎಲ್ಲವನ್ನೂ ನೋಡತಕ್ಕವನೂ ಮತ್ತು ದೇವತೆಗಳಲ್ಲಿಯೇ ಉತ್ಪನ್ನನಾಗಿ, ಜಗತ್ತಿಗೂ ಜ್ಞಾನದಾತೃವಾಗಿ ಇರುವ, ಬೆಳಕಿನ ಲೋಕದ ಪುತ್ರನಾದ ಸೂರ್ಯನಿಗೆ, ಮೊದಲು ನಮಸ್ಕರಿಸಿ, ನಂತರ ಅವನಿಂದ ವಿಹಿತವಾದ, ಸತ್ಕರ್ಮಾನುಷ್ಠಾನಗಳನ್ನು ಮಾಡಿರಿ. ಈ ಸೂರ್ಯನನ್ನು ಕೊಂಡಾಡುವ ವಾಕ್ಕು ಸತ್ಯಾತ್ಮಕವಾದದು. ಇದರಲ್ಲಿಯೇ ದ್ಯಾವಾಪೃಥಿವಿಗಳೂ, ಹಗಲು ರಾತ್ರಿಗಳೂ, ವಿಸ್ತೃತಿಯನ್ನು ಹೊಂದಿವೆ. ವಿಶ್ವದ ಸಕಲ ಪ್ರಾಣಿಗಳೂ ವಿಶ್ರಾಂತಿ ಹೊಂದಿವೆ. ಮತ್ತು ಕಂಪನಸಾಮರ್ಥ್ಯವನ್ನು ಹೊಂದಿವೆ. ಇದರಲ್ಲಿಯೇ 'ಉದಕ'ಗಳು, ಪ್ರವಹಿಸುವುವು. ಹೆಚ್ಚೇನು, ಸೂರ್ಯೋದಯವೂ, ಇದರಲ್ಲಿಯೆ ಪ್ರತಿಷ್ಠಿತವಾಗಿದೆ. ಹೀಗೆ ಪ್ರಸಿದ್ಧವಾದ ಈ ಸತ್ಯವಾಕ್ಕು ನನ್ನನ್ನು ರಕ್ಷಿಸಲಿ. ಹೇ ಸೂರ್ಯದೇವಾ ! ನೀನು ಯಾವಾಗ ಶೀಘ್ರಗಾಮಿಗಳಾದ ಕುದುರೆಗಳನ್ನು ನಿನ್ನ ರಥಕ್ಕೆ ಹೂಡಲು ಇಚ್ಛಿಸುವೆಯೋ ಆಗ ಯಾವ ಅಸುರನೂ ನಿನ್ನ ಬಳಿಯೂ ಸುಳಿಯಲಾರನು. ನೀನು ಅತಿ ಪ್ರಾಚೀನವಾದ, ಮತ್ತೊಂದು ಪರಂಜ್ಯೋತಿಯಿಂದಲೇ ಹಿಂಬಾಲಿಸಲ್ಪಟ್ಟು ಆದರಿಂದಲೇ ಉದಯಿಸುವೆ. (**ಪ್ರಾಚೀನಂ ಅನ್ಯತ್ ಅನು ವರ್ತತೇ ರಜ ಉದನ್ಯೇನ ಜ್ಯೋತಿಷಾ ಯಾಸಿ ಸೂರ್ಯ.**) ಈ ದಿವ್ಯ ತೇಜಸ್ಸಿನಿಂದಲೇ ನೀನು ಲೋಕದ ಅಂಧಕಾರವನ್ನು ನಾಶಪಡಿಸಿ. ಸಕಲ ಜಗತ್ತನ್ನೂ ಸತ್ಕರ್ಮದಲ್ಲಿ ಪ್ರೇರಿಸುವೆ. ಇಂತಹ ನೀನು ನಮಗೆ ಅನ್ನಾಭಾವವನ್ನೂ, ಯಜ್ಞಸಂಭಾರದ ಕೊರತೆಯನ್ನೂ, ಒಳ ಹೊರಗಿನ ರೋಗಗಳನ್ನೂ, ಕೆಟ್ಟ ಕನಸಿನ ಫಲಗಳನ್ನೂ ಹೋಗಲಾಡಿಸು. ಕೋಪರಹಿತನಾದ ನೀನು, ಸಕಲ ಲೋಕ ರಕ್ಷಕ. ನಾವು ಸ್ವಧಾ ಅರ್ಪಣಮಾಡಿದ ನಂತರವೇ ಉದಯಿಸುವೆ. ನಿನಗೆ ಮಾಡಿದ ನಮ್ಮ ಪ್ರಾರ್ಥನೆಯು ಇತರ

ದೇವತೆಗಳಿಗೂ ಸಂಮ್ಮತವಾಗಲಿ. ಬದುಕಿರುವಾಗ ಚೆನ್ನಾಗಿ ಬಾಳಿ, ಮಂಗಳ ಕರವಾದ ಮುಪ್ಪನ್ನು ಹೊಂದುವಂತಾಗಲಿ. **(ಭದ್ರಂ ಜೀವಂತೋ ಜರಣಾಂ ಅಶೀಮಹಿ).** ನಿನ್ನನ್ನು ಅನೇಕ ಕಾಲ ನಾವು ದಿನಂಪ್ರತಿ ದರ್ಶನ ಮಾಡುವಂತಾಗಲಿ."

ಇದೆಲ್ಲವನ್ನು ಒಂದೇ ವಾಕ್ಯದಲ್ಲಿ ಸಂಗ್ರಹಿಸಿ ಯಜುರ್ವೇದ ತೈತ್ತಿರೀಯ ಸಂಹಿತೆಯ ಮೊದಲನೆಯ ವಾಕ್ಯವು ಹೀಗೆ ಪ್ರಾರ್ಥಿಸಿದೆ : **"ದೇವೋ ವಃ ಸವಿತಾ ಪ್ರಾರ್ಪಯತು ಶ್ರೇಷ್ಠತಮಾಯ ಕರ್ಮಣೇ"** "ಸೂರ್ಯದೇವನು ನಿಮ್ಮೆಲ್ಲರನ್ನೂ ಶ್ರೇಷ್ಠತಮವಾದ ಕರ್ಮಗಳಲ್ಲೇ ತೊಡಗಿಸಲಿ". ಇದೇ ಗಾಯತ್ರಿಯ ಸಂದೇಶವು ಸಹ ಆಗಿದೆ.



॥ ಶ್ರೀ ಕೃಷ್ಣಾಯಪರಬ್ರಹ್ಮಣೇನಮಃ ॥

# ೩. ಇಂದ್ರ–ವೃತ್ರ

ಯದಾತ್ಮಾನೋ ವೇದಾಃ ಯದನುವರ್ಣಾಕೃತಿ ಜುಷಃ
ಪ್ರಮಾಣಂ ಯತ್ರೈತೇ ನಿಯತಮಪರಿಚ್ಛೇದ್ಯ ವಿಭವೇ ।
ಯ ಏಷಾಮಾಹರ್ತಾ ದನುಜಮಥನೋ ವಾಜಿವದನಃ
ಸ ಮೇ ದೇವಃ ಶ್ರೀಮಾ಼ನ್ ವಿದಳಯತು ಸಂಮೋಹ ಮಖಿಲಂ ॥

## "ಪ್ರವೇಶ"

ಜೀವನ ಪ್ರವಾಹವು ಇಂದು–ನೆನ್ನೆಯದಲ್ಲ. ಇದು ಅನಾದಿ, ಅನಂತ. ಇದಕ್ಕೆ ಅರ್ಥವೇನು ? ಎಂಬ ಪ್ರಶ್ನೆಯೂ ಹಳೆಯದೇ, ಬೇರೆ ಬೇರೆ ದೇಶ ಕಾಲಗಳಲ್ಲಿ ಅಸಂಖ್ಯಾತ ಮಹಾಪುರುಷರು ಈ ಪ್ರವಾಹದ ಉದ್ದೇಶವನ್ನು ತಿಳಿಯಲು ಪ್ರಯತ್ನಿಸಿರುವುದೂ ಸುವಿದಿತ. "ಜೀವನಕ್ಕೆ ಅರ್ಥವೇ ಇಲ್ಲ" ವೆಂದವರೂ ಬಹಳ ಜನ ಆಗಿ ಹೋದರು-ಪೌರಾತ್ಯ ಪಾಶ್ಚಾತ್ಯ "ಮೇಧಾವಿ" ಗಳು !

ವೇದ ದರ್ಶನದಲ್ಲಿ ಇಡೀ ವಿಶ್ವದ ಕಾಲಾಧೀನ ಗತಿಯನ್ನು ನಿಯಮ ಬದ್ಧವೆಂದು ಕಂಡುಹಿಡಿಯಲಾಗಿರುವುದು ಮಾತ್ರವಲ್ಲದೇ, ಇದು ಭಗ-ವಂತನ ಸಂಕಲ್ಪದಂತೆ ಮಂಗಳಮಯವಾದ ಗುರಿಯನ್ನು ಹೊಂದಿರುವ ಋತ–ಪ್ರವಾಹವೆಂದು ಸಾರಿಹೇಳಲಾಗಿದೆ. ಬಾಳಿ ಬದುಕಿ ಹಣ್ಣಾಗಿ ಪೂರ್ಣತೆ ಯನ್ನು ಸಾಧಿಸಿಕೊಂಡವರನ್ನು "ಕಾಲವಾದರು" ಎಂದೋ, "ಗತಿಸಿದರು" ಎಂದೋ ಮುಂತಾಗಿ ವ್ಯವಹರಿಸುವುದು ಅಸಂಸ್ಕೃತವಾದ ಗ್ರಾಮ್ಯ ಭಾಷೆ ಯಲ್ಲಿ ಮಾತ್ರವಾಗಿದ್ದು, ವೈದಿಕರ ಭಾಷೆಯಲ್ಲಿ ಆಕ್ಷೇಪಾರ್ಹವಾಗುತ್ತದೆ. "ಪರಮ ಪದವನ್ನಲಂಕರಿಸಿದರು", "ಭಗವಂತನ ಪಾದಗಳನ್ನು ಸೇರಿದರು", "ನಿತ್ಯ ವಿಭೂತಿಗೆ ತೆರಳಿದರು" ಎಂಬೀ ತೆರನಾದ ಭಾಷೆಯು ಮಾತ್ರ ವೈದಿಕನ ಬಾಯಿಂದ ಬಂದೀತಷ್ಟೆ. ಇದು ಕೇವಲ ಭಾಷೆಯಭೇದ

ಮಾತ್ರವಾಗಿರದೆ, ಮೌಲ್ಯಗಳ ಹಿನ್ನೆಲೆಯ ಅಂತರವನ್ನೂ ಎತ್ತಿ ತೋರಿಸುತ್ತದೆ.

ಕಾಲವೆಂಬುದೇ ಇಲ್ಲವೆಂದು ಯಾರೂ ಹೇಳಲಾರರಷ್ಟೆ ? ಗಡಿಯಾರ ಗಳನ್ನು ಧರಿಸುವುದು ಕೇವಲ ಕುರುಡು ನಡೆವಳಿಕೆಗಳೆಂದೂ ಇವುಗಳನ್ನು ಒಡೆದು ಹಾಕಿಬಿಟ್ಟರೆ ಕಾಲವೆಂಬುದೇ ಇರುವುದಿಲ್ಲವೆಂದೂ "ಬೋಧಿ"ಸುವ "ಸುಧಾರಕ"ರು ಇನ್ನೂ ಉದಿಸಿ ಬಂದಿಲ್ಲವಷ್ಟೇ ? ಅಂದ ಮೇಲೆ ಕಾಲದ "ಅರ್ಥ"ವನ್ನೊಪ್ಪಲಿ, ಬಿಡಲಿ, ಕಾಲವೆಂಬುದನ್ನು ಎಲ್ಲರೂ ಒಪ್ಪಲೇಬೇಕು. ಆದರೆ ಈ ಕಾಲದ ಬಗೆಗೆ ಎರಡು ವಿಧವಾದ ದೃಷ್ಟಿಯನ್ನು ಹೊಂದುವುದು ಸಾಧ್ಯ. ( ಹಿಂದೆ, ಇದೇ ಸಂಪುಟದ ೯೮-೧೧೩ ಪುಟಗಳನ್ನು ನೋಡಿರಿ ) ಕಾಲವು ವಿನಾಶಕಾರಿ ಎಂದು ಒಂದು ದೃಷ್ಟಿ ; ಕಾಲವು ಹೊಸ ಹೊಸದನ್ನು ಸೃಷ್ಟಿಸುವ ಭಗವತ್ಸಂಕಲ್ಪ ಪ್ರವಾಹವೆಂದು ಇನ್ನೊಂದು ದೃಷ್ಟಿ.

ಬಹುಜನರ (ಅಜ್ಞರ) ಪಾಲಿಗೆ ಕಾಲವು, ಗಂಭೀರವಾದುದು; ಇದರ ಉಗಮಸ್ಥಾನ, ಪಾತ್ರಪರಿಚಯಗಳು, ಇದರ ನಡೆದುಬಂದ ದಾರಿಗಳು ಒಂದೂ ತಿಳುವಳಿಕೆಗೆ ಎಟುಕದವು. ಆಯುಸ್ಸಿನ ಪರಿಮಿತಿಯನ್ನು ಸೀಮಿತ ಗೊಳಿಸುವ ಶಕ್ತಿ ಇದು ಮಾತ್ರವೆಂದೇ ಅವರ ಜ್ಞಾನ. ಒಬ್ಬರೊಬ್ಬರ ಜೀವನದ ನಡುವಿನ ಸೀಮಾರೇಖೆಯೇ ಕಾಲ. ಹುಟ್ಟಿದ ದಿನಾಂಕ, ಮರಣ ದಿನಾಂಕಗಳು "ಗಡಿ"ಯ ಗುರುತುಗಳು. ಇಷ್ಟರಮಟ್ಟಿಗೆ ಕಾಲವು ಉಪ ಯುಕ್ತ; ದಿನಬಳಕೆಯ ವ್ಯವಹಾರಕ್ಕೂ ಕಾಲದ ಅಗತ್ಯತೆಯನ್ನೂ ಒಪ್ಪುವುದು "ಜಾಣ"ತನವೇ ! ಆದರೆ ಈ ಕಾಲವನ್ನು ದಾಟುವುದು ಹೇಗೆಂಬ "ಕಾಲಕ್ಷೇಪ"ದ ಪ್ರಶ್ನೆಯೇ ಅನೇಕರನ್ನು ಕಾಡುವುದಾಗಿದೆಯೇ ವಿನಾ, ಕಾಲವನ್ನು ಹೇಗೆ ಸಾರ್ಥಕಪಡಿಸಿಕೊಳ್ಳಬೇಕೆಂಬುದಲ್ಲ! "ಸತ್ಕಾಲಯಾಪನ" "ಕಾಲಹರಣ"ಗಳಲ್ಲಿನ ಅಜಗಜಾಂತರ ವ್ಯತ್ಯಾಸವು ಎಷ್ಟು ಜನರಿಗೆ ತಿಳಿದಿದೆ? ನದಿಯನ್ನು ದಾಟುವವನಿಗೆ ಸೇತುವೆಯನ್ನು ಕಟ್ಟುವ ಚಿಂತೆಯಿರುವಂತೆ, ಕಾಲದ ಕಣ್ಣಿಗೆ ಮಣ್ಣೆರಚಿ ವಂಚಿಸಿ ಹೇಗೆ "ಪಾರಾಗುವು"ದೆಂಬುದೇ ಅನೇಕರ ಚಿಂತೆ. ಆದರೆ ವೈದಿಕನಿಗೆ ಇದು ನಿತ್ಯ ಕರ್ಮಾನುಷ್ಠಾನಗಳಿಗೆ ಸಾಧಕ, ಜೀವನಾಧಾರ, ಇಹಪರಗಳಿಗೆ ಮಾರ್ಗ. ಏಕಿಷ್ಟು ಅಂತರ ? ಎಂದರೆ,

ಮಿತ ಸ್ವರೂಪವನ್ನು ತಿಳಿಯದವರ ತಿಳಿದವರ ಅಂತರ ಇದುವೇ ಏನ್ನು ಬೇಕಷ್ಟೆ!

ಟಿ. ಎಸ್. ಎಲಿಯೆಟ್ ಎಂಬ ಆಂಗ್ಲ ಕವಿಯು, ತನಗೆ ದೇವತೆಗಳ ಬಗೆಗೆ ಸಾಕಷ್ಟು ಜ್ಞಾನವಿಲ್ಲವೆಂದೂ, ಆದರೆ ಕಾಲದೇವತೆಯ ಬಗೆಗೆ ಮಾತ್ರ ಈ ತಿಳುವಳಿಕೆಯಿದೆಯೆಂದೂ ಬರೆದುಕೊಂಡಿದ್ದಾನೆ :

I do not know much about gods;
but I think that the river
Is a strong brown god, sullen,
untamed and intractable,
Patient to some degree, at first
recognised as a frontier;
Useful, untrustworthy, as a conveyor of commerce;
Then only a problem confronting the
builder of bridges.
The problem once solved, the brown god
is almost forgotten
By the dwellers in cities--ever, however,
implacable,
Keeping his seasons, and rages,
destroyer, reminder,
of what men choose to forget
Unhonoured, Unpropitiated
By worshippers of the machine but waiting,
watching, watching and waiting.

(from **The Dry Salvages**)

ಪಟ್ಟಣದ ಯಾಂತ್ರಿಕ ಜೀವನದ ರೀತಿಯು "ಯಂತ್ರಾರಾಧಕರಿಗೆ" ಈ ಕಾಲದ ಬಗೆಗೆ ಗೌರವ, ಪೂಜ್ಯತೆಯಿಲ್ಲದಿದ್ದರೂ ಕಾಲವು ಅವರನ್ನೂ

ಬಿಡದೇ, ಮರೆಯದೇ, ಅವರನ್ನೂ ಕೊನೆಗಾಣಿಸುವ ಪ್ರಯತ್ನದಲ್ಲಿ ತನ್ನ ನಿಯತಿಯಂತೆ ನಿಶ್ಚಿತ ವೇಳೆಗಾಗಿ ಕಾದೇ ಇದೆಯೆಂದು ಈ ಕವಿ ಎಚ್ಚರಿಸುತ್ತಾನೆ. ಸಂಗೀತವನ್ನು 'ಕೇಳ"ಲು ಎಲ್ಲರಿಗೂ ಕಿವಿಯಿದೆ, ಆಲಿಸಬಹುದು, "ಕೇಳ"ಬಹುದು. ಆದರೆ ಎಷ್ಟು ಜನ "ಆಸ್ವಾದಿಸ"ಬಲ್ಲರು ? ಮಹಾ ಗ್ರಂಥಗಳು ಅಚ್ಚಾಗಿ ಎಲ್ಲರಿಗೂ ದೊರೆಯುತ್ತವೆ. ಕಣ್ಣಿದ್ದವರೆಲ್ಲರೂ ಓದಲೂ ಬಹುದು. ಆದರೆ ಎಷ್ಟು ಜನ ಓದಿ "ತಿಳಿಯು"ಬಲ್ಲರು.

**We had the experience, but missed its meaning.** ಯಾಂತ್ರಿಕವಾಗಿ ಒಂದು "ಅನುಭವ"ದಲ್ಲಿ ಹಾದು ಬಂದ ಮಾತ್ರದಿಂದ, ಆ "ಅನುಭವ" ವೇದ್ಯವಾಯಿತೇ ? ಹೀಗೆಯೇ "ಕಾಲ" ವಾದವರೆಲ್ಲ "ಕಾಲ"ವನ್ನು ತಿಳಿದವರಲ್ಲ. ಹುಟ್ಟು–ಸಾವುಗಳ ಮರ್ಮವನ್ನು ತಿಳಿದೇ ಸಾಯುವವರು ಸಾಯುತ್ತಾರೆಂದು ಎದೆ ತಟ್ಟಿ ಹೇಳಬಲ್ಲ ಧೀರನಾರು? ಕಾಲವಿದೆಯೆಂದು ತಿಳಿದ ಮಾತ್ರದಿಂದ ಕಾಲದ ಅರ್ಥ ತಿಳಿದಂತಾಗಲಿಲ್ಲ ! "ಇಲ್ಲಿ ಕಾಲವು ಕಳೆದು ಹೋಯಿತಲ್ಲ !" ಎಂಬ ಪಶ್ಚಾತ್ತಾಪ ಜ್ಞಾನ ಯಾವನಿಗಿಲ್ಲವೋ, ಅವನ ಭಾಗಕ್ಕೆ ಭವಿಷ್ಯವೂ ಇಲ್ಲದೇ ಹೋಗಿ, ಕೇಳಿ ಮರೆತ ಹಳೆಯ ಹಾಡು ಮಾತ್ರವಾಗುತ್ತದೆ; ಇದೇ ಗೀತೆಯಲ್ಲಿ ಶ್ರೀಕೃಷ್ಣ ಸಂದೇಶವಲ್ಲವೇ ? ಎಂದು ಈ ಆಂಗ್ಲ ಕವಿ ಪ್ರಶ್ನಿಸುತ್ತಾನೆ :

I sometimes wonder if that is what
**Krishna** meant......
That the futurc is a faded song............
Of wistful regret for those who are not
yet here to regret, ಇತ್ಯಾದಿ.

ಇದೇ ಕವಿಯು ಕೊಡುವ ಉದಾಹರಣೆಯೊಂದು ಬಹು ಉಪಯುಕ್ತವಾಗಿದೆ; ಸುರಂಗ ಮಾರ್ಗದಲ್ಲಿ ಚಲಿಸುವ ರೈಲುಗಾಡಿಯೊಂದು ಮಧ್ಯದ ತಾಣದಲ್ಲಿ ನಿಂತಾಗ, ಪಯಣಿಗರಿಗೆ, ಸುತ್ತ ಕತ್ತಲಿನಲ್ಲಿ ತಾವು ಪಯಣಿಗರೆಂದೂ, ಇದು ತಾವು ಉದ್ದೇಶಿಸಿದ ಊರಿಗೆ ಕರೆದೊಯ್ಯುವ ಯಂತ್ರವೆಂದೂ ಮರೆತು, ಭಯವೊಂದೇ ತತ್ಕಾಲ ಸತ್ಯವಾಗುವುದು. ನಾಟಕ ಮಂದಿರದಲ್ಲೂ, ಎರಡು ಅಂಕಗಳ ನಡುವೆ, ಅಲ್ಲಿಯ ವರೆಗೆ ಎದುರು ಕಾಣು

ತ್ತಿದ್ದ ಪರದೆಯೂ ಅದರಲ್ಲಿ ಚಿತ್ರವೂ, ಅದರ ಮುಂದೆ ಪಾತ್ರಧಾರಿಗಳೂ ಕ್ಷಣಕಾಲ ಕಾಣದೆ, ಕತ್ತಲಲ್ಲಿ ಕುಳಿತ ಪ್ರೇಕ್ಷಕನಿಗೆ ಮುಂದಿನ ಅಂಕದ ಬಗೆಗೆ ಭರವಸೆಯೇ ಅಳಿದು ಭೀತಿಯುಂಟಾಗಬಹುದು. ಕಾಲಗತಿಯ ಬದಲಾವಣೆಯು ಹೀಗೆ ಅನೇಕರಿಗೆ ಭಯಕ್ಕೇ ಆಸ್ಪದವಾಗಿದೆ.

ಆದರೆ ಜ್ಞಾನಿಯಾದವನಿಗೆ ಭೀತಿಯಿಲ್ಲದಿರಲು ನಿಜವಾದ ಕಾರಣವೇನೆಂದರೆ– ಇದರಲ್ಲಿ ಒಂದು ಮುಖ್ಯ ತತ್ತ್ವವಿದೆ. ರೈಲು ಹೊರಟಮೇಲೆ, ಅವರೆಗೂ ಬಂಧುಮಿತ್ರರ ಅಗಲಿಕೆಗಾಗಿ ಪ್ಲಾಟ್‌ಫಾರ್ಮಿನ ಮೇಲೆ ಅಳುತ್ತಿದ್ದವರನ್ನು ಕಂಡು ಅಳುತ್ತಿದ್ದ ಈ "ಪಯಣಿಗ"ರಿಗೂ ದುಃಖವು ನಿಂತು, ಹಣ್ಣು ತಿನ್ನುವುದು, ಪತ್ರಿಕೆ ಓದುವುದು, ವ್ಯವಹಾರದ ಕಾಗದಪತ್ರಗಳ ಪರಿಶೀಲನೆ—ಇತ್ಯಾದಿಗಳಲ್ಲಿ ದುಃಖವು ನಿವೃತ್ತಿಯಾಗಿ ಮುಖದಮೇಲಿನ ಬಿಗಿತ ಸಡಿಲವಾಗುವುದು. ರೈಲಿನ ತಾಳಬದ್ಧಗತಿಯ ಶಬ್ದಕ್ಕೆ ಜೀವನ ಹೊಂದಿಕೊಂಡು "ಕೆಲವೇ ಗಂಟೆಗಳ ಕಾಲದ ಪ್ರಯಾಣ" ಎಂಬ ಧೀರಭಾವ ಬರುತ್ತದೆ. ಇದಕ್ಕೆ ಕಾರಣವೇನು ?

ಜೀವನದಲ್ಲಿ ಭೂತ, ವರ್ತಮಾನ, ಭವಿಷ್ಯಗಳಲ್ಲಿ ಯಾವುದು ಮುಖ್ಯ ?—ಇದು ಪ್ರತಿಯೊಬ್ಬ ವಿವೇಕಿಯ ಪ್ರಶ್ನೆಯಾಗಬೇಕು. ಭೂತಕ್ಕಾಗಿ ಅಳುವವನೂ, ಹುಟ್ಟಿ ಬಾರದ ಭವಿಷ್ಯಕ್ಕೆ ಸುಮ್ಮನೆ ಬಾಯಿಬಿಡುವವನೂ, ಶುದ್ಧ ಅವಿವೇಕಿ ಮಾತ್ರವೇ. ಇವೆರಡೂ ನಮ್ಮ ಅಧೀನವಲ್ಲ. ನಮ್ಮ ಅಧೀನದಲ್ಲಿರುವುದು ವರ್ತಮಾನ ಮಾತ್ರವೇ. ಪ್ರತಿ ಕ್ಷಣವೂ ಒಂದು ರೀತಿಯಿಂದ ಯಮ ಪರೀಕ್ಷೆಯ ಮೃತ್ಯುಕಾಲವೇ; ಈಗ ಮಾಡಿದುದೇ ನಾಳೆಗೆ ಭೂತವಾಗುತ್ತದೆ, ಅನಿವಾರ್ಯವಾಗುತ್ತದೆ.

**ಯಂ ಯಂ ವಾಽಪಿ ಸ್ಮರನ್ ಭಾವಂ ತ್ಯಜತ್ಯಂತೇ ಕಳೇವರಂ ।**
**ತಂತಮೇವೈತಿ ಕೌಂತೇಯ ಸದಾ ತದ್ಭಾವ ಭಾವಿತಃ ॥**

ಎಂಬ ಗೀತೋಕ್ತಿಯಂತೆ ಅಂತ್ಯ ಕಾಲದಲ್ಲಿ ಏನನ್ನು ನೆನೆಸಿ ಶರೀರ ಬಿಡುತ್ತಾನೋ ಅದನ್ನೇ ಮಾನವನು ಹೊಂದುತ್ತಾನೆಂಬ ಮಾತು ಪ್ರತಿ ಕ್ಷಣಕ್ಕೂ ಅನ್ವಯವೇ. ಇದನ್ನು, ಮೇಲೆ ಪ್ರಸ್ತಾಪಿಸಲ್ಪಟ್ಟ ಆಂಗ್ಲ ಕವಿಯು ಭಾಷಾಂತರಿಸಿ ತನ್ನ ಕಾವ್ಯದಲ್ಲಿ ಸೇರಿಸಿ, ಕೃಷ್ಣ ಸಂದೇಶವನ್ನು ಹೀಗೆ ಸಂಗ್ರಹಿಸುತ್ತಾನೆ :

At the moment which is not of action or inaction
You can receive this : "On whatever sphesre
of being
The mind of man may be intent
At the time of death" —that is the one action
(And the time of death is every moment)
Which shall fructify in the lives of others :
And do not think of the fruit of action.
Fare forward___________________________
So **Krishna**, as when he admonished **Arjuna**
On the field of battle.
Not fare well,
But fare forward, Voyagers.

**ಇದು ಅದ್ಭುತವಾದ ಗೀತಾ ಸಂದೇಶ ಸಂಗ್ರಹ, ವೇದ ದರ್ಶನದ ಸಂಗ್ರಹವಾಗಿದೆ !**

**ಜೀವನದಲ್ಲಿ ಸದ್ಯದ ವರ್ತಮಾನ ಕ್ಷಣವು, ನದಿಯಲ್ಲಿನ ನಮ್ಮ ಸ್ನಾನ ಘಟ್ಟದಂತೆ.** ಇಡೀ ನದಿಯ ಉದ್ದಗಲದ ಎಲ್ಲ ನೀರಿನಲ್ಲೂ ಸ್ನಾನ ಮಾಡುವುದು ಶಕ್ಯವೂ ಇಲ್ಲ, ಅವಶ್ಯಕವೂ ಅಲ್ಲ. ಹಾಗೆಯೇ **ವರ್ತಮಾನ ಕಾಲದ** ಕರ್ತವ್ಯವನ್ನು ನಿರ್ವಹಿಸುವುದರಿಂದ ಮಾತ್ರ ಭೂತಭವಿಷ್ಯಗಳು ನೆಟ್ಟಗಾಗುತ್ತವೆ. ಕಾಲವನ್ನು ನಾವು ಮುಟ್ಟುವ ಏಕಮೇವ ಬಿಂದುವೇ ಇದು—**ವರ್ತಮಾನ**- "ಇಹೈವ ತೈರ್ಜಿತಸ್ಸರ್ಗೋ", "ಏವಂ ಪ್ರವರ್ತಿತ ಚಕ್ರಂ ನಾನು ವರ್ತಯತಿ ಇಹ ಯಃ" ಇತ್ಯಾದಿ ಗೀತಾಸೂಕ್ತಿಗಳು ಇದನ್ನೇ ಸಾರಿ ಹೇಳುತ್ತಿವೆ. ಕಾಲದ ಸದುಪಯೋಗದಿಂದ, ಪಕ್ವರಾಗಿ, "ಮಧು"ವಾಗಿ, ಕಾಲವನ್ನು ಗೆಲ್ಲುವ ದಾರಿ, ಜಾಣದಾರಿ, ಇದು ಒಂದೇ— ಎಂಬುದು ವೇದದರ್ಶನದ ಸಾರ.

ದಡ್ಡನ ದಾರಿ ಬೇರೆ; ಸೇತುವೆ ಹಾಕಿ ಕಾಲವನ್ನು ತಪ್ಪಿಸಿಕೊಳ್ಳುವುದು ಕಾಲಹರಣ. "ನದಿ"ಯಲ್ಲಿ ಸ್ನಾನಾಹ್ನಿಕಗಳನ್ನು ಮಾಡಿ ಕೃತಕೃತ್ಯರಾಗು

ವುದು ಜಾಣರ ದಾರಿ; ದಡ್ಡರು "ನದಿ"ಯ ದಡದಲ್ಲಿ ಬೆಲೆವೆಣ್ಣುಗಳೊಡನೆ ಕುಳಿತು, ತಿಂದು, ಕುಡಿದು, ಹರಟೆಕೊಚ್ಚಿ, ತಮ್ಮ ಭೋಗ ಸಾಮಗ್ರಿಗಳ ಅವಶೇಷಗಳನ್ನು ಅದರ ಮೇಲೆ ಒಗೆದು ಹೋಗುವರು, ಸಿಗರೇಟು ತುಂಡುಗಳು, ಖಾಲಿ ಮದ್ಯದ ಸೀಸೆಗಳು, ತಿಂಡಿತಿನಿಸುಗಳ ಪೊಟ್ಟಣದ ಕಾಗದಗಳು, ರಟ್ಟಿನ ಪೆಟ್ಟಿಗೆಗಳು, ಮರೆತು ಎಸೆದ ರೇಶಿಮೆ ಕರವಸ್ತ್ರಗಳು, ಇಂತಹ ಹುಚ್ಚು ಬೇಸಿಗೆಯ ಅವ್ಯಾಪಾರ ದ್ಯೋತಕ ಸಾಮಗ್ರಿಗಳು ಇವರ ಜೀವನದ ನಿತ್ಯ ದಾಖಲೆಗಳಾಗಿ ಜೀವನ ಪ್ರವಾಹರೂಪ "ನದಿ"ಯ ಮೇಲೆ ಎಸೆಯಲ್ಪಡುತ್ತವೆ. ಋಷಿಗಳು, ದೇವತೆಗಳು, ನದಿಗಳಲ್ಲಿ, ಪುಣ್ಯ ತೀರ್ಥಗಳಲ್ಲಿ ಮೀಯುವಾಗ "ಅಪ್ಸರೆ"ಯರು ಅಲ್ಲಲ್ಲಿ ನರ್ತನ ಮಾಡುತ್ತಿದ್ದರಂತೆ! ಈಗ ಅವರೆಲ್ಲ ಎಲ್ಲಿ ಹೋದರು? ಎಂದು ಕೇಳುತ್ತಾನೆ ಈ ಆಂಗ್ಲ ಕವಿ. ಪುಣ್ಯ ಭೂಮಿಯಾದ ಭಾರತದಲ್ಲಿ ಗಂಗೆ, ಯಮುನೆಯರಂತೆ ಪಾವನ ತೀರ್ಥಗಳಿಲ್ಲದ ತನ್ನ ನಾಡಾದ ಇಂಗ್ಲೆಂಡಿನಲ್ಲೂ "ಥೇಮ್ಸ್" ನದಿಯನ್ನೇ ಉದ್ದೇಶಿಸಿ ಹೀಗೆ ಪ್ರಾರ್ಥಿಸುತ್ತಾನೆ.

"... .... ......The nymphs are departed.  
Sweet Thames run softly, till I end my song.  
The river bears no empty bottles, sandwich papers  
Silk handkerchiefs cardboard boxes, cigarette ends  
or other testimony of summer nights. The nymphs  
are departed.

ಅಂದರೆ "ನದಿ"ಯ ದಿವ್ಯ ಪ್ರವಾಹವನ್ನು "ಚರಂಡಿಯ ಹೊಲಸು ಪ್ರವಾಹವನ್ನಾಗಿಸುವ ಪ್ರಯತ್ನವೊಂದು ಜೀವನದಲ್ಲಿ ನಡೆದಿದೆ. ಕಾಲವನ್ನು ದುರುಪಯೋಗಿಸಿ, ವ್ಯಭಿಚಾರ ವ್ಯಾಪಾರವನ್ನು ಸಾಗಿಸುವ "ಪಯಣಿಗನಿಗೆ" ಕಾಲವು ಅನೃತವಾಗುತ್ತದೆ.

"ಅನ್ಯತೇನ ಹಿ ಪ್ರತ್ಯೂಢಾಃ ಏತಂ ದೇವಲೋಕಂ ನ ನವಿಂದಂತಿ" (ಛಾಂದೋಗ್ಯ), ಎಂದು ಶ್ರುತಿಯು ಇಂತಹವರ ಬಗೆಗೆ ಎಚ್ಚರಿಕೆ ಎಂದೋ ನೀಡಿದೆ. ನಮ್ಮ ಜೀವನವು ನಮ್ಮ ಮಟ್ಟಿಗಾದರೂ ಪಾವನತೀರ್ಥವಾದರೆ, ಋತವಾದರೆ, ಇದರ ಗತಿಯು ಋತುಮಯವಾಗಿ, ನಮಗೂ ಆಹ್ಲಾದಕರ ವಾಗಿ, ಸಾರ್ಥಕವಾಗುತ್ತದೆ ಎಂದು ಭಾವ.

ವೇದದಲ್ಲಿ ಸಪ್ತಸಿಂಧುಗಳ ಬಗೆಗೆ ಇರುವ ಸಾಂಕೇತಿಕಾರ್ಥವು ಈ ವಿಚಾರ ಗಳನ್ನೆಲ್ಲ ಒಳಗೊಂಡಿದೆ. "ನದಿ"ಯು ಋತುಮಯವಾದ ಕಾಲಪ್ರವಾಹಕ್ಕೆ ಸಂಕೇತ ಮಾತ್ರ, (ಮುಂದಿನ ಸಂಪುಟದಲ್ಲಿ ಇದರ ಬಗೆಗೆ ಸುದೀರ್ಘ ವಿವರಣೆ ಬರುವುದರಿಂದ ಇಲ್ಲಿ ಸಂಕ್ಷೇಪ ಮಾತ್ರ.) "ನದಿಯನ್ನು ಚರಂಡಿ ಯನ್ನಾಗಿಸುವವರ" ಒಂದು ಜನವರ್ಗ ಹಿಂದಿನಿಂದಲೂ ಇದೆ. ಇಂದು ಅಕ್ಷರಶಃ ಇದು ನಡೆಯುತ್ತಿದೆ. ಗ್ರಾಮಸಾರವನ್ನೆಲ್ಲ ಅದರಲ್ಲಿ ಬಿಡುವುದು, ಫ್ಯಾಕ್ಟರಿಗಳ ಕೊಳಚೆಯನ್ನೆಲ್ಲ ಕೂಡಿಸುವುದು ಇತ್ಯಾದಿ ವಸ್ತುತಃ ನಡೆಯು ತ್ತಿರುವುದು ಎಲ್ಲರಿಗೂ ತಿಳಿದಿದೆ. ಸಾಂಕೇತಿಕವಾಗಿಯಂತೂ ಈ ನ"ದಿ"ಗಳ ಸಾರ ಕೆಡಿಸುವವರು ಎಲ್ಲರೂ ಆಗಿದ್ದಾರೆ. ಶ್ರೀಭಾಗವತದ ಮಾಹಾತ್ಮ್ಯದಲ್ಲಿ (ಪಾದ್ಮಪುರಾಣ, ಉತ್ತರ ಖಂಡ, I-70, 77) ಜೀವನದ ಸಾರ ಕೆಟ್ಟ ರೀತಿ ಯನ್ನು ವರ್ಣಿಸಲಾಗಿದೆ. ಕುಕರ್ಮಾಚರಣೆಗಳಿಂದ ಜೀವನ ಹಾಳಾಗುತ್ತಿದೆ; ಕಥಾಸಾರವೂ, ತೀರ್ಥಸಾರವೂ, ತಪಸ್ಸಾರವೂ ಹಾಳಾಯಿತು ಎಂದು ವರ್ಣಿಸ ಲಾಗಿದೆ. ದುಡ್ಡಿನಾಸೆಯಿಂದ, ನಾಸ್ತಿಕ್ಯ ಭಾವದಿಂದ, ಕಾಮಕ್ರೋಧಗಳಿಂದ, ಪಾಷಂಡ ವೃತ್ತಿಯಿಂದ ಸಾಮಾನ್ಯ ಮನುಷ್ಯರ ಪಾಡಿರಲಿ, "ಪಂಡಿತ"ರೆನಿಸಿ ಕೊಳ್ಳುವವರ ಜೀವನವೂ ನರಕವಾಗಿದೆಯೆಂದು ಹೇಳಿದೆ. "ಎಮ್ಮೆಗಳು ಕೋಣಗಳೂ ಲೈಂಗಿಕ ವ್ಯಾಪಾರದಲ್ಲಿ ತೊಡಗಿದಂತೆ, ಪಂಡಿತರು ಹೆಂಡಿರೊಡನೆ ಕೂಡಿ ಮಕ್ಕಳನ್ನು ಹುಟ್ಟಿಸುವುದರಲ್ಲಿ ದಕ್ಷರೇ ಹೊರತು ಮುಕ್ತಿ ಸಾಧನೆಯಲ್ಲಲ್ಲ" ಎಂದು ವರ್ಣಿಸಿದೆ :

ಪಂಡಿತಾಸ್ತು ಕಳತ್ರೇಣ ರಮಂತೇ ಮಹಿಷಾ ಇವ ।
ಪುತ್ರಸ್ಯೋತ್ಪಾದನೇ ದಕ್ಷಾಃ ಅದಕ್ಷಾ ಮುಕ್ತಿ ಸಾಧನೇ ।
ನಹಿ ವೈಷ್ಣವತಾ ಕುತ್ರ ಸಂಪ್ರದಾಯ ಪುರಸ್ಸರಾ ।
ಏವಂ ಪ್ರಲಯತಾಂ ಪ್ರಾಪ್ತೋ ವಸ್ತು ಸಾರಃ ಸ್ಥಲೇ ಸ್ಥಲೇ ॥

ಇದು ಇಂದಿನ "ಪಂಡಿತ"ರೆನಿಸಿರುವ, ಜ್ಞಾನರಕ್ಷಕರೆಂಬ ವಿಡಂಬನೆಗೆ ಪಾತ್ರ ಭೂತರಾದ ವಿಶ್ವವಿದ್ಯಾಲಯಗಳ ಆಧುನಿಕ ಪಂಡಿತರಿಗಾಗಿ ಹೇಳಿ ಬರೆದಂತಿದೆ. ಸಂಜೆಯಾದರೆ ಹೆಂಡದಂಗಡಿ, ಸಿನೆಮಾ, ಕ್ಲಬ್ಬುಗಳ ವಿಲಾಸ ಜೀವನದಲ್ಲಿದ್ದು ರಾತ್ರಿಯೆಲ್ಲಾ ಕಾಮಪರಾಯಣರಾಗಿ, "ಪುತ್ರಸ್ಯೋತ್ಪಾದನೇದಕ್ಷಾಃ" ಎಂಬ ಬಿರುದನ್ನೂ ಕಳೆದುಕೊಂಡು, (ಫ್ಯಾಮಿಲಿ ಪ್ಲಾನಿಂಗ್ 'ಸೌಲಭ್ಯ' ಇರುವು ದೇಕೆ ? ಇವರಿಗಾಗಿಯೇ ಅಲ್ಲವೆ ?)– ಜೀವನವನ್ನು "ಜರಂಡಿ"ಯನ್ನಾಗಿ ಸುವ ದೃಶ್ಯ ಎಲ್ಲೆಲ್ಲೂ ಕಾಣುತ್ತದೆ. ಸಾಮೂಹಿಕ ಜೀವನವೂ ಹೀಗೆ "ಜರಂಡಿ"ಯಾಗುತ್ತಿದೆ.

ವೇದದಲ್ಲಿ "ನದಿಯನ್ನು ಅಡ್ಡಗಟ್ಟುವುದು", "ಹಾಳು ಮಾಡುವುದು", ಇತ್ಯಾದಿ ರೂಪಕಗಳಿಗೆಲ್ಲ ಇದೇ ಸಾಂಕೇತಿಕಾರ್ಥ. "ದೇವರು ಇದನ್ನೆಲ್ಲ ನೋಡುತ್ತ ಸುಮ್ಮನೆ ಕುಳಿತಿರುವನೇ ?" ಎಂದು ಕೆಲವರು ಕೇಳಬಹುದು.

ಇಲ್ಲಿ ಇಂದ್ರ ಸ್ವರೂಪವನ್ನು ಚೆನ್ನಾಗಿ ತಿಳಿದರೆ ಈ ಪ್ರಶ್ನೆಗೆ ಉತ್ತರ ಸಿಗುವುದು. ಭಗವಂತನು ಋತಸ್ವರೂಪಿಯಾಗಿರುವುದು ಮಾತ್ರವಲ್ಲದೆ, "ಋತಸ್ಯ ಗೋಪ್ತಾ" ಎನಿಸಿ, ಋತವು ಅಡೆತಡೆ ಇಲ್ಲದೆ, ತನ್ನ ನಿರ್ದಿಷ್ಟ ಗುರಿಯನ್ನು ಮುಟ್ಟುವಂತೆ ಮಾಡುವುದು ಅವನ ಪ್ರಥಮ ಕರ್ತವ್ಯವಾಗಿದೆ: ಋತವನ್ನು ಅಡ್ಡಗಟ್ಟುವವರನ್ನು ನಿಗ್ರಹಿಸಿ, ಋತ ಪ್ರವಾಹವನ್ನು ವಿಮೋ ಚನೆಗೊಳಿಸಿ, ಜೀವನದ ದಿಕ್ಕನ್ನು ತೋರಿಸಿ ನಿಯಂತ್ರಿಸುವ ಭಗವಂತನ ಅಂಶವನ್ನೇ ಇಂದ್ರನೆಂದು ವೇದದಲ್ಲಿ ವರ್ಣಿಸಲಾಗಿದೆ.

ಇಂದ್ರನು ಭಗವಂತನ ಕ್ಷಾತ್ರಮುಖ. ವರುಣನು ಋತದ ಅವ್ಯಕ್ತ ಸ್ವರೂಪಕ್ಕೆ ಒಡೆಯನಾಗಿದ್ದೂ, ಕತ್ತಲೆಯಲ್ಲೂ ಅಂತಸ್ಸಮುದ್ರವೆಂಬ ಮಾನವನ ಮಾನಸಿಕ, ನೈತಿಕ ವ್ಯಾಪಾರಗಳ ನಿಯಂತ್ರಕನಾದರೆ, ಇಂದ್ರನು ಇದೇ ಋತದ ವಿಶ್ವಪ್ರವಾಹರೂಪ ಸಾಮೂಹಿಕ ಗತಿಯ ನಿಯಂತ್ರಕ. ವ್ಯವಸ್ಥಿತ ಜೀವನದ ವ್ಯಕ್ತಮುಖರೂಪದ ಋತನಿಯಂತ್ರಕನೇ ಮಿತ್ರರೂಪಿ ಸೂರ್ಯ. ಹೀಗೆ ಇಂದ್ರಾಧೀನರಾಗಿಯೇ ಇತರರು ಇರುವುದರಿಂದ ದೇವೇಂದ್ರ, ದೇವನಾಥ, ಎಂಬ ವಿಶೇಷಣಗಳು ಅವನಿಗೆ ಬಂದವೆ.

ಇಂದ್ರಸ್ಯ ಕರ್ಮ ಸುಕೃತಾ ಪುರೂಣಿ ವ್ರತಾನಿ ದೇವಾ
ನ ಮಿನಂತಿ ವಿಶ್ವೇ ।

**ದಾಧಾರ ಯಃ ಪೃಥಿವೀಂ ದ್ಯಾಂ ಉತೇಮಾಂ ಜಜಾನ**
**ಸೂರ್ಯಂ ಉಷಸಂ ಸುದಂಸಾಃ ||**
(ಋ. ಸಂ. III-32-8)

"ಸಕಲ ದೇವತೆಗಳೂ ಸಹ, ಇಂದ್ರ ನಿರ್ಮಿತವಾದ, ರಮಣೀಯವಾದ, ಬಹು ಸಂಖ್ಯಾಕವಾದ ವ್ರತಗಳನ್ನು ಎದುರಿಸಿ ಅತಿಕ್ರಮಿಸಲಾರರು. ಏಕೆಂದರೆ, ಪೃಥಿವೀ ದ್ಯುಲೋಕಗಳನ್ನು ಅವನು ಧರಿಸಿರುವುದಲ್ಲದೆ ಸೂರ್ಯನನ್ನೂ ಉಷಸ್ಸನ್ನೂ ಸೃಷ್ಟಿಮಾಡಿದ್ದಾನೆ." **"ಕದಾ ತೇ ಮರ್ತಾ ಅಮೃತಸ್ಯ ಧಾಮೇ ಯಕ್ಷಂತೋ ನ ಮಿನಂತಿ ಸ್ವಧಾವಃ"** (VI-21-3) "ಯಾವ ಮರ್ತ್ಯನೂ ಸಹ, ಅಮೃತವಾದ ಇಂದ್ರ "ಧಾಮ"ವನ್ನು ಗೌರವಿಸಿ, ಅವನ ನಿಯಮವನ್ನು ಉಲ್ಲಂಘಿಸಲಾರ." ಎಂಬ ಭಾವ ಪದೇ ಪದೇ ಉಕ್ತವಾಗಿದೆ, ಹಾಗೆಯೇ ಇಂದ್ರನಾದರೂ **"ಆದಿತ್ಯಾನಾಂ ವಸೂನಾಂ ರುದ್ರಿಯಾಣಾಂ ದೇವೋ ದೇವಾನಾಂ ನ ಮಿನಾಮಿ ಧಾಮ"** (X-48-11) ಎಂದು ತಾನೇ ಹೇಳಿಕೊಳ್ಳುವಂತೆ, ವಸುರುದ್ರಾದಿತ್ಯರೆಂಬ ದೇವತೆಗಳ ಋತರೂಪ ಧರ್ಮವನ್ನು ಅತಿಕ್ರಮಿಸುವುದಿಲ್ಲವೆಂದೂ ವರ್ಣಿತವಾಗಿದೆ. ಜಗತ್ತಿನ ನಿಯಮಾವಳಿಗಳು ದೇವರಿಂದ ನಿರ್ಮಿತವಾದರೂ, ದೇವರೂ ಅದಕ್ಕೆ ಬದ್ಧವಾಗಿ, ತಾನೇ ಮಾಡಿದ ಧರ್ಮವನ್ನು ತಾನೂ ಪಾಲಿಸುತ್ತಾ, **"ಧರ್ಮಾಣಾಂ ಸ್ಥಾಪನಾರ್ಥಂ ಸ್ವಯಮಪಿ ಭಜತೇ ಶಾಸನಾಂ ಶಾಸಿತಾ ಚ"** ಎಂದು ವೇದಾಂತದೇಶಿಕರು ಹೇಳಿರುವಂತೆ ಮಾರ್ಗದರ್ಶಕನಾಗಿರುವನು. ಋತವು ಹುಚ್ಚು ದೊರೆಯ ಕ್ಷಣ ಭಂಗುರವಾದ ಮೊಗಲಾಯಿ ಆಜ್ಞೆಯಲ್ಲ. ಇದಕ್ಕೆ ಶಾಶ್ವತರೂಪ, ಮಾನ್ಯತೆ ಇದೆ. ಇದರ ಅಡ್ಡ ಬರುವವರನ್ನು ಶಿಕ್ಷಿಸಿ, ಇದನ್ನು ಕಾಪಾಡುವುದೇ ಇಂದ್ರ ವ್ಯಾಪಾರ :

**ಯಸ್ಯ ದ್ಯಾವಾ ಪೃಥಿವೀ ಪೌಂಸ್ಯಂ ಮಹದ್ಯಸ್ಯ ವ್ರತೇ**
**ವರುಣೋ ಯಸ್ಯ ಸೂರ್ಯಃ ।**
**ಯಸ್ಯೇಂದ್ರಸ್ಯ ಸಿಂಧವಃ ಸಶ್ಚತಿ ವ್ರತಂ ಮರುತ್ವಂತಂ**
**ಸಖ್ಯಾಯ ಹವಾಮಹೇ ||**
(I-101-3)

"ಯಾವ ಇಂದ್ರನ ಮಹಾಬಲವನ್ನು ಆಶ್ರಯಿಸಿ ದ್ಯಾವಾ ಪೃಥಿವಿಗಳು ನಿಂತಿವೆಯೋ ಯಾವನ ನಿಯಮವನ್ನು ಮೀರದೆ ವರುಣ, ಸೂರ್ಯರೂ ಕರ್ತವ್ಯಪರರಾಗಿರುವರೋ, ಎಂತಹ ಇಂದ್ರನ ಆಜ್ಞೆಯಂತೆಯೇ 'ನದಿ'ಗಳೂ ಪ್ರವಹಿಸುವವೋ, ಆ ಮರುತ್ಸಹಿತ ಇಂದ್ರನ ಸಖ್ಯವನ್ನು ಬಯಸಿ, ಆಹ್ವಾನಿಸುತ್ತೇವೆ."—ಇತ್ಯಾದಿ ವಿಪುಲವರ್ಣನೆಗಳು ವೇದದಲ್ಲಿವೆ.

ಇಂತಹ ಇಂದ್ರನ ಪ್ರಧಾನ ವ್ಯಾಪಾರವೇ ಋತ; ವಿರೋಧಿಗಳ ನಿಗ್ರಹಪೂರ್ವಕ, ಋತಮೋಚನ ವ್ಯಾಪಾರ. ಪಣಿಗಳು, ವೃತ್ರ, ಶಂಬರ, ವಲ, ಶುಷ್ಣ, ನಮುಚಿ ಮುಂತಾದ ಅನೇಕ ಅಸುರ ಶಕ್ತಿಗಳ ಕೂಡ ಅವನಿಗೆ ಯುದ್ಧ ಅನಿವಾರ್ಯ. ಈ ಯುದ್ಧದ ನಾಯಕನೇ, ದೇವತೆಗಳ ಕಡೆಯಲ್ಲಿ ಇಂದ್ರ. ಇಂದ್ರ ವಿಜಯವೇ ವೇದದ ಪ್ರಧಾನ ವರ್ಣನಾ ಭಾಗ. ಅಸುರ ಪ್ರಕಾರಗಳೂ ವೈವಿಧ್ಯಮಯವಾಗಿವೆ. ಮಾನವನ ವ್ಯಕ್ತಿತ್ವದಲ್ಲಿ ಇವರನ್ನು ಪತ್ತೆ ಹಚ್ಚಿಕೊಳ್ಳುವುದು ಬಹು ಕಷ್ಟ. ಇಂದ್ರನನ್ನು ನಮ್ಮಲ್ಲಿ ಕಾಣುವುದು ಇನ್ನೂ ಕಷ್ಟ.

ಇಂದ್ರನನ್ನು 'ಯೋಧ'ನಂತೆ ವಿಪುಲವಾಗಿ ವರ್ಣಿಸಿರುವುದರಿಂದ, ಇವನನ್ನು ಪೂಜಿಸುತ್ತಿದ್ದ ಸನಾತನ 'ಆರ್ಯರು' ಕಸುಬಿನಿಂದ ಯೋಧರಾಗಿದ್ದರೆಂದೂ, ಈ ಕಸುಬಿನವರ ಕುಡುಕತನ, ಜಂಭಕೋರತನ, ಹೊಟ್ಟೆಬಾಕತನ, ಹಾದರ ಮುಂತಾದ ವಿಶಿಷ್ಟ ಗುಣಗಳೆಲ್ಲವನ್ನೂ ಇವನಲ್ಲಿ ಕಾಣಬಹುದೆಂದೂ ಬ್ಲೂಮ್‌ಫೀಲ್ಡ್ ಮಹಾಶಯನು ತನ್ನ **The Religion of the Veda** ಎಂಬ ಗ್ರಂಥದಲ್ಲಿ ಬರೆದಿದ್ದಾನೆ. (ಪು. 174) ಇತರ 'ಸಂಶೋಧಕರೂ' ಅನೇಕರೂ ಇದೇ ಮಾರ್ಗದರ್ಶನದಲ್ಲಿ ಬರೆದಿರುವುದೂ ವಿಚಿತ್ರವಾಗಿದೆ. ಭಾರತಕ್ಕೆ ಲೂಟಿಗಾಗಿ, ಬಂದ ಬ್ರಿಟಿಷರಂಥ ಪಾಶ್ಚಾತ್ಯ ಆಕ್ರಮಣಕಾರರಲ್ಲಿ ಈ ಮೇಲ್ಕಂಡ "ಮಹಾ" ಗುಣಗಳು ಸಮೃದ್ಧವಾಗಿದ್ದುದರಿಂದ, "ತಾನೇ ಕಳ್ಳ, ಪರರನ್ನು ನಂಬ" ಎಂಬಂತೆ ಎಲ್ಲೆಲ್ಲೂ ಇವೇ ಅವರಿಗೆ ಕಾಣುವುದು ಆಶ್ಚರ್ಯವಲ್ಲ!

ಇದು ಸಾಲದೆಂಬಂತೆ ಇನ್ನೂ ವಿಚಿತ್ರ ಸಿದ್ಧಾಂತಗಳನ್ನೂ ಮಾಡಿದ್ದಾರೆ: "ಆರ್ಯರು" ಪಟ್ಟಣಗಳನ್ನೇ ಕಾಣದ ಅನಾಗರೀಕ, ಸಂಚಾರಶೀಲ ಜನಾಂಗವಾಗಿದ್ದರಂತೆ! "ದ್ರಾವಿಡರು" ಅಥವಾ "ಶಿಶ್ನದೇವ"

ರೆಂದು ಪ್ರಸಿದ್ಧರಾದ ದಸ್ಯುಗಳು ಚೆನ್ನಾಗಿ ಕಟ್ಟಿಕೊಂಡ ಪಟ್ಟಣಗಳಲ್ಲಿ ವಾಸ ಮಾಡುತ್ತಿದ್ದ ಶಾಂತಿ ಪ್ರಿಯ ಜನರಂತೆ! "ಪುರ"ಗಳನ್ನು ನಾಶ ಮಾಡುವುದನ್ನೇ ಗುರಿಯಾಗಿ ಹೊಂದಿದ "ಆರ್ಯ"ರು ತಮ್ಮ ದೇವರನ್ನು ಈ ಕಾರಣದಿಂದ "ಪುರಂದರ" ಎಂದು ಕರೆದಿದ್ದಾರಂತೆ. ಹೀಗೆ ವೇದವೆಂಬುದು ಆರ್ಯರಿಂದ ನಡೆದ ಸನಾತನ ಭಾರತೀಯ ಸಂಸ್ಕೃತಿಯ ನಿರ್ನಾಮ ಪ್ರಯತ್ನದ ಮಹಾಕಾವ್ಯವಾಗಿದೆಯಂತೆ! ಜಾನ್ ಮಾರ್ಷಲ್ ಮೊದಲಾದ (ಕು) ಪ್ರಸಿದ್ಧ ಸಂಶೋಧಕರ ಮತ ಇದು! ಇದಕ್ಕೇನು ಪ್ರಮಾಣ? ಋಗ್ವೇದವೊಂದರಿಂದಲಾದರೂ ಇದನ್ನು ಸಮರ್ಥಿಸಲು ಸಾಧ್ಯವೇ ಎಂಬುದನ್ನು ಇಂದಾದರೂ ನಾವು ತಿಳಿಯಬೇಕಾಗಿದೆ. ಈ ಕೆಲವು ಪ್ರಶ್ನೆಗಳಿಗೆ ಈ ಸಂಶೋಧಕರು ಉತ್ತರ ಕೊಟ್ಟರೆ ಸಾಕು:

೧. ಇಂದ್ರನು "ಪುರಂದರ"ನಾದುದರಿಂದ "ಪುರ"ಗಳ ವೈರಿಯಾಗಿ ದ್ರಾವಿಡರ ಸಂಸ್ಕೃತಿಯನ್ನು ನಾಶಮಾಡಿದುದು ನಿಜವಾದರೆ, ಇದೇ ದ್ರಾವಿಡರ ಅಧಿದೈವತವೆಂದು ಈ ಸಂಶೋಧಕರೇ ಸಾರಿ ಹೇಳುವ ರುದ್ರನೂ ಸಹ "ಪುರವೈರಿ" ಎನಿಸಿ "ತ್ರಿಪುರಸಂಹಾರಕ"ನಾದನೆಂಬ ವೈದಿಕ ಇತಿಹಾಸದ ಸತ್ಯವೇನು? "ದ್ರಾವಿಡ"ರು ಪಟ್ಟಣಿಗರಾಗಿದ್ದರೆ ಅವರ ದೈವವೇ ಅವರನ್ನು ಏಕೆ ಹಿಂಸಿಸಿತು? ಇಂದ್ರನಿಗೂ ಇದಕ್ಕೂ ಏನು ಸಂಬಂಧ?

೨. ವೇದೋಕ್ತವಾದ ತ್ರಿಪುರ ದಹನದ ವೃತ್ತಾಂತದಲ್ಲೂ ಆ ಕೋಟೆಗಳು ಕಬ್ಬಿಣದಿಂದ ಮಾಡಲ್ಪಟ್ಟನೆಂದು ಏಕೆ ಹೇಳಲ್ಪಟ್ಟಿದೆ? "ಹತ್ವೀ ದಸ್ಯೂನ್‌ಪುರ ಆಯಸೀಃ ನಿತಾರೀತ್" (ಋ. ಸಂ. II–20–8) ತೈತ್ತಿರೀಯ ಸಂಹಿತೆಯಲ್ಲಿ (VI–2–3) "ತೇಷಾಂ ಅಸುರಾಣಾಂ ತಿಸ್ರಃ ಪುರ ಆಸನ್ ಅಯಸ್ಮಯ್ಯವಂ ಅಥ ರಜತಾ ಅಥ ಹರಿಣೀ ತಾ ದೇವಾ ಜೇತುಂ ನಾಶಕ್ನುವರ್ನ...." ಎಂಬಂತೆ ಈ ಕೋಟೆಗಳು ಕ್ರಮವಾಗಿ ಕಬ್ಬಿಣ, ಬೆಳ್ಳಿ, ಚಿನ್ನ ಇವುಗಳಿಂದ ನಿರ್ಮಿತವಾಗಿದ್ದು, ದೇವತೆಗಳಿಗೆ ಅಭೇದ್ಯವಾಗಿದ್ದುವೆಂದು ಏಕೆ ಹೇಳಿದೆ? "ದಸ್ಯು"ಗಳು ಚಾರಿತ್ರಿಕ ಜನಾಂಗವಾದರೆ. ಈ ಕೋಟೆಗಳೂ ಚಾರಿತ್ರಿಕವೇ? ಅಂದರೆ ದಸ್ಯುಗಳ ಕೋಟೆಗಳು ನಿಜವಾಗಿ ಬೆಳ್ಳಿ ಬಂಗಾರಗಳಿಂದ ಕಟ್ಟಲ್ಪಡುತ್ತಿದ್ದು

ವೆಂದು ಅರ್ಥವೇ? ಇಲ್ಲದಿದ್ದರೆ ಒಂದೇ ವೇದದಲ್ಲಿ ಬರುವ ಒಂದು ವಿಷಯವು ಚಾರಿತ್ರಿಕವೆಂದೂ, ಇನ್ನೊಂದು ಅಲ್ಲವೆಂದೂ ಹೇಳಲು ಆಧಾರ ಏನು? ಎಲ್ಲಿ ಇಂದಿನ ಸಂಶೋಧಕನಿಗೆ ನಂಬಿಕೆ ಅಶಕ್ಯವೋ ಅದನ್ನು ವೈಯಕ್ತಿಕವಾಗಿ ಅಲ್ಲಗಳೆದು ಬರೆಯುವುದು "ವೈಜ್ಞಾನಿಕ ಪದ್ಧತಿಯ ಸಂಶೋಧ"ನೆಯೇ? ಒಂದು ವೇಳೆ ತೈತ್ತಿರೀಯ ಸಂಹಿತೆಯ ವೃತ್ತಾಂತವು "ಈಚಿನ"ದೆನಿಸಿ ಋಕ್ಸಂಹಿತೆಯ ವೃತ್ತಾಂತಕ್ಕೆ ಸಂಬಂಧಿಸದೇ "ಬ್ರಾಹ್ಮಣರು, ಪುರೋಹಿತ ಶಾಹಿಯನ್ನು ಉಳಿಸಿಕೊಳ್ಳಲು ಬರೆದುಕೊಂಡು"ದಾದರೆ, ಸಹಸ್ರಾರು ವರ್ಷಗಳ ಪರಂಪರೆಯಿಂದ ವೈದಿಕ ಇತಿಹಾಸಗಳ ಮಾರ್ಮಿಕಾರ್ಥವನ್ನು ಕಾಪಾಡಿಕೊಂಡು ಬಂದ, ವೇದಗಳಷ್ಟೇ ಅಢ ಇತರ ಭಾಗಗಳೇ ಹೀಗೆ ಅಪ್ರಾಮಾಣಿಕವೆಂದು ಬಗೆಯಲ್ಪಡುವುದಾದರೆ, ಇನ್ನು "ಸಂಶೋಧಕನ" ಮನಸ್ಸಿನ ಹಿನ್ನೆಲೆ, ಅವ[illegible]ದ್ಧಾಂತ ರಹಸ್ಯಗಳು ಯಾವ ದೃಷ್ಟಿಯಿಂದ ಇದಕ್ಕಿಂತ ಹೆಚ್ಚು ಪ್ರಾಮಾಣಿಕ? ನಿರುಕ್ತ, ಸಾಯಣಭಾಷ್ಯ, ಪಂಡಿತಪರಂಪರೆ ಮುಂತಾದ ಸಕಲ ಭಾರತೀಯ ವೇದಾರ್ಥ ಪ್ರಯತ್ನಗಳನ್ನೂ ಒಂದೇ ಏಟಿಗೆ ಅಪ್ರಾಮಾಣಿಕವೆಂದು ಎಸೆದು, ತಲೆಗೆ ಬಂದುದನ್ನೇ ಹೇಳುವವರು ಹೇಗೆ ಪ್ರಾಮಾಣಿಕರು?

೩. ತೈತ್ತಿರೀಯ ಸಂಹಿತೆಯಿರಲಿ; ಐತರೇಯ ಬ್ರಾಹ್ಮಣವೂ ಸಹ (IV-6) "ದೇವಾಸುರಾ ವಾ ಏಷು ಲೋಕೇಷು ಸಮಯತಂತ ತೇವಾ ಅಸುರಾ ಇಮಾನೇವ **ಲೋಕಾ**ಣ **ಪುರೋಽಕುರ್ವತ** ಓಜೀಯಾಂಸೋ ಬಲೀಯಾಂಸ ಏವಂ ತೇ ವಾ **ಅಯಸ್ಮಯೀಮೇವೇಮಾಂ ಅಕುರ್ವತ ರಜತಾಂ ಅಂತರಿಕ್ಷಂ ಹರಿಣೀಂ ದಿವಂ....**" ಅಸುರರು ಈ ಲೋಕವನ್ನೇ ಕಬ್ಬಿಣದ ಕೋಟೆಯನ್ನಾಗಿಯೂ, ಅಂತರಿಕ್ಷವನ್ನೇ ಬೆಳ್ಳಿಯ ಕೋಟೆಯನ್ನಾಗಿಯೂ, ದ್ಯುಲೋಕವನ್ನೇ ಚಿನ್ನದ ಕೋಟೆಯನ್ನಾಗಿಯೂ ಮಾಡಿಕೊಂಡು ಓಜಸ್ವಿಗಳೂ, ಬಲಿಷ್ಠರೂ ಆಗಲು ಯತ್ನಿಸಿದರು...ಮುಂತಾಗಿ ಏಕೆ ವರ್ಣಿಸುತ್ತಿದೆ? ತ್ರಿಲೋಕಗಳೂ, ತ್ರಿಗುಣಮಯಗಳಾಗಿ (ಸತ್ತ್ವ, ರಜಸ್ಸು, ತಮಸ್ಸು, ಬಿಳಿ, ಕಪ್ಪು, ಹೊಂಬಣ್ಣದ ಸಂಕೇತಾರ್ಥಗಳಾಗಿ) ಅಸುರರಿಗೆ ಕೋಟೆಗಳಾದುವು ಎಂಬ ಅರ್ಥ ಸ್ಪಷ್ಟವಿರುವಾಗ ಕೇವಲ ವಾಚ್ಯಾರ್ಥದಲ್ಲಿ ನಿಜವಾದ ಕೋಟೆಗಳನ್ನು ಹುಡುಕುವುದು ಸಾಧುವೇ?

೪. ವೇದಗಳು ಜನಸಾಮಾನ್ಯರ "ಸಂಸ್ಕೃತಿ"ಯನ್ನು ಪ್ರತಿಬಿಂಬಿಸುವುವೇ, ಅಥವಾ ಅಲ್ಲಿ ಉಕ್ತವಾಗಿರುವ ಋಷಿಗಳ ಜೀವನದ ಹಿನ್ನೆಲೆಯನ್ನು ಮಾತ್ರ ಪ್ರತಿಬಿಂಬಿಸುವುವೇ? ಹತ್ತಾರು ಋಷಿಗಳು, ಅರಣ್ಯವಾಸಿಗಳಾಗಿದ್ದು, ನದಿಯ ನೀರು, ಕಾಡಿನ ಗೆಡ್ಡೆ ಗೆಣಸುಗಳನ್ನು ಆಹಾರವಾಗಿ ಹೊಂದಿ ಶಾಂತ ಜೀವನ ನಡೆಸುತ್ತಿದ್ದ ಮಾತ್ರದಿಂದ ಇವರು ನಗರಗಳನ್ನೇ ಕಾಣದ "ಅನಾಗರೀಕ"ರಾಗಿದ್ದರೆಂಬ ಸಿದ್ಧಾಂತ ಸರಿಯಾದುದೇ ? ನಗರ ಜೀವನಕ್ರಮ ಅದೇ ಕಾಲದಲ್ಲಿ ಕ್ಷತ್ರಿಯಾದಿಗಳಲ್ಲಿದ್ದು ಇದರ ವರ್ಣನೆ ವೇದದಲ್ಲಿ ಅಪ್ರಸ್ತುತವಾದುದರಿಂದ ಅದರ ಗೊಡವೆಗೆ ಹೋಗದ ಋಷಿಗಳಿಗೆ ಅವರು ವರ್ಣಿಸದ ಜೀವನದ ಇತರ ಅಂಶಗಳು ಆ ಕಾಲದಲ್ಲಿ ಗೊತ್ತೇ ಇರಲಿಲ್ಲ ಎಂಬ ಸಿದ್ಧಾಂತ ಸರಿಯೇ ? ಮಿಲ್ಟನ್ ಕವಿಯ Paradise Lost ಕಾವ್ಯದಲ್ಲಿ ಕವಿಯು ಕುರುಡನಾಗಿದ್ದನೆಂದು ವ್ಯಕ್ತವಾಗುವುದರಿಂದ ಮಿಲ್ಟನ್ನನ ಕಾಲದಲ್ಲಿ ಎಲ್ಲರೂ ಕುರುಡಾಗಿದ್ದರೆಂಬ ಸಿದ್ಧಾಂತ ಮಾಡಿದರೆ ಸರಿಯಾಗುವುದೇ ?

೫. ಇಂದ್ರನಿಂದ ನಿಗ್ರಹಿಸಲ್ಪಟ್ಟ ಶಂಬರ, ವೃತ್ರ ಮುಂತಾದವರು ಚಾರಿತ್ರಿಕ ವ್ಯಕ್ತಿಗಳೆಂಬುದಕ್ಕೇನಾಧಾರ ? ಇವರ ಕೋಟೆಗಳ ಸಂಖ್ಯೆಗಳ ಪರಮಾವಧಿಯು ೧೦೦ ಎಂದು ವೇದದಲ್ಲಿರುವುದರಿಂದ ಈ 'ದೇಶೀಯ ವೀರರಿಗೆ' ಕೇವಲ ೧೦೦ ಊರು ಮಾತ್ರ ಸೇರಿತ್ತೆಂದು ಅರ್ಥವೇ ? ಅಲ್ಲಲ್ಲಿ ವೇದದಲ್ಲಿ (VII-19-5) ಈ ಪೈಕಿ ೯೯ (ನವತೀರ್ನವ) ವನ್ನು ಇಂದ್ರನು ನಾಶಮಾಡಿ ಒಂದನ್ನು ಉಳಿಸಿದನೆಂದರೆ ಇದರ ಐತಿಹಾಸಿಕ ಸತ್ಯವೇನು ?

೬. ಇಂದ್ರನು "ಪುರ"ಗಳನ್ನು ಮಾತ್ರ ಸೀಳದೇ, "ಗುಹೆ"ಗಳನ್ನೂ, "ಬೆಟ್ಟ"ಗಳನ್ನೂ ಸೀಳಿ ಗೋವುಗಳನ್ನು ಬಿಡಿಸಿದನು ಎಂದು ವೇದದಲ್ಲಿ ಹೇಳಿರುವುದರಿಂದ, "ದ್ರಾವಿಡರು" ಪಟ್ಟಣಗಳಲ್ಲೇ ವಾಸಿಸುತ್ತಿದ್ದರೆಂಬ ಮಾತಿಗೆ ಏನರ್ಥ ? "ಆರ್ಯ"ರು ನಾಶಮಾಡಿದುದೇನನ್ನು ?

ಈ ಪ್ರಶ್ನೆಗಳಿಗೆಲ್ಲ ಸರಿಯಾದ ಉತ್ತರ ಸಿಕ್ಕಹೊರತು ಏನೂ ನಿರ್ಣಯವಾದಂತಾಗುವುದಿಲ್ಲ. ಭಾರತೀಯರ ಅತಿ ಪ್ರಾಚೀನವಾದ ಚಾರಿತ್ರಿಕ ದಾಖಲೆಯೇ ಋಗ್ವೇದವೆಂದೂ. ಇದರಲ್ಲಿ ಸೂರ್ಯೋದಯಕ್ಕೆ ಮುಂಚೆ ಬರುವ

ಹೊಂಬೆಳಕಿನಂತೆ, ನಾಗರೀಕತೆಗೆ ಮುಂಚೆ ಇರಬೇಕಾದ, ನಿಧಾನವೂ ಯಾತನಾಮಯವೂ ಆದ, ಅನಾಗರೀಕತೆಯಿಂದ ನಾಗರೀಕತೆಯ ಕಡೆಗೆ ನಡೆಯುವ, ಹೋರಾಟದ ಚಿತ್ರವಿರುವ ಬದಲು, ನೆಟ್ಟಗೆ ನೇರವಾಗಿ, ಬಲವಾದ, ಸುಸಂಸ್ಕೃತವಾದ, ಸ್ಪಷ್ಟವಾಗಿ ಭಾರತೀಯ ಮುದ್ರೆಯನ್ನು ಪಡೆದುಕೊಂಡ ಸಂಸ್ಕೃತಿಯ ಬಿಂಬವಿದೆಯೆಂದು ಬಾರ್ನೆಟ್ ಎಂಬ ಚರಿತ್ರಕಾರನು **(Antiquities of India P.I.)** ಬರೆದಿರುವುದನ್ನು ನೋಡಿದರೆ, ಇದರಲ್ಲಿ ಇದ್ದಿರಲು ಸಾಧ್ಯವಿಲ್ಲದ ವಿಷಯಗಳನ್ನೇ (ಆಂಥ್ರೊಪಾಲಜಿ ವಿಷಯದ) ಇದರಲ್ಲಿ ಹುಡುಕಲು ಹೊರಡುವವರಿಗೆ ದುರುದ್ದೇಶವಿದೆಯೆಂದು ಮಾತ್ರ ಹೇಳಬಹುದಲ್ಲವೇ? ಇತ್ತೀಚೆಗೆ "This **Rigveda** is neither an historical nor an heroic poem; but mainly a collection (Samhita) of hymns by a number of priestly families, recited or chanted by them with appropriate solemnity at sacrifices to the gods **Naturally it is poor in historical data."** ( History and Culture of the Indian People Vol 1, Vedic Age, p. 225. ) ಎಂಬ ರೀತಿಯ ಸುಜ್ಞಾನವು ಮೂಡುತ್ತಿದ್ದರೂ, ಇತರರು ಇನ್ನೂ ಹಳೆಯ ಧಾಟಿಯಲ್ಲೇ ಬರೆಯುತ್ತಿರುವುದು ಬಹು ಶೋಚನೀಯ. (ಉ. ದಾ. "ಋಗ್ವೇದಸಾರ : ನಾಗಪ್ರತಿಮಾ ವಿಚಾರ", ಶಂ. ಬಾ, ಜೋಷಿ 1971).

ವೇದವು ಋಷಿಗಳ ದರ್ಶನ ಗ್ರಂಥ. ಇಲ್ಲಿಯ ಯುದ್ಧ ವರ್ಣನೆ ಆಧ್ಯಾತ್ಮ ವಿಚಾರಕ್ಕೆ ಸಂಬಂಧಿಸಿದುದು. ಇಂದ್ರನು ದೇವತೆಗಳ ಮುಖಂಡನಾಗಿದ್ದು, ನಿತ್ಯ ನಡೆಯುವ ದೇವಾಸುರ ಯುದ್ಧದ ಮುಂಚೂಣಿಯಲ್ಲಿರುವ ಭಗವಂತನ ಕ್ಷತ್ರಾಂಶ. ಋತ ಪ್ರವಾಹಕ್ಕೆ ಉಂಟಾಗುವ ಅಡಚಣೆಗಳ ನಿವಾರಣೆಯೇ ಇಲ್ಲಿ ವರ್ಣಿತವಾಗಿರುವುದು—ಇದಿಷ್ಟು ಸ್ಪಷ್ಟ.

ಮನುಷ್ಯನ ವ್ಯಕ್ತಿತ್ತ್ವದಲ್ಲಿ ದೇವಾಸುರ ಹೋರಾಟ ನಡೆಯುತ್ತಿರುವುದರಿಂದಲೇ ಜೀವನ ಗತಿಯು ಸಾಧ್ಯವಾಗಿದೆ, ವೈವಿಧ್ಯಮಯವಾಗಿಯೂ ಇದೆ. ನಮ್ಮಲ್ಲಿರುವ ಇಂದ್ರಿಯಗಳೇ ದೇವತೆಗಳು. ಇಂದ್ರನೇ ಇವುಗಳ ಅಭಿಮಾನಿ ದೇವತೆ. **(ಜಜನದಿಂದ್ರಂ ಇಂದ್ರಿಯಾಯ, ತೈ. ಆ. III-2)**

'ಇಂದ್ರ-ಇಂದ್ರಿಯ' ಈ ಸಂಬಂಧವನ್ನು ಅನೇಕ ಕಡೆಗಳಲ್ಲಿ ಸೂಚಿಸಲಾಗಿದೆ, ವೇದ ವಾಙ್ಮಯದಲ್ಲಿ, ದೇವತೆಗಳು ಸಂಖ್ಯೆಯಿಂದ ಮಿತರೆಂದೂ (ಕಾನೀಯಸಾಃ), ಅಸುರರು ಅಪರಿಮಿತರೆಂದೂ (ಜ್ಯಾಯಸಾಃ) ತಿಳಿಸುವ ಬೃಹದಾರಣ್ಯಕ ಶ್ರುತಿಯು, ಇಂದ್ರಿಯಗಳನ್ನೂ ಪಂಚಪ್ರಾಣಗಳನ್ನೂ ವಶಪಡಿಸಿಕೊಳ್ಳಲು ನಡೆಸಿದ ಹೋರಾಟದ ವಿಷಯವನ್ನು ತಿಳಿಸುತ್ತದೆ. (I-5) ಛಾಂದೋಗ್ಯದಲ್ಲಿಯೂ, ಪಂಚಪ್ರಾಣಗಳಲ್ಲಿ (ಪಂಚೇಂದ್ರಿಯಗಳಲ್ಲಿ) ಮುಖ್ಯ ಪ್ರಾಣವೊಂದನ್ನು ಬಿಟ್ಟು ಉಳಿದುದನ್ನು ಅಸುರರು ಭೇದಿಸಿದ ವಿಷಯ ಹೇಳಿದೆ. ( I-2.)ಇಂಥ ವಿಷಯಗಳನ್ನೇ ಅಲ್ಲೇ ಮುಂದೆ ( I-3 ) ಯಲ್ಲಿಯೂ. ಕೌಷೀತಕೀ ಉಪನಿಷತ್ತಿನಲ್ಲಿಯೂ ( 2-3 ) ಹೀಗೆ ಅನೇಕ ಕಡೆ ಹೇಳಿದೆ. ಇಂದ್ರಿಯಗಳಲ್ಲಿ ವಾಸಿಸುವ ದೇವತೆಗಳು ಹೀಗೆ ಅಸುರರಿಂದ ಸುರಕ್ಷಿತರಲ್ಲವೆಂಬ ಭಾವವೇ ಇಲ್ಲಿ ವಿವಕ್ಷಿತ. "ಭದ್ರಂ ಕರ್ಣೇಭಿಃ ಶೃಣುಯಾಮ ದೇವಾಃ ಭದ್ರಂ ಪಶ್ಯೇಮ ಅಕ್ಷಭಿಃ ಯಜತ್ರೈ...ವ್ಯಶೇಮ ದೇವಹಿತಂ ಯದಾಯುಃ" ಇತ್ಯಾದಿ ಶ್ರುತಿಯಲ್ಲಿಯೂ ಮನುಷ್ಯನು ಬದುಕಿರುವ ತನಕ ಇಂದ್ರಿಯಗಳ ಮೂಲಕ ದೇವಹಿತಕ್ಕಾಗಿಯೇ ಶ್ರಮಿಸಬೇಕೆಂಬ ಆಸೆ ವ್ಯಕ್ತವಾಗಿದೆ.

ಆದರೆ "ಇಂದ್ರಿಯ"ಗಳ ಮೂಲಕವೇ ಮಾನವನ ಅಧಃಪಾತವೂ ಬಹು ಜನರ ಪಾಲಿಗೆ ಆಗುವುದಕ್ಕೆ, ಅವುಗಳ ಅಭಿಮಾನಿಯಾದ ದೇವತೆಗಳಾಗಲೀ, ಅವರ ಒಡೆಯನಾದ "ಇಂದ್ರ"ನಾಗಲೀ ಕಾರಣವಲ್ಲ; ಇವರ ಕೈಗಳನ್ನು ಭದ್ರಪಡಿಸದೇ. ಆಸುರೀ ಶಕ್ತಿಗಳ ಕಡೆ ಸಹಾಯ ಮಾಡುವ ಮಾನವನದೇ ಇಲ್ಲಿ ಹೊಣೆ. ಇಂದ್ರನು ಅನೇಕ ಯುದ್ಧಗಳಲ್ಲಿ ಅಸುರರಿಗೆ ಸೋತು ಓಡಿ ಹೋದ ಪ್ರಸ್ತಾಪವು ಬಂದಾಗಲೆಲ್ಲಾ, ದೇವತೆಗಳಿಗೆ ದ್ರೋಹ ಮಾಡುವ ಮಾನವನ ಆತ್ಯಂತಿಕ ಸೋಲನ್ನೇ ವರ್ಣಿಸಿದಂತಾಗಿದೆ. "ಇಂದ್ರನ" ವಿಜಯಕ್ಕೆ, ಇಂದ್ರಿಯಗಳ ಸಹಕಾರ ಅವಶ್ಯ. ಇಂದ್ರಿಯಗಳು ಸಹಕರಿಸಬೇಕಾದರೆ, ಇಂದ್ರಿಯ ನಿಗ್ರಹ ಅವಶ್ಯ.

ಇಲ್ಲಿ ಇನ್ನೊಂದು ಮರ್ಮವಿದೆ. ಇಂದ್ರನು ಅಸುರರೊಡನೆ ನಡೆಸುವ ನಿರಂತರ ಯುದ್ಧವು ಒಂದು ಬಗೆಯದಾದರೆ, ಇಂದ್ರನು ಋಷಿ-ಮುನಿಗಳಾಗಲು ಪ್ರಯತ್ನಿಸುವ, ಸೋಗು ಹಾಕುವ, ಸಾಧಕರನ್ನು

ಪರೀಕ್ಷಿಸಲು ಒಡ್ಡುವ ಪ್ರಲೋಭನಾ ರೂಪವಾದ ಯುದ್ಧವೂ ಇನ್ನೊಂದು ಬಗೆಯದು. ಇದರಲ್ಲಿ ಲೋಕ ಸಂಗ್ರಹ ಬುದ್ಧಿ ಇದೆ. ಸಿಕ್ಕಿದವರೆಲ್ಲ ಋಷಿಗಳೆಂದು ಎನಿಸಿಕೊಂಡರೆ ಏನು ಗತಿ? ಇದಾಗದೆ, ಯೋಗ್ಯನಾದವನಿಗೆ ಮಾತ್ರ ಬ್ರಹ್ಮಜ್ಞಾನವೂ, ಪೂಜ್ಯತೆಯೂ ಸಂದು, ಉಳಿದವರನ್ನು ಸೋಲಿಸಲು ಮೊದಲು "ಇಂದ್ರ"ನನ್ನು ಗೆಲ್ಲುವುದು (ಇಂದ್ರಿಯ ನಿಗ್ರಹ) ಅವಶ್ಯ. ಇಲ್ಲಿ ಹೀಗೆ ಸೋತರೂ, ಇದು ನಿಜವಾಗಿ ಇಂದ್ರನ ವಿಜಯವೇ! ಇದನ್ನು ತಿಳಿಯದೇ ಭ್ರಾಂತರಾದ ವೇದದ್ವೇಷಿಗಳನೇಕರು ಇಂದ್ರನು ಚಪಲನೆಂದೂ, ತಪೋಭಂಗ, ತಪಸ್ವಿಯರ ನಾಶ, ತಪಸ್ವಿನಿಯರ ಮಾನಹರಣ-- ಇವುಗಳನ್ನೇ ಉದ್ಯೋಗವನ್ನಾಗಿವುಳ್ಳ ಇವನು ದೇವತೆ ಹೇಗೆ ಆದಾನೆಂದೂ ಮುಂತಾಗಿ ಅಪಪ್ರಚಾರ ನಡೆಸುತ್ತಿರುವುದು ಮೌಢ್ಯದ ಇನ್ನೊಂದು ಪರಮಾವಧಿಯಷ್ಟೆ! ಪರೀಕ್ಷಕರಿಗೆ ವಿದ್ಯಾರ್ಥಿಗಳನ್ನು ನಪಾಸು ಮಾಡುವುದೇ ಉದ್ಯೋಗವೆಂದು ಈಗಿನ ವಿದ್ಯಾರ್ಥಿಗಳು ವಾದಿಸುವಂತಿದೆ ಈ ವಾದ!

ಉದಾಹರಣೆಗೆ ಗೌತಮ-ಅಹಲ್ಯಾ ಪ್ರಸ್ತಾಪದಲ್ಲಿ ಬರುವ ಇಂದ್ರನ ಪಾತ್ರವನ್ನು ವಿವೇಚಿಸೋಣ. (ಈ ಪ್ರಸಂಗವು ತೈ. ಆ. I-12ರಲ್ಲೂ ಶತಪಥ ಬ್ರಾಹ್ಮಣ III-3-4-18ರಲ್ಲೂ, ಷಡ್ವಿಂಶ ಬ್ರಾಹ್ಮಣ I-1-19 ರಲ್ಲೂ ಬಂದಿದ್ದು ಲಾಟ್ಯಾಯನ ಶ್ರೌತಸೂತ್ರ I-3-1ರಲ್ಲಿ ಎತ್ತಲ್ಪಟ್ಟಿದೆ. ಋಕ್ಸಂಹಿತೆಯಲ್ಲಿ ಈ ವಿಷಯವಿಲ್ಲವಾದರೂ, ಸಂದಿಗ್ಧಾರ್ಥದ ದುರುಪಯೋಗವನ್ನು ಅನೇಕರು ಮಾಡಿಕೊಳ್ಳುತ್ತಿರುವುದರಿಂದ ಇಲ್ಲಿ ವಿವರಿಸಲ್ಪಡುವುದು. ಶ್ರೀಮದ್ರಾಮಾಯಣದಲ್ಲಿ ಬಾಲಕಾಂಡ ೪೮-೪೯ ಸರ್ಗಗಳಲ್ಲಿ ಇದರ ವಿವರವಿದೆ.) ಋಷಿಗಳ ಮನೋಭಾವವನ್ನು ಸರಿಯಾಗಿ ಗ್ರಹಿಸುವುದು ಅವಶ್ಯ.

ಅಹಲ್ಯೆಯು ಗೌತಮರ ಪತ್ನಿಯಾಗಿದ್ದು ಮಹಾರೂಪಸಂಪನ್ನೆಯಾಗಿದ್ದವಳು, ಉಗ್ರ ತಪಸ್ವಿಗಳಾದವರು ಗೌತಮರು. ಅಹಲ್ಯೆಗೆ ಬಹುಕಾಲದಿಂದ "ಇಂದ್ರ" (ಇಂದ್ರಿಯ) ಕುತೂಹಲವಿದ್ದಿತೆಂದು ಆಖ್ಯಾನದಲ್ಲಿ ಹೇಳಲಾಗಿದೆ. ಇದನ್ನು ತಿಳಿದೇ ಇಂದ್ರನು ಗೌತಮವೇಷದಲ್ಲಿ ಒಮ್ಮೆ ಕಾಣಿಸಿಕೊಂಡನಂತೆ: "ತಸ್ಯಾಂತರಂ ವಿದಿತ್ವಾ ತು ಸಹಸ್ರಾಕ್ಷಃ" (ರಾ.ಬಾ. 48-17) ಇದು ಅಹಲ್ಯೆಯ ಮೊದಲ ತಪ್ಪು. ಇಂದ್ರನು

ಮುನಿಯಾದ ಗೌತಮ ವೇಷದಲ್ಲಿ ಬಂದನೆಂದರೆ ಏನರ್ಥ ? ದೇವತೆಗಳು ಪರೋಕ್ಷಪ್ರಿಯರಾದುದರಿಂದ ಪ್ರತ್ಯಕ್ಷವಾಗಿ ಕಾಣಿಸಿಕೊಳ್ಳಲಾರರಷ್ಟೆ ? ಹಾಗಾದರೆ ಅಹಲ್ಯೆಗೆ "ಇಂದ್ರ" ದರ್ಶನವಾದುದು ಇಂದ್ರ ರೂಪದಲ್ಲಲ್ಲ ! ಗೌತಮ ರೂಪದಲ್ಲಿ; ಎಂದರೆ ಗೌತಮ ಶರೀರದಲ್ಲಿ ಆವಾಹಿತನಾದ, ಆವೇಶಿತನಾದ "ಇಂದ್ರ"ನನ್ನು ಅಹಲ್ಯೆಯು ಕಂಡಳು. ಅವಳಿಗೆ, ಎದುರು ಗಂಡನೇ ನಿಂತಿದ್ದಾಗ ಅಲ್ಲಿ ವಸ್ತುತಃ ಇರುವವನು "ಇಂದ್ರ"ನೇ ಎಂದು ತಿಳಿದು ಹೇಗೆ ? ಎಂದರೆ, ಆ ವರೆಗೆ ಮಹಾವಿರಕ್ತರಾದ ಗೌತಮರ ಬಾಯಲ್ಲಿ ಹಿಂದೆಂದೂ ಬಾರದ ಒಂದು ಮಾತು ಬಂದಿತು :

"ಋತುಕಾಲಂ ಪ್ರತೀಕ್ಷಂತೇ ನಾರ್ಥಿನಃ ಸುಸಮಾಹಿತೇ..." "ಕಾಮಾರ್ಥಿಗಳಾದವರಿಗೆ, ಋತುಕಾಲದಲ್ಲಿ ಮಾತ್ರ ಪತ್ನೀ ಸಂಗಮವೆಂಬ ನಿಯಮವಿಲ್ಲ..."

ವೈದಿಕ ಜೀವನ ಕ್ರಮದಲ್ಲಿ ಪತಿ-ಪತ್ನಿಯರು ಎಷ್ಟೊಂದು ಅನ್ಯೋನ್ಯ ಭಾವದಿಂದಿದ್ದರೂ, ಇಂದ್ರಿಯ ಜಯ ಪೂರ್ವಕವಾಗಿ, ನಿಷಿದ್ಧ ತಿಥಿ ವಾರ ಕಾಲಗಳನ್ನು ವರ್ಜಿಸಿ, ಸಂಗಮಿಸಿ, ಸತ್ಸಂತಾನ ಕಾರಣರಾದರೆ ಅವರನ್ನು ಬ್ರಹ್ಮಚಾರಿಗಳೆಂದೇ ಸ್ಮೃತಿಗಳು ಕೊಂಡಾಡುತ್ತವೆ. (ವಸಿಷ್ಠರು ನಿತ್ಯಬ್ರಹ್ಮ ಚಾರಿಗಳೆಂದು ಖ್ಯಾತರಾದುದೇ ಹೀಗೆ.) ವಿಹಿತ ಕಾಲದಲ್ಲಿ ಪತ್ನಿಯನ್ನು ಪೇಕ್ಷಿಸಿಯೂ, ಅವಿಹಿತ ಕಾಲದಲ್ಲಿ ಸಂಗಮಿಸಿಯೂ, ಇಂದ್ರಿಯ ನಿಗ್ರಹವಿಲ್ಲ ದಿರುವವನು ಪತಿತನಾಗುತ್ತಾನೆಂದು ಯಾಜ್ಞವಲ್ಕ್ಯಸ್ಮೃತಿಯಲ್ಲಿ ಹೇಳಿದೆ.

ವಿಹಿತಸ್ಯ ಅನನುಷ್ಠಾನಾತ್ ನಿಂದಿತಸ್ಯ ಚ ಸೇವನಾತ್।
ಅನಿಗ್ರಹಾಚ್ಚೇಂದ್ರಿಯಾಣಾಂ ನರಃ ಪತನಮೃಚ್ಛತಿ ॥
(1V-5-219)

ಹೀಗೆ ಅಕಾರ್ಯಕ್ಕೆ, ಅಕಾಲದಲ್ಲಿ, ಅಕ್ರಮ ಪ್ರೇರಣೆಯನ್ನು ಹೊಂದಿದ ಅಹಲ್ಯೆಯು "ಮುನಿವೇಷಂ ಸಹಸ್ರಾಕ್ಷಂ ವಿಜ್ಞಾಯ", "ಇವನು ಈಗ ಗೌತಮ ಋಷಿಯಲ್ಲ, ಇಂದ್ರನೇ" ಎಂದು ತಿಳಿದೂ, "ದೇವರಾಜ ಕುತೂಹಲಾತ್" (ಇಂದ್ರಿಯ) "ಇಂದ್ರ" ಚಾಪಲ್ಯದಿಂದ ಅಕಾರ್ಯಕ್ಕೆ ಒಡಂಬಟ್ಟಳಂತೆ ! ಇದು ಅವಳ ಎರಡನೆಯ ತಪ್ಪು. ಇವಳಿಗೆ (ಇಂದ್ರಿಯ)

"ಇಂದ್ರ" ಜಯವಿದ್ದುದಾದರೆ, ಆಗ ಗೌತಮ (ಶರೀರಸ್ಥನಾದ ಇಂದ್ರ)ನಿಗೆ ಪಾಪ ಸಂಭವವಿರಲಿಲ್ಲ:

ನಾನಿಷ್ಟಾಂ ನ ಪ್ರಕುಪಿತಾಂ ನಾಪ್ರಶಸ್ತಾಂ ನ ರೋಗಿಣೀಂ ।
ನಾ ದಕ್ಷಿಣಾಂ ನಾನ್ಯಕಾಮಾಂ ನಾಕಾಮಾಂ ನಾನ್ಯಯೋಷಿತಂ ॥

ಇತ್ಯಾದಿ ವ್ಯಾಸಸ್ಮೃತಿ ವಾಕ್ಯದಂತೆ, ಇಷ್ಟವಲ್ಲದ, ಕಾಮರಹಿತಳಾದ ಭಾರ್ಯೆಯನ್ನು ಪತಿಯು ಬಲಾತ್ಕರಿಸಬಾರದೆಂಬ ನಿರ್ಬಂಧವಿರುವುದರಿಂದ, ಆಗ ಗೌತಮರಿಗಾಗಲೀ. ತನಗಾಗಲೀ ಪಾಪ ಸಂಭವವಿರಲಿಲ್ಲ. ಒಂದು ವೇಳೆ ಪತಿಯು ಇಂದ್ರಿಯ ನಿಗ್ರಹ ಕಳೆದುಕೊಂಡರೂ, ಪತ್ನಿಯು ದುರ್ಮಾರ್ಗಕ್ಕೆ ಒಡಂಬಡಬಾರದೆಂಬ ನಿಬಂಧನೆಯಿದೆ. ಹೀಗೆ ಇದನ್ನು ಮುರಿದದ್ದು ಅಹಲ್ಯೆಯ ದೋಷವೆನಿಸಿತು. (ತಪೋಭಂಗವಾದ ಶಾಸ್ತಿ ಗೌತಮರಿಗೆ ಸಾಕು. ಆದರೂ ಅವರು ತಪೋರೂಪ ಪ್ರಾಯಶ್ಚಿತ್ತ ಮಾಡಿಕೊಂಡರು.) ಇದೇ "ಇಂದ್ರನ" ಅಹಲ್ಯಾಗಮನ; ಇಂದ್ರನ ಪಾತ್ರ ಇಲ್ಲಿ ಗೌತಮ-ಅಹಲ್ಯೆಯವರ ಮನೋಜಿತವನ್ನು ಪರೀಕ್ಷಿಸುವುದು; ಇದನ್ನು ಅವನು ಮಾಡದಿದ್ದರೆ "ಇಂದ್ರ"ನ ಇಂದ್ರತ್ವಕ್ಕೇನು ಅರ್ಥ ?

ದೈವಾಸುರ ಸ್ಪರ್ಧೆಯ ರೂಪದಲ್ಲಿಯೇ ಜೀವನವು ಎಂದಿನಿಂದಲೂ ಸಾಗಿದೆ. ದೇವತೆಗಳ ವಿಜಯವಾಗಿ ದೇವತೆಗಳು ಸೋತಾಗ, ಜೀವನದ ಮುನ್ನಡೆಯೂ, ಅಸುರ ವಿಜಯವಾಗಿ ದೇವತೆಗಳು ಸೋತಾಗ, ಹಿನ್ನಡೆಯೂ ಆಗುತ್ತಿದೆ. ಇಂದ್ರಿಯಗಳೂ ಅಸುರರಿಗೆ ಭೇದ್ಯವಾಗಿ, ವಶವಾದಾಗ, ಭೋಗವರ್ಧನೆಯ ರೂಪದಲ್ಲಿ ಅಸುರ ಶಕ್ತಿಗಳ ಮುನ್ನಡೆಯೂ ಸಾಧ್ಯವೆಂಬುದನ್ನು ಹಿಂದೆ ಛಾಂದೋಗ್ಯ ಶ್ರುತಿವಾಕ್ಯದಲ್ಲಿ ತೋರಿಸಲಾಗಿದೆ. ಹೀಗೆ "ಇಂದ್ರಿಯ ನಿಗ್ರಹ"ವೆಂದರೆ, ವಸ್ತುತಃ ಇಂದ್ರಿಯಗಳಲ್ಲಿ ಆವಾಹಿತವಾದ ಅಸುರ ಪ್ರವೃತ್ತಿಯ ನಿಗ್ರಹವೇ ವಿನಾ, ಇಂದ್ರಿಯಗಳ ವಿನಾಶವಲ್ಲ. ಇಂದ್ರಿಯ 'ನಿಗ್ರಹ'ದಲ್ಲಿ, ಇಂದ್ರಿಯಗಳ ದೈವೀ ಶಕ್ತಿವೃದ್ಧಿಯೂ, ಇಂದ್ರಿಯಗಳ 'ವಿಜಯ'ದಲ್ಲಿ ದೇವತೆಗಳ ಪರಾಜಯವೂ ಅಡಗಿದೆ ["ಇಂದ್ರಿಯ" ನಿಗ್ರಹವೆಂದರೆ. ಇಂದ್ರನ ಪತನವೆಂದೂ, ಇದನ್ನು ಬೋಧಿಸುವ "ನಿವೃತ್ತಿ" ಮಾರ್ಗವು (ಋಷಿ-ಮುನಿ ದರ್ಶಿತವಾಗಿ), ಆ

ಹಿಂದೆ ಸನಾತನವಾಗಿದ್ದ 'ಆರ್ಯ' (ಚಾರ್ವಾಕ ?) ಸಂಸ್ಕೃತಿಯನ್ನು ತೊಡೆದು ಹಾಕಿ, ಅಲ್ಲಿ "ನಾಗಪೂಜೆ"ಯನ್ನೂ, ವಾಮಾಚಾರ ಪೂರ್ವಕವಾದ "ಮಾತೃಪೂಜೆ"ಯನ್ನೂ ಅಲ್ಲಿ ತಂದಿಟ್ಟರೆನ್ನುವ ಶಂ. ಬಾ. ಜೋಶಿಯವರ ವಿಚಿತ್ರವೂ, ವಿನೋದಕರವೂ ಆದ ವಾದವು, ವಿಪರ್ಯಾಸರೂಪದ್ದಾಗಿದ್ದು, ಒಳ-ಹೊರಗಿನ ಕಣ್ಣು ಕುರುಡುತನದ "ಸಾಕ್ಷಿ"ಯಾಗಿದೆ ! ಏನು ಕನಸು ಕಂಡರೋ, ಯಾರಿಂದ ಪ್ರೇರಿತರೋ, ಎಲ್ಲಿಂದ ಸ್ಫೂರ್ತಿಯೋ ಅವರೇ, ಸಾಧ್ಯವಾದರೆ, ಹೇಳಬೇಕು !]

ಹೀಗೆ ಸರ್ವದಾ ಶುದ್ಧ ಜೀವನರಾಗಿದ್ದ ಗೌತಮ ಅಹಲ್ಯೆಯರ ಜೀವನದಲ್ಲಿ ಸಂಭವಿಸಿದ ಈ ಘಟನೆ, ಭಾರತೀಯರಿಗೆ ಚಿರಂತನ ಕಾಲ ನೀತಿಬೋಧಕವಾಗಿವೆಯೆಂಬುದನ್ನು ನೆನಪಿಸುವುಕ್ಕಾಗಿ, "ಅಹಲ್ಯಾಜಾರ"ನೆಂಬ ವಿಶೇಷಣವು ವೇದೋಕ್ತವಾಗಿ ಇಂದ್ರನಿಗೆ ಬಂದಿದೆ. ಇದರಲ್ಲಿ ಇಂದ್ರನ 'ಪತನ' ಸೂಚನೆಯಿದ್ದರೆ, ಇದನ್ನು ಮರೆಮಾಚುವ ಬದಲು, ಶ್ರುತಿವಾಕ್ಯದಲ್ಲಿ ಏಕೆ ತರಲಾಯಿತೆಂದು ವಿವರಿಸುವುದು ಕಷ್ಟ. ಋಷಿಗಳು ಪ್ರಾಮಾಣಿಕರಾಗಿದ್ದು ಲೋಕಸಂಗ್ರಹ ಬುದ್ಧಿಯಿಂದ ಮಾಡಿದ ಒಂದು ಸೇವೆಯನ್ನು, ಅವರ "ದಡ್ಡತನದ", "ಅವಿವೇಕ"ದ ಸಾಕ್ಷಿ ಎಂದು ಬಗೆಯುವವರು ಯಾರಿಗೆ ಸೇವೆ ಮಾಡಿದಂತಾಯಿತು. ಯಾರಿಗೆ ದ್ರೋಹ ಮಾಡಿದಂತಾಯಿತು. ಎಂದು ವಿವೇಕಿಗಳು ಯೋಚಿಸಲಿ !

ಎಂದೂ ಸುಳ್ಳು ಹೇಳದವನೊಬ್ಬನು, ಒಂದು ದಿನ, ಒಂದು ಕ್ಷಣ ಸುಳ್ಳು ಹೇಳುವುದೆಂದರೆ ಮಹಾಪಾತಕವೆಂದು ಬಗೆಯಲ್ಪಡುತ್ತಿದ್ದ ಕಾಲ. ಋಷಿಗಳದ್ದಾಗಿತ್ತು. ಕೈಕೇಯೀ ವರಮೋಹಿತನಾದ ದಶರಥನನ್ನು, ಶ್ರೀ ವಾಲ್ಮೀಕಿ ಮಹರ್ಷಿಗಳು, ವರ್ಣಿಸುವಾಗ **"ಉಕ್ತ ಅನೃತಂ ಋಷಿಂ ಯಥಾ"** (ಅಯೋ XVIII-6) ಎಂಬ ಹೋಲಿಕೆಯಿಂದ ವರ್ಣಿಸಿದ್ದಾರೆ, ಸ್ವಯಂ ಎಂದೂ ತಾವು ಸುಳ್ಳಾಡಿಲ್ಲವೆಂದು ತಮ್ಮ ತಂದೆಯ ಮೇಲೆ ಆಣೆಯಿಟ್ಟು ಶ್ರೀರಾಮ ಸನ್ನಿಧಿಯಲ್ಲಿ ಪ್ರತಿಜ್ಞೆ ಮಾಡಿದ ಈ ಧೀರರು :

**ಪ್ರಚೇತಸೋಽಹಂ ದಶಮಃ ಪುತ್ರೋ ರಾಘುವನಂದನ ।**
**ನ ಸ್ಮರಾಮ್ಯನೃತಂ ವಾಕ್ಯಂ ಇಮೌ ತು ತವಪುತ್ರಕೌ ॥**

(ಉತ್ತರ 96-19)

ಎಂಬಂತೆ, ಸತ್ಯಪ್ರಜ್ಞರೂ, ಸತ್ಯವಾಕ್ಯರೂ ಆದುದರಿಂದ ಅವರಿಗೆ ಈ ಉಪಮಾನ ಸಾಧ್ಯವಾಯಿತು. ದಿನವೂ ಸುಳ್ಳನ್ನೇ ಹೇಳಿ ಬದುಕುವವನು ಈ ಮಾತುಗಳನ್ನೋದಿ, "ಋಷಿಗಳಿಗೂ ಸುಳ್ಳು ಹೇಳುವುದು ಗೊತ್ತಿರಬೇಕು. ಇಲ್ಲದಿದ್ದರೆ ಈ ಮಾತು ಏಕೆ?" ಎಂದು ವ್ಯಾಖ್ಯಾನಿಸಿದರೆ, ಅವನಿಗೆ ಆದ ಲಾಭವೇನು ? ಋಷಿಗಳಿಗಾದ ನಷ್ಟವೇನು ? "ಅನೇಕ ವರ್ಷಕಾಲ ಜಿತೇಂದ್ರಿಯರಾಗಿ ಸಂಸಾರ ನಡೆಸುತ್ತಿದ್ದ ಗೌತಮರಲ್ಲಿಯೂ ಒಂದು ದಿನ "ಇಂದ್ರಾ"ವಾಹನೆಯಾಯಿತು. ಇಂತಹ ಅಹಲ್ಯೆಯಲ್ಲಿಯೂ (ಇಂದ್ರಿಯ) ಮೋಹವಾಯಿತು" ಎಂದ ಮಾತ್ರದಿಂದ, ಅವರು ಅಯೋಗ್ಯರೆಂದು ಹೇಳಿ ದಂತಾಗಲಿಲ್ಲ ! ಇಂದ್ರಿಯಗಳ ಬಲಾಢ್ಯತೆಯನ್ನು ನೆನಸಿಸಿ, ಅವರ ಪಾಡೇ ಹಾಗಾದರೆ, ನಾವು ಹೇಗಿರಬೇಕೆಂದು ಎಚ್ಚರಿಸುವುದಕ್ಕಾಗಿಯೇ ಮಾತ್ರ. ಗಂಡ ಹೆಂಡಿರೇ ಆದರೂ, (ಈಗಿನ ಅನೇಕರಿಗೆ ರುಚಿಸದ) ಕೆಲವೊಂದು ಸನಾತನ ನಿಯಮಗಳನ್ನು ಪಾಲಿಸುತ್ತಿದ್ದವರಲ್ಲಿ, ಈ ಕಾಲದಲ್ಲಿ ಸರ್ವಥಾ ಪಾಪವೆನಿಸಲಾರದ, ಆದರೆ ಆ ಕಾಲದಲ್ಲಿ ಅತಿಘೋರಪಾತಕವೆಂದೆನಿಸಲ್ಪಟ್ಟ ಒಂದು ವೃತ್ತಾಂತ ಇದು. ಇದಕ್ಕಾಗಿ ಅವರು ಮಾಡಿಕೊಂಡ ಪ್ರಾಯಶ್ಚಿತ್ತ ಎಂಥದು? ಇನ್ನು ಗೌತಮ–ಅಹಲ್ಯೆಯರ ವಿಚಾರಣೆಯಲ್ಲಿ ತೊಡಗುವವರು ಇವರಿಗಿಂತ ಹೆಚ್ಚು ಕಠಿಣ ತಪಸ್ಸನ್ನು ಮೊದಲು ಆಚರಿಸಿ ತೋರಿಸಿದರೆ, ಮುಂದೆ ಅವರ ಮಾತಿನ ಸಾರಾಸಾರ ಪರೀಕ್ಷೆಯನ್ನು ನಡೆಸೋಣ, ಅಲ್ಲವೆ ?

**"ಅಹಲ್ಯಾಯೈ ಜಾರ!"** ಎಂದು ಇಂದ್ರನನ್ನು ಸಂಬೋಧಿಸಿದ್ದರಿಂದ "ಇಂತಹ ಸಾಧ್ವೀಮಣಿಯನ್ನೂ ಪರೀಕ್ಷಿಸಿದವನೇ !" ಎಂದು ಇಂದ್ರನ ಕರ್ತವ್ಯ ನಿಷ್ಠುರತೆಯನ್ನು ಮಾತ್ರ ಕೊಂಡಾಡಿದಂತಾಯ್ತು, **"ಗೌತಮ-ಬ್ರಾಹ್ಮಣ"** "ಗೌತಮನೆಂದು ಕರೆದುಕೊಂಡವನೇ !" ಎಂದು ಪ್ರಶಂಸಿಸಿ ದಂತಾಯ್ತು. ಇಂದ್ರನು ಋಷಿ ಶಾಪಕ್ಕೂ ಹೆದರದೆ ಒಡ್ಡಿದ ಈ ಪರೀಕ್ಷೆಯ ತಾತ್ತ್ವಿಕ ಮಹತಿಯನ್ನು ಚೆನ್ನಾಗಿ ತಿಳಿಯಬೇಕು.

ಇಂದ್ರನಿಗೆ ಸ್ವಾರ್ಥವೆಂದು ಹಲವರ ಆರೋಪ ! ಶ್ರೀ ರಾಮಾಯಣ ದಲ್ಲಿ ಇಂದ್ರನು ಈ ಕೆಲಸವನ್ನು **"ಸುರಕಾರ್ಯಮಿದಂ ಕೃತಂ"** ಎಂದು ದೇವ ಸಭೆಯಲ್ಲಿ ಹೇಳುತ್ತಾನೆ. ಇದರಲ್ಲೇನು ದೇವಕಾರ್ಯ ? ಎಂದರೆ, ಲೋಕದಲ್ಲಿ ಎಲ್ಲರ ತಪಸ್ಸೂ ಒಂದೇ ಉದ್ದೇಶಕ್ಕಾಗಿರುವುದಿಲ್ಲ. ಮನೋ

ನಿಶ್ಚಯ ರೂಪ ದೃಢ ಪ್ರಯತ್ನವು ಒಂದು ಬಗೆಯ ತಪಸ್ಸೆಂಬುದು ನಿಜ. ಆದರೆ ಇದರ ಉದ್ದೇಶ ತಾರಕವೋ, ಮಾರಕವೋ ಪರೀಕ್ಷಿಸುವುದು ಅವಶ್ಯ ವಲ್ಲವೇ ? ಎಲ್ಲರೂ ಒಂದು ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕರಾಗಲು ಬಯಸಬಹುದು, ಇದಕ್ಕಾಗಿ ಪರೀಕ್ಷೆಗಳನ್ನೇರ್ಪಡಿಸದೇ ಹಾಗೇ ಬಿಟ್ಟರೆ ಏನು ಗತಿ ? ಸತ್ಯಾಗ್ರಹವೆಂಬ ವಿಚಿತ್ರ ರೀತಿಯ ತಪಸ್ಸು ಈಚೆಗೆ ಬಳಕೆಯಲ್ಲಿ ದೆಯಷ್ಟೆ ! ಈ ತಪಸ್ಸಿನ ಬಲದಿಂದ ಏನು 'ಸಿದ್ಧಿ'ಯನ್ನಾದರೂ ಹೊಂದ ಬಹುದು! ಆದರೆ ಎಂತಹವರು ಈ ತಪಸ್ಸಿಗೆ ಅರ್ಹರೆಂಬುದನ್ನು ನಿಷ್ಕರ್ಷಿ ಸದೇ ಬಿಟ್ಟರೆ ಸಮಾಜದ ಗತಿ ಏನು? ಜನ ಸಂಘಟನೆ, ಅಭಿಪ್ರಾಯವರ್ಧನೆ ಮುಂತಾದುವು ಶ್ರಮಸಾಧ್ಯವಾದ (ತಪೋರೂಪ) ವ್ಯಾಪಾರಗಳು. ಆದರೆ ಇಂಥ ತಪಸ್ಸಿನ ಪರಿಣಾಮ ಕೆಲವು ರಾಷ್ಟ್ರಗಳಲ್ಲಿ ದುಷ್ಟ ಶಕ್ತಿಗಳಿಗೆ ಅಧಿಕಾರ ವನ್ನು ತಂದು ಕೊಟ್ಟಿರುವುದು ಸುವಿದಿತ. ಸಾಮೂಹಿಕ ಕೊಲೆ, ಧರ್ಮ ನಾಶ, ದೇವಾಲಯಗಳ ಉನ್ಮೂಲನ, (ಮತಗಳ ಉಗ್ರಾಣ ಪರಿವರ್ತನ) ಸ್ವಾತಂತ್ರ್ಯದ ಅಧಃಪಾತಗಳ ಮೆಟ್ಟಲುಗಳನ್ನೇರಿ, "ಅಸುರ"ರು ತಪಸ್ಸಿನ ಮೂಲಕವೇ ಅಧಿಕಾರಾರೂಢರಾಗಿರುವುದನ್ನು ಕಾಣುತ್ತೇವೆಯಲ್ಲವೇ ? ವೈದಿಕ ಭಾಷೆಯಲ್ಲಿ, "ಈ ಲೋಕಗಳು ಅಸುರಾಕ್ರಾಂತವಾದುವೆಂದೂ, ಇಂದ್ರನೂ, ದೇವತೆಗಳೂ ತಲೆ ಮರೆಸಿಕೊಂಡು ಅಜ್ಞಾತವಾಸದಲ್ಲಿರುವ ರೆಂದೂ" ಹೇಳುವುದು ಇದನ್ನೇ. ವಸ್ತುತಃ ಇಲ್ಲಿ "ಇಂದ್ರ" ಪರಾ ಜಯಕ್ಕೆ ಏನು ಕಾರಣವೆಂದರೆ, ಪರೋಕ್ಷಪ್ರಿಯನಾದ ಇಂದ್ರನು ಯಾವ ಮಾನುಷ ಶರೀರಗಳನ್ನು ಆಶ್ರಯಿಸಿ ನಂಬಿ ಸಾಮಾಜಿಕವಾಗಿ ಬಲಗೊಳ್ಳ ಬೇಕಾಗಿತ್ತೋ, ಅಲ್ಲೆಲ್ಲಾ ಅದೇ ಮನುಷ್ಯರು ಅವನಿಗೂ ದೇವತೆಗಳಿಗೂ ಮಾಡಿದ ದ್ರೋಹವೇ ಎಂದು ಹೇಳಬೇಕು. ಆದರೆ ಇಂದ್ರ ಪರಾಜಯವು ಲೋಕಗಳ ಪರಾಜಯವಾಗಿ, ಮಾನವರಿಗೂ ಪರಾಜಯುವಾಗಿದೆ. "ದೇವ ಹೇಳನ" ಇಂಥ ಅಮಂಗಳದಲ್ಲೇ ಪರ್ಯವಸಾನವಾಗಿ, ಪಾತಕವೆನಿಸಿದೆ. ಇಷ್ಟು ಪರೀಕ್ಷೆಗಳನ್ನು ನಡೆಸಿದರೂ, ಒಮ್ಮೊಮ್ಮೆ ಅಸುರರ ಬಲವರ್ಧನೆ ಯಾಗುವ ಸಾಧ್ಯತೆಯಿರುವಾಗ, ಪರೀಕ್ಷೆಗಳೇ ಬೇಡವೆನ್ನುವವರು ಸಂಪೂರ್ಣ ವಾಗಿ ಅಸುರಭಾವವುಳ್ಳವರೆಂದು ಹೇಳಲು ಆಕ್ಷೇಪವೇನಿದೆ ? ವಿಶ್ವಾಮಿತ್ರ ರನ್ನು ಇಂದ್ರನು ಪರೀಕ್ಷಿಸದೇ, ಅಪಕ್ವಾವಸ್ಥೆಯಲ್ಲಿಯೇ "ಬ್ರಹ್ಮರ್ಷಿಗಳನ್ನು"

ಆಗಿ ಮಾಡಿದ್ದರೆ ಏನು ಗತಿಯಾಗುತ್ತಿತ್ತು ? ಹೇಗೋ "ಇಂದ್ರ" ಪಟ್ಟಕ್ಕೇರಿದ ನಹುಷ ಅದನ್ನೇಕೆ ಉಳಿಸಿಕೊಳ್ಳಲಾಗಲಿಲ್ಲ ? ಸಾತ್ತ್ವಿಕನಾಗಿ ಯಾವುದೇ ಪದವಿಗೆ ಯೋಗ್ಯನಾದವನು, ಯಾವ "ಯಮ" ಪರೀಕ್ಷೆಗೂ, "ಇಂದ್ರ" ಪರೀಕ್ಷೆಗೂ, "ವರುಣ" ಪರೀಕ್ಷೆಗೂ, ಅಂಜುವವನಲ್ಲ. ಯಾವ ಪರೀಕ್ಷೆಗೂ ಒಡಂಬಡದೆ, ಎಲ್ಲೆಲ್ಲೂ ತನಗೆ ಸ್ಥಾನಗಳನ್ನು ಕಾದಿರಿಸಬೇಕೆಂದು ತನ್ನಂತಹವರನ್ನೇ ಒತ್ತೈಸುವವನು ಲೋಕಕ್ಕೆ ಏನು ಮಾಡಿಯಾನೆನ್ನುವುದು ಸ್ಪಷ್ಟವಿದೆ. ಇಂದು ಈ "ಇಂದ್ರ" ಪರೀಕ್ಷೆಯ ಭಾರ ಹೆಚ್ಚಾಯಿತು. ಇಂದ್ರದ್ರೋಹ ಮಾಡುವವರು ಮಾತ್ರ, ವೃದ್ಧಿಯಾಗುತ್ತಲಿದ್ದಾರೆ.

ಹೀಗೆ ಇಂದ್ರವ್ಯಾಪಾರವು ಹೇಯವಾಗಿರುವುದರ ಬದಲು ಅಮೋಘ ಸೇವೆಯೇ ಆಗಿದೆ. ವೃತ್ರನು ಇಂದ್ರನ ಬಹುದೊಡ್ಡ ಶತ್ರು. ಇವನನ್ನು ಇಂದಿನ ನಮ್ಮ ಜೀವನದಲ್ಲಿ ಪತ್ತೆಹಚ್ಚಿಕೊಳ್ಳಬೇಕಾಗಿದೆ. ಇತರ ಆಸುರೀ ಶಕ್ತಿಗಳೂ ಸಹ ಅಸಂಖ್ಯಾತರೇ. ಇಂದ್ರನದು ಮುಗಿದ ವ್ಯಾಪಾರವಲ್ಲ!

ಇನ್ನೊಂದು ಪ್ರಶ್ನೆ : ಇಂದ್ರನು ಭಗವಂತನ ಕ್ಷಾತ್ರಮುಖವಾದ ಮೇಲೆ, ಆಗಾಗ ಇಂದ್ರನ ಸೋಲಿನಲ್ಲಿ ಭಗವಂತನೇ ಸೋತಂತಾಗಲಿಲ್ಲವೇ? ಇದರಿಂದ ಅವನು ಸರ್ವಶಕ್ತನೆಂಬ ವಿಶೇಷಣ ಹೇಗೆ ವೇದಾಂತದಲ್ಲಿ ಸತ್ಯವಾಗುವುದು ?

ಇಲ್ಲಿ ಅನೇಕ ಮರ್ಮಗಳಿವೆ : ಸೃಷ್ಟಿಯಲ್ಲಿ ಆಸುರೀಶಕ್ತಿಗಳು ಎಂದಿನಿಂದ ಇವೆಯೋ ಅಂದಿನಿಂದ, ಅವು ಇರುವ ತನಕವೂ ಭಗವಂತನು ಈ ಹೋರಾಟವನ್ನು ಸಹಿಸಲೇಬೇಕು. ಇವರು ಸೃಷ್ಟಿಪ್ರವಾಹದಲ್ಲಿರುವುದೂ ಭಗವತ್ಸಂಕಲ್ಪದಿಂದಲೇ. ದೇವರ ಮೂರ್ತಿಯೊಂದರ ಮೇಲೆ ದೇವಾಲಯದಲ್ಲಿ ಒಂದು ಜಿರಳೆ (ಜೊಂಡಿಗ) ಓಡಾಡುತ್ತಿದ್ದುದನ್ನು ಕಂಡು ಒಬ್ಬ ಮಹಾನುಭಾವನಿಗೆ ಆ ಮೂರ್ತಿಯು ದೇವರಾಗಿದ್ದರೆ ಅದನ್ನು ಓಡಿಸುತ್ತಿದ್ದನೆಂದೂ, ಹಾಗೆ ಮಾಡದುದರಿಂದ ಅವನು ದೇವರಲ್ಲವೆಂದೂ 'ಜ್ಞಾನೋದಯ'ವಾಯಿತಂತೆ ! ಈ 'ಬುದ್ಧಿವಂತ'ನಿಗೆ ದೇವರು ಜಿರಳೆಗಳನ್ನು ಮಾತ್ರವಲ್ಲದೆ ಇನ್ನೂ ಅಸಂಖ್ಯಾತವಾದ ಅಸಹ್ಯಗಳನ್ನೆಲ್ಲ ಸಹಿಸುತ್ತಿರುವನೆಂಬುದು ಹೊಳೆಯದೇ, ಜಿರಳೆಯೊಂದು ಅವನ ನಂಬಿಕೆಯನ್ನು ಬುಡಮೇಲಾಗಿಸಿತೆಂದರೆ ಅವನ ಭಕ್ತಿ ಎಂತಹುದಿರಬೇಕು? ದೇವರೇ ಇಲ್ಲವೆಂಬ

ದುರ್ವಾದ ಮಾಡುವ ನಾಸ್ತಿಕನನ್ನೂ, ದೇವರ ನಿಯಮಗಳೆಲ್ಲವನ್ನು ಮುರಿದು ಅನ್ಯಾಯ ಮಾರ್ಗದಲ್ಲೇ ಇರುವವರನ್ನೂ ಅವನು ಸಹಿಸಿಲ್ಲವೇ? ದೇವರನ್ನು ನಂಬಿದವರಿಗೆ ಆಗಾಗ ತೊಂದರೆಗಳೂ, ಧಿಕ್ಕರಿಸಿದವರಿಗೆ ಸಿಗುತ್ತಿರುವ ಭೋಗೈಶ್ವರ್ಯಗಳೂ ದೇವರಿಗೆ ಒಪ್ಪಿಗೆಯಾಗಿಲ್ಲವೇ? ದೇವರ ಈ ಸಹನೆಯ ಅರ್ಥವೇನೆಂಬುದನ್ನು ತಿಳಿಯಲು ಪ್ರಯತ್ನಿಸದೇ, ದೇವರೇ ಇಲ್ಲವೆಂದೋ, ಇದ್ದ ಪಕ್ಷದಲ್ಲಿ ಅಶಕ್ತನೆಂದೋ ಬಗೆಯುವುದೂ, ಪ್ರಚಾರ ನಡೆಸುವುದೂ ಜ್ಞಾನಿಗಳ ಲಕ್ಷಣವಲ್ಲ.

ಒಂದು ರಾಜ್ಯದಲ್ಲಿ ಧರ್ಮರೀತಿಯಿಂದ ರಾಜ್ಯ ನಡೆಸುವ ರಾಜನು ಜನರಿಗೆ ಹೇಗೆ ನಡೆದುಕೊಳ್ಳಬೇಕೆಂಬ ವಿಷಯದಲ್ಲಿ ನೀತಿ–ನಿಯಮಾವಳಿಗಳನ್ನು ಏರ್ಪಡಿಸಿ, ಘೋಷಿಸಿ, ನಂತರ ಆ ವಿಷಯಗಳಲ್ಲಿ ಜನರಿಗೆ ಸ್ವಾತಂತ್ರ್ಯವನ್ನು ಕೊಡುವುದೂ, ಅನುಕೂಲರಾಗಿ ನಡೆದವರನ್ನು ಪುರಸ್ಕರಿಸುವುದೂ, ಪ್ರತಿಕೂಲರನ್ನು ದಂಡಿಸುವುದೂ ಅವನ ಪ್ರಭುತ್ವದ, ಸರ್ವಶಕ್ತತೆಯ ಲಕ್ಷಣ. ನಿಯಮಾವಳಿಗಳನ್ನು ಏರ್ಪಡಿಸಿದ ಮಾತ್ರದಿಂದ ನಿಯಮೋಲ್ಲಂಘನೆಯೆಂಬುದನ್ನೇ ಯಾರೂ ಮಾಡದಂತೆ ಎಲ್ಲರ ಜೀವನದಲ್ಲಿಯೂ ಕ್ಷಣ ಕ್ಷಣದ ಕಾರ್ಯಗಳಲ್ಲಿ ತಲೆಹಾಕಿ ಸ್ವಾತಂತ್ರ್ಯಾಪಹಾರ ಮಾಡುವುದು ಅವಿವೇಕವಾಗುವುದು. ಸೃಷ್ಟಿಯಲ್ಲಿ ಸ್ವಾತಂತ್ರ್ಯ ಇರುವುದರಲ್ಲಿಯೇ, ಒಳಿತು-ಕೆಡಕುಗಳ ಆಯ್ಕೆಯ ಮರ್ಮ ಅಡಗಿದೆ. ಸಮುದ್ರವು ಮಥಿತವಾಗಬೇಕಾದರೆ, ದೇವತೆಗಳೂ ಅಸುರರೂ ಕೂಡಿಯೇ ಮಥನ ಮಾಡಬೇಕಷ್ಟೆ? ಆದರೆ ರಾಜನ ನಿಯಮೋಲ್ಲಂಘನೆ ಮಾಡಿದವರಿಗೆ ದಂಡನೆಯಾಗದೇ ಇರುವುದಿಲ್ಲ. (ಕರ್ಮ ಸಿದ್ಧಾಂತ ಇದ್ದೇ ಇದೆ.) ಒಂದು ದೃಷ್ಟಿಯಿಂದ ಇಂತಹ ಸಂದರ್ಭಗಳಲ್ಲಿ ದೇವರಿಗೆ ಸೃಷ್ಟಿ ವ್ಯಾಪಾರದಲ್ಲಿರುವ ಜೀವೋದ್ಧಾರವೆಂಬ ಮುಖ್ಯ ಉದ್ದೇಶ ವಿಳಂಬವಾಗಿ, ತಾತ್ಕಾಲಿಕ 'ಸೋಲು' ಆಗಬಹುದು. ಆದರೆ ಇದೂ ತನ್ನಿಂದಲೇ ಅನುಗ್ರಹಿಸಲ್ಪಟ್ಟ ಜೀವಸ್ವಾತಂತ್ರ್ಯದಿಂದ ಬರತಕ್ಕದಾದುದರಿಂದ, ಇದೂ ಭಗವತ್ ಸಂಕಲ್ಪಾಧೀನವಾದುದರಿಂದ, ದೇವರ ಸರ್ವಶಕ್ತತೆಗೆ ಚ್ಯುತಿಯಿಲ್ಲ. (ಚ್ಯುತಿಯಿರುವುದು ನಮ್ಮ ವಿವೇಕಕ್ಕೆ ಮಾತ್ರ!) ಹೀಗೆ ಜಗದ್ವ್ಯಾಪಾರವನ್ನು ನಿರ್ವಹಿಸಲಾರದಷ್ಟು ಮಟ್ಟಿಗೆ ಆಸುರೀಶಕ್ತಿಗಳ ವೃದ್ಧಿಯಾದರೆ, "ನಿಧಾಯ ಭಾರಂ ಪುನರಸ್ತಮೇತಿ" (ತೈ. ಆ. III-14) ಎಂಬ

ಶ್ರುತಿಯಂತೆ ಪ್ರಳಯವಾಗುತ್ತದೆ. ಇದಕ್ಕಾಗಿಯೇ "ನಾವು ಅವನನ್ನು ಹೊತ್ತುಕೊಂಡರೆ, ಅವನೂ ನಮ್ಮನ್ನು ಹೊತ್ತುಕೊಳ್ಳುತ್ತಾನೆ", "ಸ ಭೃತೋ ಭ್ರಿಯಮಾಣೋ ಬಿಭರ್ತಿ" (ಅದೇ) ಎಂಬ ಶ್ರುತಿಯೂ ಉದಿಸಿ ಬಂದಿದೆ. ಇದರಲ್ಲಿ ಸಾರ್ವಕಾಲಿಕ ಸಂದೇಶವಡಗಿದೆ. ದೇವರ ಕಡೆಗೆ ನಾವು ಭದ್ರವಾಗಿದ್ದು, ಅವನ ದಾರಿಯಲ್ಲಿದ್ದರೆ ಅವನು ನಮ್ಮ ರಕ್ಷಕನಾಗು ತ್ತಾನೆ. ನಾವು ಅವನ ಕೈಬಿಟ್ಟರೆ ನಮ್ಮದೇ ನಾಶ. ಇದನ್ನು, ಪರಾರ್ಥ ಪ್ರಯೋಜನವೊಂದನ್ನೇ ಲಕ್ಷಣವಾಗಿಯುಳ್ಳ ದೇವರ 'ಸೋಲೆಂ'ದು ಹೇಳಿ ದರೆ, ದೇವರಿಗೆ ಬಾಧಕವಿಲ್ಲ; ಭಾವಿಯಲ್ಲಿ ಬಿದ್ದ ಮಗುವನ್ನು ಎತ್ತಲೆಂದು ತಾಯಿಯೂ ಭಾವಿಗೆ ಧುಮುಕಿದಂತೆ, ಸಂಸಾರ ಕೂಪದಲ್ಲಿಯೂ ಇಳಿದು ಬಂದು ಅವತಾರ ಕಾರ್ಯಗಳನ್ನೂ ನಡೆಸಿಯೂ ಜಗತ್ತು ಪರಿಪೂರ್ಣವಾಗಿ ಇನ್ನೂ ಉದ್ಧಾರವಾಗಿಲ್ಲವೆಂಬ, ದೇವರ ಈ 'ಸೋಲು' ಭಗವತ್ಕಾರ್ಯವು ನಿರಂತರವಾಗಿದೆಯೆಂದು ಮಾತ್ರ ತಿಳಿಸುತ್ತದೆ;

ಕಾಲವು ಋತುಮಯವಾಗಿ, ಜೀವನದ ಸದವಕಾಶವು ಜೀವ ಸಾರ್ಥ ಕ್ಯಕ್ಕೆ ಅವಕಾಶವಾಗಲೆಂದು ದೇವರ ಬಯಕೆ. ಇದೇ ಜೀವನದ ಪ್ರಧಾನ ವಾದ ದೈವದರ್ಶಿತ ದಿಕ್ಕು. ಇದಕ್ಕೆ ವಿರುದ್ಧ ದಿಕ್ಕೇ ಆತ್ಮನಾಶ ಸಾಧಕವಾದ ಅನೃತಮಯವಾದ, ಕಾಲದ ದುರುಪಯೋಗ – 'ನದಿಯನ್ನು ಚರಂಡಿ ಯನ್ನಾಗಿಸುವ' ಪ್ರಯತ್ನ! ಇದನ್ನು ನಿವಾರಿಸಿ 'ಚರಂಡಿ' ತೊಳೆಯು ವುದೇ ದೇವರ ಕೆಲಸ. ದೇವರದ್ದೇ ಪಟಗಳನ್ನು ಚರಂಡಿಗೆಸೆದರೂ, ಅವು ಗಳನ್ನೆತ್ತಿ, ಚರಂಡಿಗೆ ಬಿದ್ದವರನ್ನು ಮೇಲೆತ್ತಿ ಕಶ್ಮಲಪ್ರವಾಹಕ್ಕೂ, ದಿವ್ಯ ತೀರ್ಥ ಪ್ರವಾಹಕ್ಕೂ ಯಥಾಯೋಗ್ಯತೆ ಅವಕಾಶ ಕಲ್ಪಿಸಿಕೊಡುವುದು ಇಂದ್ರ ಮುಖನಾದ ಭಗವಂತನ ದಿವ್ಯ ಕೆಲಸ. ರಾಕ್ಷಸ ಸಂಹಾರದ ಕಥೆಗಳ ಲ್ಲೆಲ್ಲಾ ಇದೇ ಮರ್ಮವಿದೆ. 'ಮಲಗಿದ್ದ' ದೇವರನ್ನು ಈ ಕೆಲಸಕ್ಕೆ ಎಬ್ಬಿಸುವಂತೆ, ವಿಶ್ವಾಮಿತ್ರರು "ಉತ್ತಿಷ್ಠ ನರಶಾರ್ದೂಲ! ಕರ್ತವ್ಯಂ ದೈವಂ ಆಹ್ನಿಕಂ" ಎಂದು ಶ್ರೀರಾಮಾಯಣದಲ್ಲಿ ಶ್ರೀರಾಮ ಸುಪ್ರಭಾತ ವನ್ನು ಹಾಡಿರುವುದು ಸುಪ್ರಸಿದ್ಧ. 'ಅಸುರವೈರಿ', 'ಅಸುರಾಂತಕ' ಇತ್ಯಾದಿ ಬಿರುದುಗಳು, ದೇವರಿಗೆ ವಿವೇಕವಿದೆಯೆಂದೂ, ನಡತೆಯಿದೆಯೆಂದೂ (Character) ತಿಳಿಸುತ್ತವೆಯೇ ಹೊರತು ನಿಷ್ಕಾರಣ ದ್ವೇಷದ ನಿಷಮತೆ

ಯನ್ನಲ್ಲ. "**ಸಮೋಽಹಂ ಸರ್ವಭೂತೇಷು**" ಎಂದರೆ "ಜಗತ್ತು ಇದ್ದರೂ ಒಂದೆ, ಹೋದರೂ ಒಂದೆ" ಎಂಬ ಬೇಜವಾಬ್ದಾರೀ ರೂಪದ, ಉದಾಸೀನ ಭಾವ "ನೆಲಸಮತಾವಾದ" ವಾದವಲ್ಲ! ಸುಖೀರಾಜ್ಯ ಸ್ಥಾಪನೆಯಾಗಿ ಹೋಯಿತೆಂದು ಬೀಗಿ ಮೆರೆಯುವ ಯಾವುದೇ ರಾಜ್ಯದಲ್ಲಿ ಪೋಲೀಸು ಮಿಲಿಟರಿ ವಿಭಾಗಗಳಿರುವುದೇಕೆ? ಕಳ್ಳರಾದರೇನು; ಸಭ್ಯರಾದರೇನು? ಎಂದು ಯಾರಾದರೂ ವಾದಿಸುವುದುಂಟೇ? "ಸಮಾಜವಾದೀ" ರಾಜ್ಯ ಗಳಲ್ಲಿ ಧ್ಯೇಯಾಂಶವು ಹೆಚ್ಚಿದಷ್ಟೂ "ಸಮಾಜದ್ರೋಹಿ"ಗಳ ವಿರುದ್ಧ ನಿಷ್ಠುರ ಕ್ರಮಗಳೂ ಹೆಚ್ಚುವುದರಿಂದ, ಅಲ್ಲಿ ಅವರು ಉದ್ದೇಶಿಸಿದ "ಸಮತೆ"ಯು ದೂರದೂರವಾಗುತ್ತಿರುವುದು ಎಲ್ಲರಿಗೂ ತಿಳಿದಿದೆಯಷ್ಟೆ! ಹೀಗೆ ಜೀವನವು "ಸಂಗ್ರಾಮ"ವೆಂಬ ಚಿತ್ರವನ್ನು ಯಾವ ಸಿದ್ಧಾಂತವೂ ಅಳಿಸಿ ಹಾಕುವಂತಿಲ್ಲ. "ಮಳೆಯಾದರೆ ತಾನೇ ನದಿಗಳು ಹರಿಯುವುವು?" ಎಂದೆಣಿಸಿ ಮಳೆಯೇ ಆಗದಂತೆ ತಡೆಯುವುದೂ, ಒಂದು ವೇಳೆ ಆದರೂ, ನದಿಗಳು ಪ್ರವಹಿಸದಂತೆ ಮಾಡಲು ಅಡ್ಡಲಾಗಿ ಅಲ್ಲಿ ಮಲಗುವುದೂ, ಒಂದುವೇಳೆ ಆದರೂ, ಪ್ರವಹಿಸಿ ದರೂ, ಯಾರಿಗೂ ಹೇಸಿಗೆ ಭಾವ ಬರುವಂತೆ ಅದರಲ್ಲಿ ನೀರನ್ನೆಲ್ಲಾ ವಿಷ ಪೂರಿತವನ್ನಾಗಿ ಮಾಡುವುದೂ, ಕೊಳಚೆಯನ್ನಾಗಿಸುವದೂ- ಇವು ವೃತ್ರಾ **ಸುರನ ಪ್ರಧಾನ ವ್ಯಾಪಾರಗಳು.** ಈ ಅರ್ಥದಲ್ಲಿ ಇಂದ್ರನು "ಮೇಘ ಗಳನ್ನು ಕತ್ತರಿಸಿ" ಮಳೆಯನ್ನುಂಟು ಮಾಡುವವನು ಇತ್ಯಾದಿ ವರ್ಣನೆಗಳು ವೇದದಲ್ಲಿವೆ. ಇಂದಿನ ಜನಜೀವನದಲ್ಲಿ "ವೃತ್ರ"ರನ್ನು ಪತ್ತೆಹಚ್ಚುವುದೂ, ಇಂದ್ರವಶಕ್ಕೆ ಒಪ್ಪಿಸುವುದೂ, ಇಂದ್ರವಿಜಯಕ್ಕೆ ಕಾರಣರಾಗುವುದೂ ಎಲ್ಲ ಆಸ್ತಿಕರ ಕರ್ತವ್ಯ. ವೇದಗಳಿಗೇ ಅಪಾರ್ಥ ಮಾಡುವುದು, ಜೀವನದಲ್ಲಿರುವ ಅಲ್ಪಸ್ವಲ್ಪ ನೀತಿ ನಿಯಮಗಳನ್ನೂ ಮುರಿದು ಹದಗೆಡಿಸಿ ಅಶಾಂತಿ (chaos) ಅರಾಜಕತೆ, ಅವ್ಯವಸ್ಥೆಗಳನ್ನೇ ಹರಡುವುದು ಆಸುರೀ ಪ್ರಯತ್ನ. ಯಾರು ಯಾವ ಕಡೆಗಿದ್ದಾರೆಂದು ನಮ್ಮ ಸುತ್ತಮುತ್ತಲಿನವರನ್ನು ತಿಳಿಯುವುದು ಕಷ್ಟವೇನಲ್ಲ. ಆಸ್ತಿಕ ಶಕ್ತಿಗಳು ಒಂದುಗೂಡಬೇಕು; "ರಕ್ಷೋಘ್ನ"ಮಂತ್ರ ಗಳ ಅರ್ಥವತ್ತಾದ ಜಪ ಆಗಬೇಕು; ಸ್ವಾರ್ಥತ್ಯಾಗ ಪೂರ್ವಕವಾಗಿ ನಡೆ ಯುವ ಈ ಧರ್ಮಯುದ್ಧದಲ್ಲಿ

"**ಸತ್ಯಮೇವ ಜಯತೇ**" (ಮುಂಡಕ, III-1-6)

ಎಂಬ ವೇದವಾಣಿಯು ಹುಸಿಯಾಗದೇ ಕೊನೆಯ ವಿಜಯ ದೇವತೆಗಳದ್ದೇ. ಅಲ್ಲಿಯ ವರೆಗೆ **"ವ್ಯಶೇಮ ದೇವಹಿತಂ ಯದಾಯುಃ"** ಎಂಬ ಧ್ಯೇಯ ದಲ್ಲಿ ಸಾಚಿಕೆಪಡತಕ್ಕದ್ದೇನಿಲ್ಲ :

"A day may come, must surely come, we will say, when humanity will be ready spiritually, morally, socially for the reign of universal peace: meanwhile the aspect of battle and the nature and function of man as a fighter have to be accepted and accounted for by any practical philosophy and religion. (Essay on the Gita, p. 65 Sri Aurobindo)

ಈ ಯುದ್ಧ ನಿಂತ ದಿನ ಈ ಜೀವನವು ಪರಮಪದವಾಗಿ ಸರ್ವಸುಖ ವಾಗುತ್ತದೆ. ಆದರೆ ಅಸುರರ ಕೈಮೇಲಾಗಿ, ದೇವತೆಗಳು ಓಡಿ ಹೋಗಿ ಯುದ್ಧವು ನಿಂತಾಗಲಲ್ಲ! ದೇವತೆಗಳು ಮೇಲಾಗಿ, ಅಸುರರು 'ಇಲ್ಲ'ದೇ ಹೋಗಬೇಕು, ಇಲ್ಲವೇ ದೇವತೆಗಳ ವಶವರ್ತಿಗಳಾಗಬೇಕು. ಇದು ಭಗ-ವಂತನ ಉದ್ದೇಶವೆಂದು ವೇದ ದರ್ಶನ ಸಾರುತ್ತಿದೆ. ಯುದ್ಧವೇ ನಡೆಯು ತ್ತಿಲ್ಲವೆಂದೂ, ಯುದ್ಧದಂತೆ ಕಾಣುವುದು ಭ್ರಾಂತಿಯೆಂದೂ, ಅಥವಾ ಯುದ್ಧವು ಎಂದೆಂದೂ ಮುಗಿಯದೆಂದೂ ವಾದಿಸಿ, ದೇವರ ಜಗದ್ವ್ಯಾಪಾರ ವನ್ನು ಅರ್ಥಶೂನ್ಯವೆಂದೂ ಸಾರುವ, ಹುಡುಗಾಟಿಕೆಯ ಸಿದ್ಧಾಂತಗಳೂ, ಇಲ್ಲದಿಲ್ಲ. ನಿರಂತರವಾಗಿ ಯುದ್ಧ ನಡೆಯುವುದೆಂಬ ಭಾವನೆ ಉದಿಸಿದರೆ ವೀರಭಾವದಿಂದ ಹೋರಾಡಲು ಶಕ್ಯವೇ ? "ಜಯವಾಗುವುದು" ಎಂಬ ವೇದಾಂತದ ದೃಢಪ್ರಜ್ಞೆಯಿಲ್ಲದಿದ್ದರೆ ದೇವತೆಗಳ ಸೋಲು ನಿಶ್ಚಿತವೇ. ಯುದ್ಧವೇ ಭ್ರಾಂತಿಯೆಂದು ವಾದಿಸಿದರೂ, ಇದೂ ಯೋಧನ ಅನಿವಾರ್ಯ ಯುದ್ಧದಲ್ಲಿ ಅವನ ಕೈತಗ್ಗಿಸುವ ಪ್ರಯತ್ನವೇ. ಹೀಗೆ ವೇದ ಬಾಹ್ಯವಾದ ಮತ್ತು ಕುದೃಷ್ಟಿಗಳ (ಮನುಸ್ಮೃತಿ, VII-95) ಅಪಸಿದ್ಧಾಂತಗಳನ್ನು ಬದಿಗಿಟ್ಟು ವೇದದರ್ಶನದ ಅವಲಂಬನೆಯಿಂದ ಬಾಳುವುದು ವಿವೇಕ.

ಈಗ ನಮ್ಮಲ್ಲಿಯೂ, ಸಮಾಜದಲ್ಲಿಯೂ ಪ್ರಚಲಿತವಿರುವ ಆಸುರೀ ಶಕ್ತಿಗಳ ನಿಗ್ರಹಕ್ಕಾಗಿ, ಒಂದು ವೇದೋಕ್ತವಾದ ರಕ್ಷೋಘ್ನ ಮಂತ್ರರೂಪ

ಪ್ರಾರ್ಥನೆಯೊಂದಿಗೆ ಈ ವಿಷಯುವನ್ನು ಇಲ್ಲಿಗೆ ಉಪಸಂಹರಿಸಿ, ಮುಂದೆ ಇಂದ್ರ ಸ್ವರೂಪವನ್ನು ಮತ್ತಷ್ಟು ಆಳವಾಗಿ ಅಭ್ಯಸಿಸೋಣ:

**"ಯೇ ದೇವಾಃ ಪುರಸ್ಸದೋಽಗ್ನಿ ನೇತ್ರಾ ದಕ್ಷಿಣಸದೋ ಯಮನೇತ್ರಾಃ ಪಶ್ಚಾತ್ಸದಸ್ಸವಿತೃನೇತ್ರಾ ಉತ್ತರಸದೋ ವರುಣ ನೇತ್ರಾ ಉಪರಿಷದೋ ಬೃಹಸ್ಪತಿ ನೇತ್ರಾ ರಕ್ಷೋಽಹಣಸ್ತೇ ನಃ ಪಾನ್ತು ತೇ ನೋಽವನ್ತು ತೇ ಭ್ಯಃ ನಮಸ್ತೇಭ್ಯ :...."**

"ಅಗ್ನಿ ನೇತೃತ್ತ್ವದಲ್ಲಿ ಪೂರ್ವದಿಕ್ಕಿನಲ್ಲಿ ಕುಳಿತಿರುವ ದೇವತೆಗಳೂ. ಯಮನನ್ನು ಮುಂದಿಟ್ಟು ದಕ್ಷಿಣದಲ್ಲಿ ಉಪಸ್ಥಿತರಿರುವ ದೇವತೆಗಳೂ. ಸವಿತೃವಿನ ಮುಖಂಡತ್ತ್ವದಲ್ಲಿ ಪಶ್ಚಿಮದಲ್ಲಿ ಸ್ಥಿತರಿರುವರೂ, ವರುಣಾ ನುಯಾಯಿಗಳಾಗಿ ಉತ್ತರದಲ್ಲಿರುವವರೂ, ಬೃಹಸ್ಪತಿಯು ಹಿಂದೆ. ಮೇಲೆ ಇರುವವರೂ ರಾಕ್ಷಸ ಹಂತಕರಾಗಿ, ನಮ್ಮನ್ನು ಕಾಪಾಡಲಿ, ನಮಗೆ ಸಹಾ ಯಕರಾಗಲಿ, ಅವರಿಗೆ ನಮಸ್ಕಾರ."

ಇಂತಹ ದೇವತೆಗಳೇ ಯಾವ ಪರಮಾತ್ಮನ ಆಜ್ಞಾಧಾರಕರಾಗಿ ಹೆದರಿ ನಡೆದುಕೊಳ್ಳುವರೋ, ಭಗವದ್ವಿಮುಖನನ್ನು ರಕ್ಷಿಸಲಾರರೋ. ಮತ್ತು ಭಗವದ್ಭಕ್ತನನ್ನು ಹಿಂಸಿಸಲಾರರೋ ಅಂತಹ ಭಗವಂತನ ಅಭಯ ಹಸ್ತವು ನಮ್ಮನ್ನು ರಕ್ಷಿಸಲಿ.

ವಿಧಿಃ ತ್ರಿಪುರಮರ್ದನಃ ತ್ರಿದಶಪುಂಗವಃ ಪಾವಕೋ
ಯಮಪ್ರಭೃತಯೋಽಪಿ ಯದ್ವಿಮತರಕ್ಷಣೇ ನ ಕ್ಷಮಾಃ ।
ರಿರಕ್ಷಿಷತಿ ಯತ್ರ ಚ ಪ್ರತಿಭಯಂ ನ ಕಿಂಚಿತ್ ಕ್ವಚಿತ್
ಸ ನಃ ಪ್ರತಿಭಟಾರ್ತಾ ಪ್ರಭೋ ಶಮಯ ರಂಗಧಾಮಾದಿಪು ॥

(ಅಭೀತಿಸ್ತವ-೨೬)



॥ ಶ್ರೀ ಕೃಷ್ಣಾಯ ಪರಬ್ರಹ್ಮಣೇನಮಃ

# ೧. 'ಇಂದ್ರ' ಶಬ್ದದ ಗಂಭೀರಾರ್ಥವಿಶೇಷಗಳು

ಸಕಲ ದೇವತೆಗಳೂ ಪರಮಾತ್ಮನ ಒಂದೊಂದು ಅಂಶ ಮಾತ್ರ ಸ್ವರೂಪರೆಂದೂ ಮತ್ತು ಅವನ ಅಂಗಗಳೆಂದೂ, **"ಸ ಆತ್ಮಾ ಅಂಗಾನ್ಯನ್ಯಾ ದೇವತಾಃ"** ಎಂಬ ಶ್ರುತಿವಾಕ್ಯಾನುಸಾರ ಸಕಲ ದೇವತೆಗಳ ಅಂತರ್ಯಾಮಿಯೂ ಅವನೊಬ್ಬನೇ ಎಂದೂ ವೇದದಲ್ಲಿ ನಿರೂಪಿತವಾಗಿರುವುದನ್ನು ಸಪ್ರಮಾಣವಾಗಿ ನಮ್ಮ ಗ್ರಂಥಮಾಲೆಯ, ಪ್ರಥಮ ಸಂಪುಟದಲ್ಲಿ "ದೇವರು ಮತ್ತು ದೇವತೆಗಳು", ಲೇಖನದಲ್ಲಿ (ಪುಟ ೬೭ ರಿಂದ ೯೬ರ ವರೆಗೆ) ನಿರೂಪಿಸಲಾಗಿದೆ. (ಹಿಂದೆ, ವರುಣ ದೇವತೆಯ ವಿಷಯವಾಗಿ ಭಗವಂತನ ಅಸಂಖ್ಯಾತ ಮುಖ ಮಹಿಮೆಯಲ್ಲಿ ಅವನೂ ಒಬ್ಬನು ಎಂದು ಹೇಳಿರುವುದನ್ನೇ ಇಲ್ಲಿಯೂ ಸ್ಮರಿಸಬೇಕು.)

ವೇದ ವಾಙ್ಮಯದಲ್ಲಿ ಇಂದ್ರನಿಗೆ ಬಹಳ ದೊಡ್ಡ ಸ್ಥಾನವಿದೆ. ಜೀವನವು ಸರ್ವದಾ ದೇವಾಸುರಸಂಗ್ರಾಮವಾಗಿದೆಯೆಂದೂ ಈ ಯುದ್ಧದಲ್ಲಿ ದೇವತೆಗಳ ಮುಖಂಡನಾಗಿ ನಿಂತು ಅಸುರರನ್ನು ನಿಗ್ರಹಿಸುವ ಭಗವಂತನ ಅಂಶವನ್ನೇ ಇಂದ್ರನೆಂದೂ ವೇದವು ಅನೇಕ ಕಡೆಗಳಲ್ಲಿ ಕೊಂಡಾಡಿದೆ. ಇಂದ್ರನ ಕೂಡ ಹೀಗೆ ಯುದ್ಧ ಮಾಡುವ ಆಸುರೀ ಶಕ್ತಿಗಳ ಕೆಲವೊಂದು ಪ್ರಕಾರಗಳನ್ನು ವೇದದಲ್ಲಿ, **ವೃತ್ರ, ನಮುಚಿ, ಶುಷ್ಣ, ಶಂಬರ, ಪಿಪ್ರು, ಧುನಿ, ಚುಮುರಿ, ವರ್ಚಿ** ಎಂದು ಅಲ್ಲಲ್ಲಿ ಮಾರ್ಮಿಕವಾಗಿ ಉಲ್ಲೇಖಿಸಿ ವರ್ಣಿಸಲಾಗಿದೆ, ಇವರ ಸಾಂಕೇತಿಕ ಅರ್ಥವನ್ನು ಮುಂದೆ ನೋಡೋಣ.

'ಇಂದ್ರ' ಶಬ್ದಾರ್ಥವನ್ನು ಈಗ ಗಮನಿಸೋಣ, ಯಾಸ್ಕಮಹರ್ಷಿಗಳು ನಿರುಕ್ತದಲ್ಲಿ ನಾನಾ ಧಾತುಗಳ ಮೂಲಕ ಹೀಗೆ ಅರ್ಥಮಾಡಿದ್ದಾರೆ: (X-8)

**(೧) "ಇರಾಂ ದೃಣಾತಿ ಇತಿ ವಾ, (೨) ಇರಾಂ ದದಾತಿ ಇತಿ ವಾ, (೩) ಇರಾಂ ದಧಾತಿ ಇತಿ ವಾ, (೪) ಇರಾಂ ದಾರಯತಿ ಇತಿ ವಾ, (೫) ಇರಾಂ ಧಾರಯತಿ ಇತಿ ವಾ, (೬) ಇಂದವೇ ದ್ರವತೀತಿ ವಾ,**

(೭) ಇಂದೌ ರಮತ ಇತಿ ವಾ, (೮) ಇಂಧೇ ಭೂತಾನಿ ಇತಿ ವಾ, (೯) ತದ್ಯದೇನಂ ಪ್ರಾಣೈಃ ಸಮೈಂಧಂಸ್ತದಿಂದ್ರಸ್ಯೇಂದ್ರತ್ವಮಿತಿ ವಿಜ್ಞಾಯತೇ, (೧೦) ಇದಂ ಕರಣಾದಿತ್ಯಾಗ್ರಾಯಣಃ, (೧೧) ಇದಂ ದರ್ಶನಾದಿತ್ಯೌಪಮನ್ಯವಃ, (೧೨) ಇಂದತೇರ್ವೈಶ್ವರ್ಯಕರ್ಮಣಃ (೧೩) ಇಞ್ ಶತ್ರೂಣಾಂ ದಾರಯಿತಾ ವಾ ದ್ರಾವಯಿತಾ ವಾ ಆದರಯಿತಾ ವಾ ಯಜ್ವನಾಂ—ಇತಿ."

೧) ಇದರ ಭಾವ ಹೀಗಿದೆ. 'ದೃ' ಧಾತುವಿಗೆ ಸೀಳುವುದು ಎಂಬ ಅರ್ಥವಿದೆ; 'ಇರಾ' ಶಬ್ದಕ್ಕೆ ಅನ್ನ ಎಂಬ ಅರ್ಥವಿದೆ, ಹೀಗೆ ಮೇಘಗಳನ್ನು ಸೀಳಿ ಸಸ್ಯಪೋಷಣೆಗಾಗಿ ಜಲವನ್ನು ಕೊಡುವವನು ಎಂಬ ಅರ್ಥದಲ್ಲಿ ಇಂದ್ರ ಶಬ್ದವಿದೆ. ಅಥವಾ ನೆಲದಿಂದ ಸಸ್ಯರೂಪವಾದ ಆಹಾರವು ಮೊಳಕೆಯಾಗಿ, ಸೀಳಿಕೊಂಡು ಬರುವಂತೆ ಮಾಡುವವನು ಎಂದೂ ಆಗಬಹುದು. ಮೇಘಗಳು ಸಸ್ಯ ಪೋಷಕವಾದ ನೀರಿನ ಗುಪ್ತಸ್ಥಾನ. ಒಂದು ದೃಷ್ಟಿಯಿಂದ ನೀರೂ ಆಹಾರವೇ. ಇದನ್ನು ಹೊತ್ತೂ ಮಳೆ ಸುರಿಯದೆ ಸ್ವಾರ್ಥದ ಸಾಕಾರ ರೂಪದಲ್ಲಿ ಮೋಡಗಳು ಸಂಚರಿಸುವವು. ಇವುಗಳನ್ನು ಸೀಳಿ, ಲೋಕಕ್ಷೇಮಾರ್ಥವಾಗಿ 'ಮಳೆ' ಸುರಿಸುವುದೇ ಇಂದ್ರನ ಕರ್ತವ್ಯ. ವಿಸ್ತಾರ ಅರ್ಥದಲ್ಲಿ, ಸಾಂಕೇತಿಕಾರ್ಥವಾಗಿ, ಸ್ವಾರ್ಥಶಕ್ತಿಗಳನ್ನು ಸೀಳಿಹಾಕಿ ಲೋಕ ಕಲ್ಯಾಣ ಮಾಡುವವನು ಇಂದ್ರನು. ಮುಂಗಾರು ಮಳೆಯ ಕಾಲದಲ್ಲಿ ಮೋಡಗಳಲ್ಲಿ, ಆಗಾಗ, ಚಿತ್ರ–ವಿಚಿತ್ರ ಆಕಾರಗಳಲ್ಲಿ ಪ್ರವಹಿಸಿ ಬರುವ ವಿದ್ಯುತ್ ಸಂಚಾರವನ್ನು ಕಣ್ಣಿಂದ ಕಂಡವರಿಗೆ ಈ ಅದ್ಭುತ ಇಂದ್ರ ವ್ಯಾಪಾರವು ಸಾಕ್ಷಾತ್ಕಾರವಾಗುವುದು. ಮಾನವನ ಅಂತರಂಗದ ಜೀವನದಲ್ಲೂ ಈ ಕ್ರಿಯೆ ನಡೆಯುತ್ತಲೇ ಇದೆ. ಹೊರ ಪ್ರಕೃತಿಯಲ್ಲಿ ಕಾಣುವುದು ಸಂಕೇತ ಮಾತ್ರ,

೨) ಹೀಗೆ ಅನ್ನವನ್ನು ಮಳೆಯ ಮೂಲಕ ಅನುಗ್ರಹಿಸುವುದು ಇಂದ್ರನ ಇನ್ನೊಂದು ವ್ಯಾಪಾರ. ಮೋಡಗಳನ್ನು ಸೀಳುವುದು ಇದಕ್ಕಾಗಿಯೇ. ಶರೀರಕ್ಕೂ ಮತ್ತು ಇತರ ಉನ್ನತಜೀವನ ವ್ಯಾಪಾರಗಳಿಗೂ ಸಕಾಲದಲ್ಲಿ ಅನ್ನವನ್ನು ಒದಗಿಸುವುದು ಭಗವಂತನ ಕರ್ತವ್ಯ.

೩) 'ಧಾ' ಧಾತುವಿಗೆ ಪೋಷಣೆ ಮಾಡು ಎಂಬ ಅರ್ಥವಿದೆ. ಜಲವನ್ನು ವರ್ಷಿಸಿ ಸಸ್ಯರೂಪವಾದ ಆಹಾರವನ್ನು ಪೋಷಣೆ ಮಾಡುವವನೂ ಇಂದ್ರನೇ.

೪) ಆಹಾರವು ಸಸ್ಯರೂಪದಲ್ಲಿ ಬೆಳೆಯಲು ಭೂಮಿಯು ಅನುಕೂಲವಾಗಿರುವುದು ಅವಶ್ಯಕ. ಭೂಮಿಯು ಅಖಂಡವಾದ ಘನವಸ್ತುವಾಗಿ, ಕಲ್ಲಿನಂತೆ, ಒರಟಾಗಿಯೇ ಪ್ರಕೃತಿ ಸಹಜವಾಗಿ ಇರುವಂತಿದ್ದರೆ, ವ್ಯವಸಾಯವು ಸಾಧ್ಯವೇ ಆಗುತ್ತಿರಲಿಲ್ಲ. ಹೀಗಲ್ಲದೆ ಒಕ್ಕಲಿಗನು ನೇಗಿಲಿನಿಂದ ಭೂಮಿಯನ್ನು ಉತ್ತಾಗ, ನೇಗಿಲಿನ ಸ್ಪರ್ಶದಿಂದ ಭೂಮಿಯು ಸೀಳುವಂತೆ ಏರ್ಪಟ್ಟಿರುವುದು ಭಗವಂತನ ಸೃಷ್ಟಿಯ ಧರ್ಮ. ಹೀಗೆ "**ಇರಾಂ ಉತ್ಪಾದಯಿತುಂ ಕರ್ಷಕ ಮುಖೇನ ಭೂಮಿಂ ವಿದಾರಯತಿ ಇತಿ ಇಂದ್ರಃ**" ಎಂದು ಶ್ರೀ ಸಾಯಣರು ವಿವರಿಸಿರುವಂತೆ, ವ್ಯವಸಾಯದ ಸೌಕರ್ಯಾರ್ಥವಾಗಿ, ಭೂಮಿಯ ಧರ್ಮವನ್ನು ಸೃಜಿಸಿ ಒಕ್ಕಲಿಗನ ಮೂಲಕ ಉಳುವವನೂ, ಇಂದ್ರನೇ.

೫) ಇಲ್ಲಿಯ ವರೆಗೆ ಆಹಾರೋತ್ಪಾದನ ಕಾರ್ಯದಲ್ಲಿ 'ಮೇಘವನ್ನು ಸೀಳುವುದು', ಮಳೆಯನ್ನು ಕೊಡುವುದು, ಸಸ್ಯಗಳನ್ನು ಪೋಷಿಸುವುದು, ಮತ್ತು ಭೂಮಿಯನ್ನು ನೇಗಿಲಿಂದ ಸೀಳಿ ಉಳುವುದು, ಎಂಬ ಕ್ರಿಯೆಗಳನ್ನು ವಿವರಿಸಿತಷ್ಟೇ. ಇನ್ನೂ ಮುಂದೆ, ಹೀಗೆ ಬೆಳೆಯಲು ಆರಂಭಿಸಿದ ಸಸ್ಯಗಳನ್ನು ನಾಶವಾಗದಂತೆ ಸಂರಕ್ಷಿಸುವ ಕರ್ತವ್ಯವೂ ಇಂದ್ರನದೇ, ಎಂದು ಮೇಲಿನ ನಿರುಕ್ತ ವಾಕ್ಯಕ್ಕೆ ಸಾಯಣಾಚಾರ್ಯರು "**ಪೂರ್ವೋಕ್ತ ಪೋಷಣ ಮುಖೇನ ಇರಾಂ ಧಾರಯತಿ, ವಿನಾಶರಾಹಿತ್ಯೇನ ಸ್ಥಾಪಯತಿ ಇತಿ ಇಂದ್ರಃ**" ಎಂದು ಅರ್ಥ ಮಾಡಿದ್ದಾರೆ. ಇದಿಷ್ಟು ಇಂದ್ರ ರೂಪಿಯಾದ ಭಗವಂತನ ಲೋಕಾನುಗ್ರಹ ಸಾಮರ್ಥ್ಯಕ್ಕೆ ಸಂಬಂಧಪಟ್ಟ ವಿವರಣೆಗಳು.

೬) ಈಗ ಇಂದ್ರನ ಇನ್ನೊಂದು ಕರ್ತವ್ಯವನ್ನು ವಿವರಿಸಲಾಗಿದೆ. 'ಇಂದು' ಎಂದರೆ ಬ್ರಹ್ಮಾನಂದ ಸ್ವರೂಪನಾದ ಸೋಮದೇವ. ಯಜ್ಞಭೂಮಿಯಲ್ಲಿ ಇವನು ಸೋಮರಸರೂಪಿಯಾಗಿರುತ್ತಾನೆ. ಇಂದ್ರನು

ಇಂತಹ ಸೋಮನನ್ನು ಹುಡುಕಿಕೊಂಡು ಬಹಳ ಶೀಘ್ರ ಗತಿಯಲ್ಲಿ ಯಜ್ಞ ಭೂಮಿಗೆ ಓಡಿ ಬರುವವನು : "ಇಂದುಃ ಸೋಮೋ ವಲ್ಲೀ ರಸಃ । **ತದರ್ಥಂ ಯಾಗ ಭೂಮೌ ದ್ರವತಿ, ಧಾವತಿ ಇತಿ ಇಂದ್ರಃ ॥**" ಎಂದು ಸಾಯಣಾಚಾರ್ಯರು ವಿವರಿಸಿದ್ದಾರೆ, ಬ್ರಹ್ಮಾನಂದನನ್ನು ಬಯಸುವ ಬ್ರಹ್ಮನಿಷ್ಠನು ಎಲ್ಲೆಲ್ಲಿ ಭಗವಂತನನ್ನು ಕರೆದರೆ, ಅಲ್ಲೆಲ್ಲಾ ಅಕ್ಕರೆಯಿಂದ ಓಡಿಬರುವವನು.

೭) ಅಲ್ಲದೇ ಸೋಮಪಾನದಿಂದ ತೃಪ್ತನಾಗಿ ಸ್ರೀತಿಸುವವನು :

"ಇಂದೌ **ಯಥೋಕ್ತೇ ಸೋಮೇ ರಮತೇ ಕ್ರೀಡತಿ, ಇತಿ ಇಂದ್ರಃ**" ಎಂದು ಸಾಯಣರ ವಿವರಣೆ. ಭಗವಂತನು ಆನಂದಮಯನೆಂಬುದಾಗಿ, ತೈತ್ತಿರೀಯ ಶ್ರುತಿಯು ಕೊಂಡಾಡಿದೆ. ಈ ಆನಂದವು ಅಪ್ರಾಕೃತವಾಗಿದ್ದು ನಿರಂತರವಾಗಿ ಪ್ರಚುರವಾಗಿದೆಯೇ ಹೊರತು ಮತ್ತೊಂದು ಪದಾರ್ಥದ ವಿಕಾರವಲ್ಲ ಎಂದು ಬ್ರಹ್ಮಸೂತ್ರಜ್ಞರಾದ ವೇದಾಂತಿಗಳು ವಿವರಿಸುವಂತೆ, ಭಗವಂತನು ತನ್ನದೇ ಆದ ಆನಂದಾನುಭೂತಿಯಲ್ಲಿ ಸರ್ವದಾ ಆಸಕ್ತನಾಗಿರುತ್ತಾನೆಂದು ಭಾವ.

೮) 'ಇಂಧ್'ಧಾತುವಿಗೆ ಬೆಳಗು ಎಂಬ ಅರ್ಥವಿದೆ. ಹೀಗೆ ಸಕಲ ಪ್ರಾಣಿಗಳ ದೇಹಗಳನ್ನೂ ಹೊಕ್ಕು, ಚೈತನ್ಯರೂಪದಿಂದ ಅವುಗಳಲ್ಲಿ ಧಾರಕನಾಗಿ ನಿಂತು. ಅವು ತಮ್ಮ ತಮ್ಮ ವ್ಯಾಪಾರಗಳಲ್ಲಿ ತೊಡಗುವಂತೆ ಮಾಡಿ, ಜಡ ಪ್ರಕೃತಿಗಿಂತಲೂ ಭಿನ್ನವಾಗಿರುವಂತೆ, ಅವುಗಳನ್ನು ಬೆಳಗಿಸುವವನಾದುದರಿಂದ ಭಗವಂತನು ಇಂದ್ರನಾಗಿದ್ದಾನೆ : "**ಭೂತಾನಿ, ಪ್ರಾಣಿ ದೇಹಾನಿ, ಇಂಧೇ, ಜೀವಚ್ಚೈತನ್ಯರೂಪೇಣ ಅಂತಃಪ್ರವಿಶ್ಯ ದೀಪಯತಿ, ಇಂದ್ರಃ**" ಎಂದು ಸಾಯಣರ ವಿವರಣೆ. ಪ್ರಳಯ ಕಾಲದಲ್ಲಿ ಜೀವ ಜಡವಸ್ತುಗಳು ಅತಿ ಸೂಕ್ಷ್ಮರೂಪದಲ್ಲಿ ಭಗವಂತನ ಗರ್ಭದಲ್ಲಿ ಹಿರಣ್ಯದಂತೆ ಸಂಗೃಹೀತನಾಗಿ (ಗಣಿಯಲ್ಲಿ ಚಿನ್ನದ ಪುಡಿಯು ಮಣ್ಣಿನ ಪುಡಿಯೊಡನೆ ಬೆರೆತಿರುವಂತೆ) ಇರುವ ದುಃಸ್ಥಿತಿಯಲ್ಲಿ, ಜೀವ ಕಾರುಣ್ಯಭಾವದಿಂದ, ಭಗವಂತನು, ತನ್ನ ಕರುಣಾಕಟಾಕ್ಷದಿಂದ "ಸ ಐಕ್ಷತ" ಎಂಬಂತೆಯೂ, "**ತತ್ಸೃಷ್ಟ್ವಾ, ತದನುಪ್ರವಿಶ್ಯ**" ಇತ್ಯಾದಿ ಕ್ರಮದಲ್ಲಿ ಜೀವ ರಾಶಿಗಳನ್ನು ಕರಣ ಕಳೇವರಗಳೊಂದಿಗೆ ಸಂಯೋಜಿಸಿ, ಇಷ್ಟು ಸಾಲದೇ, ತಾನೇ

ಅವುಗಳಲ್ಲಿ ಅಂತರ್ಯಾಮಿಯಾಗಿ ಅನುಪ್ರವೇಶಿಸಿ, ನಿಂತು, ಚೇತನರ ಸಕಲ ವ್ಯಾಪಾರಗಳಿಗೂ ಆಧಾರನೂ ಪ್ರೇರಕನೂ, ವಿಧಾಯಕನೂ ಆಗಿ ನಿಂತಿರುವ ಪ್ರಸಿದ್ಧ ವೇದತತ್ತ್ವವು ಈ ನಿರುಕ್ತ ಕ್ರಮದಲ್ಲಿ ವಿವರಿಸಲ್ಪಟ್ಟಿದೆ.

೯) ಇಂತಹ ಪರಮಾತ್ಮರೂಪನಾದ ಇಂದ್ರನನ್ನು ಜ್ಞಾನಿಗಳಾದ ಮಹಾತ್ಮರು ಪ್ರಾಣಾಪಾನಾದಿ ವಾಯುಗಳಿಂದಲೂ, ವಾಕ್ ಮೊದಲಾದ ಇಂದ್ರಿಯಗಳಿಂದಲೂ, ಯೋಗಮಾರ್ಗದಿಂದಲೂ, ಸಹಯೋಗ ಹೊಂದಿ, ಧ್ಯಾನಕಾಲದಲ್ಲಿ ಚೆನ್ನಾಗಿ ಪ್ರಕಾಶಿಸುವಂತೆ ಮಾಡಿಕೊಳ್ಳುವರಾದುದರಿಂದಲೂ ಇಂದ್ರ ನಾಮವು ಸಂಪನ್ನವಾಗಿದೆ ಎಂದು ಸಾಯಣರ ವಿವರಣೆ :— "**ಏನಂ ಪರಮಾತ್ಮರೂಪಂ ಇಂದ್ರಂ ದೇವಂ ಪ್ರಾಣೈಃ ವಾಕ್ ಚಕ್ಷುರಾದಿ ಇಂದ್ರಿಯೈಃ ಪ್ರಾಣಾದಿ ವಾಯುಭಿಶ್ಚ ಸಹಿತಂ ಸಮ್ಯೆಂಧನ್, ಉಪಾಸಕಾಃ ಧ್ಯಾನೇನ ಸಮ್ಯಕ್ ಪ್ರಕಾಶಿತವಂತಃ ತಸ್ಮಾತ್ ಕಾರಣಾತ್, ಇಂಧ್ರನಾಮ ಸಂಪನ್ನಂ**" ಎಂದರೆ ಭಗವಂತನು ಎಲ್ಲರಲ್ಲಿಯೂ ಒಂದೇ ವಿಧವಾಗಿ ಅಂತರಾತ್ಮನಾಗಿದ್ದರೂ, ಏತಕ್ಕಾಗಿ ಒಂದೇ ಪ್ರಕಾರದಲ್ಲಿ ಎಲ್ಲರಲ್ಲೂ ಪ್ರಕಾಶಿಸುವುದಿಲ್ಲ? ಎಂಬ ಪ್ರಶ್ನೆಗೆ ಈ ನಿರುಕ್ತವು ವಿವರಣೆಯಾಗಿದೆ. ಅಗ್ನಿಯು ರೂಪವತ್ತಾದ ಸಕಲ ಪದಾರ್ಥಗಳಲ್ಲಿ ಇದ್ದರೂ ಎಲ್ಲಿ ಉದ್ದೀಪನ ಆಗುವುದೋ ಅಲ್ಲಿ ಮಾತ್ರ ಉಜ್ಜ್ವಲವಾಗಿ, ಪ್ರಕಾಶಿಸುವುದು. ಹಾಗೆಯೇ ಭಗವಂತನನ್ನು ಉದ್ದೀಪಿಸುವಂತೆ ಮಾಡುವುದು ಸಾಧಕನ ಕರ್ತವ್ಯ. "ಲಾಲಿಸಿದರೆ ಮಕ್ಕಳು, ಪೂಜಿಸಿದರೆ ದೇವರು" ಎಂಬ ಗಾದೆಯ ಮಾತು ಇದನ್ನೇ ಹೇಳುತ್ತದೆ. ಮಕ್ಕಳನ್ನು ಹೊಂದಿದ್ದವರಿಗೆಲ್ಲ ಆ ಮಕ್ಕಳಿಂದ ಒಂದೇ ವಿಧವಾದ ಪ್ರೀತಿಯೂ ಆನಂದವೂ, ದೊರಕುವುದಿಲ್ಲವಷ್ಟೆ! ಎಲ್ಲಿ ಲಾಲನೆಯೋ ಅಲ್ಲಿ ಅಷ್ಟಷ್ಟು ಆನಂದ ಬರುವಂತೆ, ಭಗವಂತನನ್ನು ಸರ್ವದಾ ಸ್ತೋತ್ರ ಮಾಡುವವನಿಗೆ ಮಾತ್ರ ಭಗವತ್ ಪ್ರೀತಿ ಲಭ್ಯ. ಭಗವಂತನು ಸ್ತೋತ್ರಪ್ರಿಯನೆಂದೂ, ಸಾಮಗಾನ ಲೋಲನೆಂದೂ, "ಉರುಗಾಯ" ನೆಂದೂ, ಮುಂತಾಗಿ ಕೊಂಡಾಡಲ್ಪಟ್ಟಿರುವುದು ಇದಕ್ಕಾಗಿಯೇ. ಅಷ್ಟಾಂಗಯೋಗವು, ಇಂತಹ ಭಗವತ್ಪ್ರೀತಿಗೆ ಸಾಧನ ಮಾರ್ಗ.

೧೦) ಆಗ್ರಾಯಣನೆಂಬ ಮುನಿಯ ಪ್ರಕಾರ ಪರಮಾತ್ಮರೂಪಿಯಾದ ಇಂದ್ರನಿಂದ '**ಇದಂ**' ಎಂದು ನಿರ್ದೇಶಿಸಲ್ಪಡುವ ಈ ಸಕಲ ಚರಾಚರ

ಜಗತ್ತೂ ಸೃಷ್ಟಿಸಲ್ಪಟ್ಟಿರುವುದರಿಂದ (ಇದಂ ಕರಣಾತ್) "ಸರ್ವಸ್ರಷ್ಟಾ" ಎಂಬ ಅರ್ಥದಲ್ಲಿ ಇಂದ್ರ ಶಬ್ದವಿದೆ: "ಇಂದ್ರೋ ಹಿ ಪರಮಾತ್ಮ ರೂಪೇಣ ಇದಂ ಜಗತ್ ಕರೋತಿ", ಎಂದು ಸಾಯಣ ಭಾಷ್ಯ.

೧೧) ಔಪಮನ್ಯರೆಂಬ ಮುನಿಗಳ ಪ್ರಕಾರ "ಇದಂ ದರ್ಶನಾತ್" ಎಂಬಂತೆ ತಾನೇ ಸೃಷ್ಟಿಸಿದ ಈ ಸಕಲ ಜಗತ್ತನ್ನೂ ಸರ್ವದಾ ಒಂದೇ ಸಮ ನೋಡುತ್ತಿರುವನಾದುದರಿಂದ ಪರಮಾತ್ಮನು ಇಂದ್ರನು. ಇದು ಭಗವಂತ ನಿಗೇ ಅಸಾಧಾರಣವಾದ ವಿಶಿಷ್ಟ ಶಕ್ತಿ, ಭೂತ, ಭವ್ಯ, ವರ್ತಮಾನಗಳೆಲ್ಲ ವನ್ನೂ (ಕಣ್ಣಿಗೆ ಕಾಣದಿರುವುದನ್ನೂ ಸೇರಿಸಿ ಎಡಬಿಡದೆ ವೀಕ್ಷಿಸುವವನು ಎಂದು ಅರ್ಥ.

೧೨) 'ಇದಿ' ಧಾತುವಿಗೆ ಪರಮೈಶ್ವರ್ಯ ಎಂದು ಅರ್ಥ. ಈ ಜಗ ತ್ತೆಲ್ಲವೂ ಪರಮಾತ್ಮನ ವಿಸ್ತೃತ ವಿಭೂತಿ. ಇರುವುದೆಲ್ಲ ಅವನ ಒಡೆತನಕ್ಕೆ. ದೊಡ್ಡತನಕ್ಕೆ. ಸಂಪತ್ ಸಮೃದ್ಧಿಗೆ ಸಾಕ್ಷಿಗಳು. ಭಗವದ್ಗೀತೆಯ ೧೦ನೇ ಅಧ್ಯಾಯದ ಸಂಗ್ರಹ ರೂಪದಂತಿರುವ ಈ ನಿರುಕ್ತವು "ಯದ್ಯದ್ವಿಭೂತಿ ಮತ್ ಸತ್ವಂ ಶ್ರೀಮತ್"— ಎಂಬಂತೆ ಸೃಷ್ಟಿಯೆಲ್ಲವೂ ಭಗವಂತನ ಲೀಲಾ ವಿಭೂತಿ ಎಂಬ ಐಶ್ವರ್ಯ. ಇದರ ಇನ್ನೊಂದು ಬೆನ್ನಾದ, ಬ್ರಹ್ಮಾದಿಗಳಿಗೂ, ಅವಾಂಙ್ಮನಸ ಗೋಚರವಾದ, ಅಪ್ರಾಕೃತವಾದ, ನಿತ್ಯ ವಿಭೂತಿಯೂ ಭಗವಂತನ ಐಶ್ವರ್ಯವೇ, ಹೀಗೆ ಉಭಯ ವಿಭೂತಿನಾಥನೆಂಬ ಅರ್ಥದಲ್ಲಿ. ಪರಮೇಶ್ವರ ಶಬ್ದದ ಸಮಾನಾರ್ಥವಾಗಿ ಇಂದ್ರ ಶಬ್ದವು ಇಲ್ಲಿ ವಿವರಿಸಲ್ಪ ಟ್ಟಿದೆ.

೧೩) 'ಇನ್' ಶಬ್ದಕ್ಕೆ ಈಶ್ವರ ಎಂದರ್ಥ. 'ದ್ರ' ಎಂದರೆ, ಭಯ, ಎಂದರ್ಥ. ಪರಮೇಶ್ವರನಾದ ಇಂದ್ರನು ಶತ್ರು ಭಯಂಕರನೆಂದೂ, ಅವರನ್ನು ಹೆದರಿಸಿ, ನಿಗ್ರಹಿಸಿ, ಸೀಳುವವನು: "ಸ ಚ ಪರಮೇಶ್ವರಃ ಶತ್ರೂಣಾಂ ದಾರಯಿತಾ ಭೀಷಯಿತಾ ಇತಿ ಇಂದ್ರಃ" ಎಂದು ಸಾಯಣ ಭಾಷ್ಯ. ಅಥವಾ ಶತ್ರುಗಳನ್ನು ಓಡಿ ಹೋಗುವಂತೆ ಮಾಡುವವನು, ಅವ ರನ್ನು ಕರಗಿಸಿ ಬಿಡುವವನು :— "ಶತ್ರೂಣಾಂ ದ್ರಾವಯಿತಾ ಪಲಾ ಯನಂ ಪ್ರಾಪಯಿತಾ ಇತಿ ಇಂದ್ರಃ" ಎಂಬಂತೆಯೂ ಪರಮಾತ್ಮನು ಇಂದ್ರನು! ಹಾಗೂ "ಯಜ್ವನಾಂ ಯಾಗಾನುಷ್ಠಾಯಿನಾಂ ಆದ

ರಯಿಂತಾ ಭಯಸ್ಯ ಪರಿಹರ್ತಾ” ಎಂಬಂತೆ ಯಜ್ಞಶೀಲರು, ಯಾಗಗಳಿಂದ ತನ್ನನ್ನು ಆರಾಧಿಸುವಾಗ ಅವರನ್ನು ಆದರಿಸಿ, ಅವರ ಭಯವನ್ನು ಪರಿಹರಿಸುವವನು, ಎಂಬ ಅರ್ಥದಲ್ಲಿ “ರಕ್ಷಕ”ನೆಂಬ ವಿಷ್ಣು ಶಬ್ದದ ಪ್ರಧಾನಾರ್ಥದ ಸಾಕಾರ ಮೂರ್ತಿಯಾಗಿರುವವನೂ ಇಂದ್ರನೇ. ಈ ಎಲ್ಲ ಮೇಲಿನ ನಿರುಕ್ತವಾಕ್ಯಗಳಿಗೂ ಸಂಗ್ರಹ ವಿವರಣೆಗಳನ್ನು ಶ್ರೀ ಸಾಯಣರು ಋಕ್ ಸಂಹಿತೆಯ (I–3–4) ಭಾಷ್ಯದಲ್ಲಿ ಬರೆದಿದ್ದಾರೆ.

## ೨. ‘ಇಂದ್ರ’ ಸಾಕ್ಷಾತ್ಕಾರದ ಕಷ್ಟಸಾಧ್ಯತೆ

ಹೀಗೆ ಭಗವಂತನ ಬಹುಮುಖ ವ್ಯಕ್ತಿತ್ವವನ್ನು ಮತ್ತು ವ್ಯಾಪಾರವನ್ನೂ ಇಂದ್ರ ಶಬ್ದವು ಪ್ರತಿನಿಧಿಸುತ್ತದೆ. ಸುಮಾರು ೨೫೦ ಕ್ಕಿಂತ ಮೇಲ್ಪಟ್ಟ ಋಕ್‌ಸೂಕ್ತಗಳಲ್ಲಿ ಇಂದ್ರ ಸ್ತುತಿ ಇದೆ. ಮಾನವನ ಹೃದಯಾಕಾಶದಲ್ಲಿ ಸರ್ವದಾ ಬೆಳಗುವ ಅಂತರಿಕ್ಷ ದೇವತೆ ಇವನು. ಇವನನ್ನು ತಿಳಿಯುವುದು ಮತ್ತು ಸಾಕ್ಷಾತ್ಕರಿಸಿಕೊಳ್ಳುವುದು ಬಹು ಕಷ್ಟವೆಂದು ವೇದವೇ ಹೇಳುತ್ತದೆ.

“ನ ಹಿ ನು ಯಾದಧೀಮಸೀಂದ್ರಂ ಕೋ ವೀರ್ಯಾಪರಃ ।
ತಸ್ಮಿನ್ನೃಮ್ಣಮುತಕ್ರತುಂ ದೇವಾ ಓಜಾಂಸಿ ಸಂದಧುರರ್ಚನ್ನ
ನುಸ್ವರಾಜ್ಯಂ”
(ಋ, ಸಂ. I–80–15)

“ಇಂದ್ರನು ಸರ್ವವ್ಯಾಪಿ. ನಾವಾದರೋ ಅಲ್ಪರು, ಮತ್ತು ಅಜ್ಞರು. ಇಂದ್ರನು ತನ್ನ ಸರ್ವಸ್ವಾಮಿತ್ವವನ್ನು ಯಾವಾಗಲೂ ಪ್ರಕಟಿಸುತ್ತಲೇ ಇದ್ದಾನೆ. ಇಂತಹ ಇವನಲ್ಲಿ ಸಕಲ ದೇವತೆಗಳೂ ತಮ್ಮ ಧನವನ್ನೂ ಪರಾಕ್ರಮನ್ನೂ ಸ್ಥಾಪಿಸಿದ್ದಾರೆ. ಹೀಗೆ ನಮಗೆ ತಿಳಿಯದಷ್ಟು ದೂರವೂ ಗೂಢವೂ ಆದ ಸ್ಥಾನದಲ್ಲಿರುವ ಇವನನ್ನು ಯಾವನು ತಾನೇ ತಿಳಿಯ ಬಲ್ಲನು!”

ಇದು ಗೌತಮ ಗೋತ್ರದ ರಹೂಗಣನೆಂಬ ಋಷಿದೃಷ್ಟವಾದ ಸೂಕ್ತ. ಇದರ ೧೬ ಮಂತ್ರಗಳೊಂದೊಂದರ ಕೊನೆಯಲ್ಲಿಯೂ ‘ಅನುಸ್ವರಾಜ್ಯಂ’

ಎಂಬ ಶಬ್ದಗಳು ಪುನರುಕ್ತವಾಗಿದ್ದು, ಇಂದ್ರನ ಸ್ವರಾಜ್ಯ ಮಹಿಮೆಯನ್ನು (ಆಧಿಪತ್ಯ) ಪ್ರಕಟಿಸುವುವು. ಗರುಡ ರೂಪದ ಗಾಯತ್ರಿಯಿಂದ ತರಲ್ಪಟ್ಟ ತ್ರಿವಿಕ್ರಮನ ತೃತೀಯ ಪಾದ ಸ್ಥಾನದಲ್ಲಿರುವ ಅಮೃತ (ಸೋಮದ) ಪಾನವೂ, ಮತ್ತು ವೃತ್ರವಧೆಯೂ ಇಂದ್ರನ ಸ್ವಾರಾಜ್ಯಕ್ಕೆ ಉತ್ತಮ ನಿದರ್ಶನ ಗಳು, ವಜ್ರಾಯುಧವನ್ನು ಹಿಡಿಯುವುದೂ ಮತ್ತು ಯಜ್ಞದ್ವೇಷಿಗಳನ್ನು ನಿಗ್ರಹಿಸುವುದೂ ಇವನ ಮುಖ್ಯ ಸಾಹಸ ಚರ್ಯೆ. ಆದರೆ ಈ ಇಂದ್ರನ ಜ್ಞಾನವು ಬಹು ಜನರಿಗೆ ದುರ್ಲಭವಾಗಿದ್ದರೂ ಸಾವಿರಾರುಜನ (ಋಷಿಗಳು) ಏಕಕಾಲದಲ್ಲಿ ಇವನನ್ನು ತಿಳಿದು ಪೂಜಿಸಿದವರೂ ಉಂಟು,

ಯಜ್ಞದಲ್ಲಿ ಭಾಗವಹಿಸುವ ೨೦ ಜನರೂ ಮತ್ತು ನೂರಾರು ಋಷಿ ಗಳೂ ಪುನಃ ಪುನಃ ಇವನನ್ನು ಸ್ತುತಿಸಿಯೇ ಇದ್ದಾರೆ. ಜ್ಞಾನಿಯಾದವನಿಗೆ ಯಜ್ಞದಲ್ಲಿ ಹವಿಸ್ಸು ಇರುವುದೇ ಇಂದ್ರನ ಅರ್ಪಣೆಗಾಗಿ. ಈ ವಿಷಯ ವನ್ನು ಅದೇ ಸೂಕ್ತದ ಈ ಕೆಳಗಿನ ಮಂತ್ರ ತಿಳಿಸುತ್ತದೆ.

ಸಹಸ್ರಂ ಸಾಕಮರ್ಚತ ಪರಿಷ್ಟೋಭತ ವಿಂಶತಿಃ |
ಶತೈನ ಮನ್ವನೋನವು ರಿಂದ್ರಾಯ ಬ್ರಹ್ಮೋದ್ಯತ
ಮರ್ಚನ್ನನು ಸ್ವರಾಜ್ಯಂ"

ಅಂದರೆ ಬ್ರಹ್ಮಜ್ಞಾನ ಸಾಮಾನ್ಯರಿಗೆ ದುರ್ಲಭವಾಗಿದ್ದರೂ ಜ್ಞಾನಿಗಳಾದ ಕೆಲವರಿಗೆ ಹಿಂದೆಯೂ, ಈಗಲೂ, ಮುಂದೆಯೂ ಲಭ್ಯವೆಂದು ಭಾವ. ಇಂತಹ ಇಂದ್ರನ ಪ್ರಧಾನವಾದ ಲಕ್ಷಣಗಳಲ್ಲಿ ಈ ಕೆಳಗಿನ ಮಂತ್ರ ಎರಡನ್ನು ಎತ್ತಿ ಹೇಳುತ್ತದೆ : ೧) ಭಯಂಕರವಾದ ತೇಜೋವಂತನಾಗಿ, ಶತ್ರು ಭಯಂಕರವಾದ ವಜ್ರಾಯುಧವನ್ನು ಧರಿಸಿ. ದಸ್ಯುಗಳಾಗಿ ಜೀವಕಂಟಕರಾದ ರಾಕ್ಷಸರನ್ನು ನಿಗ್ರಹಿಸುವ ಇಂದ್ರನ ಸರ್ವಜ್ಞತ್ವ ಸರ್ವಶಕ್ತತ್ವ–ಇದು ಒಂದಂಶ. (ದುಷ್ಟ ಶಿಕ್ಷಣವೆಂಬ ಭಗವತ್ಕರ್ತವ್ಯದ ರೂಪವಿದು.)

೨) ಅವನನ್ನು ನಾನಾ ವಿಧವಾಗಿ ಕೊಂಡಾಡತಕ್ಕ ಜ್ಞಾನಿಗಳನ್ನು ಅನುಗ್ರಹಿಸುವುದು, ಮತ್ತು ಅವರಿಗೆ ಸಕಲ ವಿಧದಲ್ಲಿಯೂ ರಕ್ಷಕನಾಗಿದ್ದು ಪ್ರಭಾವಶಾಲಿಯೂ ಬಲಶಾಲಿಯೂ ಆಗಿ ಮರುತ್ತುಗಳೊಡಗೂಡಿ "ಪಾಂಚ ಜನ್ಯ"ನಾಗಿರುವುದು. (ಅಂದರೆ ಗಂಧರ್ವ, ಅಪ್ಸರಸ್, ದೇವ, ಅಸುರ,

ರಾಕ್ಷಸರೆಂಬ ಐದು ವಿಧ ಜೀವಿಗಳಿಗೂ ಒಡೆಯನಾಗಿರುವುದು. ಅಥವಾ ನಿಷಾದರನ್ನು ಮೊದಲುಗೊಂಡು ಒಟ್ಟು ಐದು ವರ್ಣಗಳ ರಕ್ಷಕನಾಗಿರುವುದು ಎರಡನೆಯ ಕರ್ತವ್ಯ. ಅಂದರೆ, ಶಿಷ್ಟ ಪರಿಪಾಲನೆ. ಹೀಗೆ "ಪರಿತ್ರಾಣಾಯ ಸಾಧೂನಾಂ, ವಿನಾಶಾಯ ಚ ದುಷ್ಕೃತಾಂ" ಎಂಬಂತೆ, ಸಾಧು ಪರಿತ್ರಾಣ ಮತ್ತು ದುಷ್ಟವಿನಾಶಗಳೆಂಬ ಭಗವತ್ಕಾರ್ಯಗಳನ್ನೇ ಈ ಮಂತ್ರವು ಬೋಧಿಸುತ್ತಿದೆ.

**ಸ ವಜ್ರಭೃದ್ದಸ್ಯುಹಾ ಭೀಮ ಉಗ್ರಃ ಸಹಸ್ರಚೇತಾಃ**
**ಶತನೀಥ ಋಭ್ವಾ**
**ಚಮ್ರೀಷೋನ ಶವಸಾ ಪಾಂಚಜನ್ಯೋ ಮರುತ್ವಾನ್ನೋ**
**ಭವತ್ವಿಂದ್ರ ಊತೀ**
(ಋ. ಸಂ. I-100912)

## ೩. ಇಂದ್ರನ 'ದುಃಖ' !

ಇಂದ್ರನು ಸರ್ವದಾ ಮರುದ್ಗಣಗಳೊಡನೆ ಕೂಡಿಯೇ ಇರುತ್ತಾನೆಂದು ಮೇಲೆ ಹೇಳಿದೆಯಷ್ಟೆ ! ಜ್ಞಾನಿಗಳಾದ ಋಷಿಗಳೂ ಸಹ ಇಂದ್ರನ ಮಾಹಾತ್ಮ್ಯವನ್ನು ಸರಿಯಾಗಿ ತಿಳಿಯದೆ ಅವನನ್ನು ಉಪೇಕ್ಷಿಸಿ. ಅವನಿಗಿಂತ ಕೆಳಮಟ್ಟದ ದೇವತೆಗಳನ್ನು ಉಪಾಸಿಸುವರೆಂಬ ವಿಷಯದಲ್ಲಿ ಇಂದ್ರನಿಗೆ ಉಂಟಾದ, ಖೇದವು (ದುಃಖವು) ಒಂದು ಮಂತ್ರದಲ್ಲಿ ಉಕ್ತವಾಗಿದೆ. **ಇದು ಭಗವಂತನ ಸಂಕಟ :** ವಿಶ್ವಪತಿಯಾಗಿ ಸಕಲ ದೇವತೆಗಳ ಅಂತರಾತ್ಮನೂ, ಸಕಲ ಫಲಪ್ರದಾತೃವೂ, ಆದ ಭಗವಂತನಿರುವಾಗಲೂ ಅವನನ್ನು ಉಪೇಕ್ಷಿಸುವ ಜನಗಳಿಗೆ ಯಾವ ಕಾಲದಲ್ಲಿ ತಾನೆ ಕೊರತೆಯುಂಟು? "ಅವಜಾನಂತಿ ಮಾಂ ಮೂಢಾಃ" (IX-11) ಎಂದೂ. "ನಾಹಂ ಪ್ರಾಕಾಶಃ ಸರ್ವಸ್ಯ ಯೋಗಮಾಯಾ ಸಮಾವೃತಃ । ಮೂಢೋಯಂ ನಾಭಿಜಾನಾತಿ" (VII-25) ಎಂದೂ, ಪರಿಪರಿಯಾಗಿ, "ಮಾಂ ತು ವೇದ ನ ಕಶ್ಚನ" (VII-26) ಎಂದೂ, ಭಗವಂತನೇ ಈ ವಿಷಯದಲ್ಲಿ ಗೀತೆಯಲ್ಲಿ ದುಃಖ ಪಟ್ಟಿರುವುದು ಸುಪ್ರಸಿದ್ಧವಷ್ಟೇ ? ಕುಲಶೇಖರ ಮುನಿಗಳೂ ಸಹ :

ನಾಥೇ ನಃ ಪುರುಷೋತ್ತಮೇ ತ್ರಿಜಗತಾಂ, ಏಕಾಧಿಪೇ
ಚೇತಸಾ ।
ಸೇವ್ಯೇ ಸ್ವಸ್ಯ ಪದಸ್ಯ ದಾತರಿ ಸುರೇ ನಾರಾಯಣೇ ತಿಷ್ಠತಿ ॥
ಯಂ ಕಂಚಿತ್ ಪುರುಷಾಧಮಂ ಕತಿಪಯ ಗ್ರಾಮೇಶಂ
ಅಲ್ಪಾರ್ಥದಂ ।
ಸೇವಾಯೈ ಮೃಗಯಾಮಹೇ ನರಮಹೋ ಮೂಕಾ
ವರಾಕಾವಯಂ ॥
(ಮುಕುಂದ ಮಾಲಾ ಸ್ತೋತ್ರ)

ಎಂದು ದುಃಖ ಪಟ್ಟಿದ್ದಾರೆ. ದೇವನಾಥನಾಗಿ, ಮೂರು ಲೋಕದ ಒಡೆಯನಾಗಿ, ಸೇವ್ಯನಾದ ಭಗವಂತನು ಇರುವಾಗ ಅವನನ್ನು ಬಿಟ್ಟು ಪುರುಷಾಧಮನೂ, ಕೇವಲ ಹಳ್ಳಿಗೆ ಪಟೇಲನಂತಿರುವ (ದೇವತೆಯನ್ನೂ) ಅಥವಾ ಮನುಷ್ಯರನ್ನೂ ಕೊಂಡಾಡಿ, ಅರ್ಚಿಸುವುದು ದುರ್ಭಾಗ್ಯವಲ್ಲವೆ ? ಹೀಗೆ. ಸ್ವಯಂ ಇಂದ್ರ ಸ್ವರೂಪಿಯಾದ ಭಗವಂತನೇ ವೇದದಲ್ಲಿ ಈ ವಿಷಯದಲ್ಲಿ ತನ್ನ ಸಂಕಟವನ್ನು ವ್ಯಕ್ತ ಪಡಿಸಿರುವುದಕ್ಕೆ ಈ ಕೆಳಗಿನ ಮಂತ್ರ ಒಂದು ಶ್ರೇಷ್ಠವಾದ ಉದಾಹರಣೆ :

ನ ನೂನಮಸ್ತಿ ನೋ ಶ್ವಃ ಕಸ್ತದ್ವೇದಯದದ್ಭುತಂ ।
ಅನ್ಯಸ್ಯ ಚಿತ್ತಮಭಿ ಸಂಚರೇಣ್ಯ ಮುತಾಧೀತಂ ವಿನಶ್ಯತಿ ॥
(ಋ. ಸಂ. 1-170-1)

## ೪. ಇಂದ್ರ-ಅಗಸ್ತ್ಯ ಸಂವಾದದ ಹಿನ್ನೆಲೆ-ವಿವರಣೆ

ಇದರ ಹಿನ್ನೆಲೆ ಹೀಗಿದೆ. ಒಮ್ಮೆ ಮಹಾ ಜ್ಞಾನಿಗಳಾದ ಅಗಸ್ತ್ಯ ಮಹರ್ಷಿಗಳೂ ಸಹ, ಇಂದ್ರನಿಗೆಂದು ಸಿದ್ಧ ಪಡಿಸಿಟ್ಟ ಹವಿಸ್ಸನ್ನು ಒಂದಾನೊಂದು ಯಜ್ಞದಲ್ಲಿ ಮರುತ್ತುಗಳಿಗೆ ಕೊಡಲು ಇಚ್ಛಿಸಿದರು. ಇದನ್ನು ತಿಳಿದು ಇಂದ್ರನು ಅವರನ್ನು ಕುರಿತು ತನ್ನ ಖೇದವನ್ನು ಈ ಮೇಲಿನ ಮಂತ್ರದಲ್ಲಿ ವ್ಯಕ್ತಪಡಿಸುತ್ತಾನೆ. ಈ ಐತಿಹ್ಯವನ್ನು ಯಾಸ್ಕರು ನಿರುಕ್ತ (I-5) ದಲ್ಲೂ, ಶೌನಕರು ಬೃಹದ್‌ದೇವತೆ (IV-50)ರಲ್ಲೂ ಸೂಚಿಸಿದ್ದಾರೆ. ಈಗ ಮಂತ್ರದ ಭಾವಾರ್ಥ ಹೀಗಿದೆ:

ಇಂದ್ರ : "ಎಲೈ ಅಗಸ್ತ್ಯನೇ ! ಈ ದಿವಸವಾಗಲೀ ನಾಳೆಯಾಗಲೀ ಏನು ನಡೆಯುವುದೆಂಬುದನ್ನು ತಿಳಿಯುವವನು ಯಾರೂ ಇಲ್ಲ. ಇಂಥದರಲ್ಲಿ, ಆಶ್ಚರ್ಯಕರವಾದ ಭವಿಷ್ಯವನ್ನು ತಾನೇ ತಿಳಿಯಲಾರದಿರುವಾಗ, ಬೇರೆ ಯಾವನು ತಾನೇ ತಿಳಿಯಬಲ್ಲನು ? ಮನುಷ್ಯನ ಮನಸ್ಸು ಸಿಕ್ಕ ಸಿಕ್ಕ ಕಡೆ ಗಳಲ್ಲಿ ಸಂಚರಿಸುತ್ತಲೇ ಇದೆ. ಇಂತಹವನ ಮನಸ್ಸನ್ನು ತಿಳಿಯುವುದೆಂತು? ಚೆನ್ನಾಗಿ ಅಧ್ಯಯನ ಮಾಡಿದ (ಅಗಸ್ತ್ಯನಾದ ನಿನ್ನಂಥವನ) ವೈದಿಕ ಜ್ಞಾನ ಪುಷ್ಟವಾದ ಸ್ಮೃತಿಯೂ, ಒಮ್ಮೊಮ್ಮೆ (ಈಗ ನಡೆದಂತೆ) ನಾಶವಾಗುತ್ತದೆ. ಇನ್ನುಳಿದವರ ಪಾಡೇನು ?"

ಇದರಲ್ಲಿ ಬಹು ಮಾರ್ಮಿಕವಾದ ಕೆಲವು ವೇದಾಂತ ತತ್ವಗಳಿವೆ : ಭಗವಂತನು ಸರ್ವನಿಯಾಮಕನೇನೋ ಹೌದು, ಆದರೆ ಎಲ್ಲ ಜೀವಿಗಳೂ ಒಂದೇ ಪ್ರಕಾರ ಸರ್ವದಾ ಒಳ್ಳೆಯ ಜ್ಞಾನಸಂಪನ್ನರಾಗಿ, ಸತ್ಕಾರ್ಯದಲ್ಲೇ ಆಸಕ್ತರಾಗಿರುವಂತೆ ಮಾಡುವುದು ಅವನಿಂದಲೇ ಸೃಷ್ಟವಾದ ಈ ಜಗತ್ ಸ್ವರೂಪಕ್ಕೆ ಸರಿಹೊಂದುವುದಿಲ್ಲ. ಪ್ರಳಯ ಕಾಲದಲ್ಲಿ ಸೂಕ್ಷ್ಮಾವಸ್ಥೆ ಯಲ್ಲಿರುವ ಚೇತನರಿಗೆ ಕರಣಕಳೇವರವನ್ನು ಅನುಗ್ರಹಿಸಿ, ಪ್ರವೃತ್ತಿ– ನಿವೃತ್ತಿ ಜ್ಞಾನಗಳನ್ನೂ ಕೊಟ್ಟು, ತಿಳುವಳಿಕೆ, ಕ್ರಿಯಾಸಾಮರ್ಥ್ಯಗಳನ್ನೂ ಉಂಟು ಮಾಡಿದ ನಂತರ, ಸರ್ವಸ್ವತಂತ್ರನಾದ ಈಶ್ವರನೂ ಕೂಡ ಚೇತನ ರನ್ನು ಕಿಂಚಿತ್ ಸ್ವತಂತ್ರಗತಿಯಲ್ಲಿ ನಿಲ್ಲಿಸಿ, ಅವರವರ ಕರ್ಮಾನುಸಾರ ಅವರು ನಡೆಯುವಂತೆ ಮಾಡಿರುತ್ತಾನೆ. ಇದರಲ್ಲಿ ಪರಮಾತ್ಮನ ಸರ್ವೋ ತ್ತಮತ್ವ ಜ್ಞಾನವು, ಮಾನವನ ಸಕಲ ಆಗುಹೋಗುಗಳ ಹಿನ್ನೆಲೆಯಲ್ಲಿ ಭದ್ರವಾಗಿರಬೇಕಾದದ್ದು. ಇದನ್ನೇ ಮರೆತರೆ ಜೀವನ ದಿಕ್ಕುಗೆಡುವುದು: ಪುರುಷಾರ್ಥಜ್ಞಾನ ಲೋಪವಾಗುವುದು. ಮಹಾಜ್ಞಾತೃಗಳಾದ ಋಷಿ ಗಳಿಗೂ ಈ ಸಂಕಟ ತಪ್ಪಿದ್ದಲ್ಲ. ತಿಳಿಯದವನು ದಾರಿ ತಪ್ಪಿದರೆ ಹೆಚ್ಚು ದುಃಖಪಡಬೇಕಾದ ಅವಶ್ಯಕತೆಯಿಲ್ಲ, ಅಗಸ್ತ್ಯರಂತಹ ಜ್ಞಾನಿಗಳಿಗೇ ಹೀಗಾದರೆ, ಉಳಿದವರ ಪಾಡೇನು ಎಂಬುದು ಭಗವಂತನ ದುಃಖಕ್ಕೆ ಪ್ರಧಾನ ಕಾರಣ.

"ಬಹೂನಾಂ ಜನ್ಮನಾಮಂತೇ ಜ್ಞಾನವಾನ್ ಮಾಂ ಪ್ರಪದ್ಯತೇ ।
**ವಾಸುದೇವಃ ಸರ್ವಮಿತಿ ಸ ಮಹಾತ್ಮಾ ಸುದುರ್ಲಭಃ(VII-19)**

ಎಂಬ ಗೀತೋಕ್ತಿಯಲ್ಲಿಯೂ ಇದೇ ದುಃಖವು ಅಭಿವ್ಯಕ್ತವಾಗಿದೆ.

ಪ್ರಕೃತದಲ್ಲಿ ಅಗಸ್ತ್ಯರು ಮುಂದಿನ ಮಂತ್ರದಲ್ಲಿ ಇಂದ್ರನಿಗೆ ಹೀಗೆ ಬಿನ್ನವಿಸುತ್ತಾರೆ : – "ಹೇ ಇಂದ್ರ, ಮರುತರೂ ನಿನ್ನ ಭ್ರಾತೃಗಳಲ್ಲವೆ ? (ಅವರಿಗೆ ಅರ್ಪಿಸಿದ ಹವಿಸ್ಸು ನಿನ್ನದೇ ಆಗುವುದಿಲ್ಲವೆ ? ನಾವಾಗಿ ಅವರಿಗೆ ಹವಿಸ್ಸು ಕೊಡದಿದ್ದರೂ ಇಂತಹ ಭೋಗಗಳನ್ನು ನೀನಾಗಿಯೇ ಅವರಿಗೆ ಕೊಟ್ಟು ಅವರನ್ನು ಕಾಪಾಡುವುದು ನಿನ್ನ ಕರ್ತವ್ಯ.) ಅಂದ ಮೇಲೆ ನಾವು ನಿರಪರಾಧಿಗಳು. ನೀನು ಮರುತ್ತುಗಳೊಡನೆ ನ್ಯಾಯವಾದ ರೀತಿಯಲ್ಲಿ ಹವಿ ರ್ಭಾಗವನ್ನು ಹಂಚಿಕೋ. ನಮ್ಮ ಕೂಡ, ಯುದ್ಧದಲ್ಲಿ ದ್ವೇಷದಿಂದ ವಿರೋಧಿಗಳನ್ನು ಹಿಂಸಿಸುವಂತೆ, ಹಿಂಸಿಸಬೇಡ."

ಈಗ ಇದಕ್ಕೆ ಇಂದ್ರನ ಉತ್ತರ : "ಅಯ್ಯಾ, ಸೋದರನಾದ ಅಗಸ್ತ್ಯನೇ ! ನೀನು ನನಗೆ ಬಹುಕಾಲದಿಂದ ಸ್ನೇಹಿತನಾಗಿರುವೆ. ನಮ್ಮನ್ನು ಏತಕ್ಕಾಗಿ ಉದಾಸೀನ ಮಾಡುತ್ತೀಯೇ? ನಿನ್ನ ಮನಸ್ಸು ಹೇಗಿದೆಯೆಂಬುದು ನನಗೆ ಗೊತ್ತಿದೆಯಷ್ಟೇ ? ನಮಗೆ ಹವಿಸ್ಸುಗಳನ್ನು ಕೊಡಲು ಅಪೇಕ್ಷೆ ಇಲ್ಲ ಎಂಬುದೇ ನಿಜ."

ಈ ವಾಕ್ಯದಿಂದ ಅಗಸ್ತ್ಯರ ಈ ಹಿಂದಿನ "ಇಂದ್ರ" ಭಕ್ತಿಯು ವ್ಯಕ್ತ ವಾಗುತ್ತದೆ. ಮತ್ತು ಅಗಸ್ತ್ಯರು ಪ್ರಕೃತದಲ್ಲಿ ಇಂದ್ರನನ್ನು ಉಪೇಕ್ಷಿ ಸಿರುವ ವಿಷಯ ಇಂದ್ರನಿಗೆ ತಿಳಿದಿದೆಯಾಗಿ ಅದನ್ನು ಮರೆಮಾಚುವುದು ಅವರಿಗೆ ಶಕ್ಯವಿಲ್ಲ. ಹೀಗೆ ಅಗಸ್ತ್ಯರ ಆಕ್ಷೇಪಕ್ಕೆ ಇಂದ್ರನ ಉತ್ತರ ಮರ್ಮ ಭೇದಕವಾಗಿದ್ದು, ಮುಂದೆ ಅಗಸ್ತ್ಯರು ತಮ್ಮ ತಪ್ಪನ್ನು ತಿದ್ದಿಕೊಂಡು ಇಂದ್ರನಿಗೆ ಪುನಃ ಹವಿಸ್ಸನ್ನು ಅರ್ಪಿಸಿದರೆಂದು ಶ್ರುತಿಯು ತಿಳಿಸುತ್ತದೆ :

ಇಂದ್ರ : "ಎಲೈ ಋತ್ವಿಜರೆ ! ನನ್ನ ಮಾತನ್ನು ಅಗಸ್ತ್ಯರು ಅಂಗೀ ಕರಿಸಿದ್ದಾರೆ. ಆದ್ದರಿಂದ ನೀವು ಯಜ್ಞವೇದಿಯನ್ನು ಸಿದ್ಧಪಡಿಸಿ ಅಲಂಕರಿಸಿರಿ. ಅಗ್ನಿಯನ್ನು ಸಮಿತ್ತುಗಳಿಂದ ಪ್ರಜ್ವಲಗೊಳಿಸಿರಿ. ಆಗ ಪ್ರಜ್ವಲಿತವಾದ ಅಗ್ನಿಯಲ್ಲಿ ಅಮೃತವನ್ನು ಲಕ್ಷಣವಾಗಿವುಳ್ಳ (ಜ್ಞಾನವನ್ನು ಚೇತನಗೊಳಿಸುವ) ನಿನ್ನ ಯಜ್ಞವನ್ನು ಸಾರ್ಥಕವಾಗಿ ಸಮಾಪ್ತವಾಗುವಂತೆ ಆಚರಿಸೋಣ !!"

ಅಥವಾ ಈ ಮಾತುಗಳನ್ನು ಅಗಸ್ತ್ಯರೇ ಆಡಿದರೆಂಬ ಪಕ್ಷದಲ್ಲಿ ಈ ಅರ್ಥವಿದೆ :—

ಅಗಸ್ತ್ಯ :— "ಹೇ ಋತ್ವಿಕ್ಕುಗಳೇ, ನಮ್ಮ ಯಜ್ಞವೇದಿಯನ್ನು ಸಜ್ಜುಗೊಳಿಸಿರಿ, ಪ್ರಜ್ವಲಿತವಾದ, ಅಗ್ನಿಯಲ್ಲಿ ಅಮೃತತ್ವಕ್ಕೆ ಸಾಧನವಾದ ಹವಿಸ್ಸನ್ನು ಅರ್ಪಿಸಿರಿ. ಹೇ ಇಂದ್ರ, ನಾವು (ಅಂದರೆ ಈ ಯಜ್ಞದ ಯಜಮಾನನಾದ ನಾನೂ ಮತ್ತು ನನ್ನ ಪತ್ನಿಯೂ) ನಿನಗಾಗಿ ಯಜ್ಞವನ್ನು ಆಚರಿಸುತ್ತೇವೆ."

ಹೀಗೆ ತಮ್ಮ ತಪ್ಪನ್ನು ಒಪ್ಪಿಕೊಂಡು, ಪುನಃ ಇಂದ್ರನಿಗೆ ಹವಿಸ್ಸನ್ನು ಅರ್ಪಿಸಿ ಯಜ್ಞದಲ್ಲಿ ತೊಡಗಿದ ಅಗಸ್ತ್ಯರು, ಮುಂದಿನ ಮಂತ್ರಗಳಲ್ಲಿ ಇಂದ್ರನನ್ನು ಸರ್ವಸ್ವಾಮಿಯೆಂದು ಒಪ್ಪಿಕೊಂಡು ಕೊಂಡಾಡುತ್ತಾರೆ :

**ತ್ವಮೀಶಿಷೇ ವಸುಪತೇ ವಸೂನಾಂ ತ್ವಂ ಮಿತ್ರಾಣಾಂ**
**ಮಿತ್ರಪತೇ ಧೇಷ್ಠಃ**
**ಇಂದ್ರ ತ್ವಂ ಮರುದ್ಭಿಃ ಸಂವದಸ್ವಾಥ ಪ್ರಾಶಾನ ಋತು-**
**ಥಾ ಹವೀಂಷಿ**

"ಹೇ ಇಂದ್ರನೇ, ನೀನು ಯಜ್ಞಕ್ಕೆ ಸಂಬಂಧಪಟ್ಟ ಎಲ್ಲ ಧನಕ್ಕೂ ಒಡೆಯನು: (ಅಥವಾ ಅಷ್ಟ ವಸುಗಳಿಗೂ ಅಧಿಪತಿಯಾಗಿದ್ದೀಯೆ.) ಹಾಗೆಯೇ ಮಿತ್ರರಿಗೆಲ್ಲ ಒಡೆಯನಾಗಿದ್ದೀಯೆ. ಮಿತ್ರರಾದ ನಮಗೆ ಧಾರಕನಾಗಿದ್ದೀಯೆ. ಇಂತಹ ನೀನು ಮರುದ್ದೇವತೆಗಳೊಡನೆ ಒಡಗೂಡಿ ನಮ್ಮ ಯಜ್ಞವು ಸಾರ್ಥಕವಾಯಿತೆಂದು ಅನುಗ್ರಹಿಸು. ಮತ್ತು ವಿವಿಧ ಋತುಗಳಲ್ಲಿ ನಾವು ಮಾಡತಕ್ಕ ಯಾಗಗಳಲ್ಲಿ ನೀನು ನಮ್ಮ ಹವಿಸ್ಸುಗಳನ್ನು ಪ್ರೀತಿಯಿಂದ ಭುಜಿಸುವವನಾಗು."

## ೫. 'ಇಂದ್ರನ' ಮಹಿಮೆ

"ಭಗವಂತನು ಯಜ್ಞದಿಂದ ಸುಪ್ರೀತನಾಗಲಿ" ಎಂಬುದು ಇಲ್ಲಿಯ ಭಾವ. ಇದೂ ಅಲ್ಲದೆ ಇನ್ನೂ ಅನೇಕ ಮಂತ್ರಗಳಲ್ಲಿ ಅಗಸ್ತ್ಯರು ಪೂರ್ಮಿಕವಾಗಿ ಇಂದ್ರ ಸ್ತೋತ್ರವನ್ನು ಮಾಡಿದ್ದಾರೆ. ಇಂದ್ರನು ದೇವತೆಗಳಲ್ಲಿ ಅತ್ಯಂತ ಉತ್ತಮನು ಎಂಬ ವಿಷಯ, ಋಗ್ವೇದದಲ್ಲಿಯೇ (II–16–1)

ಹೇಳಲ್ಪಟ್ಟಿದೆ. **"ಸತಾಂ ಜ್ಯೇಷ್ಠ ತಮಾಯ...."** ಎಂಬ ಶ್ರುತಿಗೆ ಸಾಯಣರು **"ಸತಾಂ ಮಹತಾಂ ದೇವಾನಾಂ ಜ್ಯೇಷ್ಠತಮಾತಿಶಯೇನ ಶ್ರೇಷ್ಠಾಯ ಇಂದ್ರಾಯ...."** ಎಂದು ಭಾಷ್ಯ ಬರೆದಿದ್ದಾರೆ. ಈ ಸೂಕ್ತದ ಋಷಿಗಳು ಗೃತ್ಸಮದರೆಂಬುವವರು. ತೈತ್ತಿರೀಯ ಬ್ರಾಹ್ಮಣದಲ್ಲಿಯೂ (II–8–3, 21–22) ಇಂದ್ರನನ್ನೇ **"ಅಯಗ್ಂ ರಾಜಾ ಜಗತಃ ಚರ್ಷಣೀನಾಂ....ಸ ಏಕ ರಾಜೋ ಜಗತಃ ಪರಸ್ಯಾಃ ಅಥೈಕ ರಾಜೋ ಅಭವತ್ ಜನಾನಾಂ.... ಇಂದ್ರೋ ದೇವಾನಾಂ ಅಭವತ್ ಪುರೋಗಾಃ ...ಯಃ ಸಪ್ತ ಲೋಕಾನ್ ಅಕೃಣೋತ್ ದಿಶಶ್ಚ"** ಎಂಬುದಾಗಿ, ಇಂದ್ರನೇ ಚರಾಚರ ಜಗತ್ತಿಗೆ ರಾಜನೆಂದೂ, ಇವನ ಮೇಲೆ ರಾಜರಿಲ್ಲದೆ ಇವನೇ ರಾಜಾಧಿರಾಜನೆಂದೂ, ದೇವತೆಗಳ ಮುಖಂಡನೆಂದೂ, ಸಪ್ತ ಸಮುದ್ರಗಳನ್ನೂ ಪೃಥ್ವಿಯನ್ನೂ ಧರಿಸಿ ಸಪ್ತ ಲೋಕಗಳನ್ನೂ ಹತ್ತು ದಿಕ್ಕುಗಳನ್ನೂ ಸೃಷ್ಟಿಸಿದನೆಂದೂ, ವರ್ಣಿಸಲಾಗಿದೆ. ಇಲ್ಲಿ ಹೇಳಲ್ಪಟ್ಟ ಇಂದ್ರನು ದೇವತಾ ಮಾತ್ರನಾದ ಇಂದ್ರನಲ್ಲದೇ ಪರಮಾತ್ಮನೇ ಎಂಬ ವಿಷಯದಲ್ಲಿ ಸಂದೇಹವಿಲ್ಲ. ಇಂತಹ ಇಂದ್ರನು ಸ್ವಯಂ ಕ್ಷಯರಹಿತನೂ, ಮತ್ತು ಇತರರ ಆಯುಸ್ಸನ್ನು ಲೆಕ್ಕ ಮಾಡುವವನೂ ಮತ್ತು ನಿತ್ಯ ಯುವಕನೂ ಎಂಬುದಾಗಿ, ವಿಷ್ಣು ವಿಶೇಷಣಗಳನ್ನೇ ಈ ಮೇಲಿನ ಋಕ್ ಸೂಕ್ತದಲ್ಲಿ ಬಳಸಿರುವುದು ಗಮನೀಯ. ಮುಂದಿನ ಮಂತ್ರದಲ್ಲಿ ಮತ್ತಷ್ಟು ಸ್ಪಷ್ಟವಾಗಿ ಗೃತ್ಸಮದರು, ಮತ್ತೆ ಇಂದ್ರನನ್ನು ಹೀಗೆ ಸ್ತುತಿಸುತ್ತಾರೆ :—

"ಬೃಹತ್ ಸ್ವರೂಪಿಯಾಗಿ (ಬ್ರಹ್ಮ ಶಬ್ದ ವಾಚ್ಯನಾಗಿ) ಇರುವ ಯಾವ ಇಂದ್ರನು ಇಲ್ಲದೇ ಇದ್ದರೆ ಈ ಚರಾಚರ ಜಗತ್ತಾಗಲೀ, ಅದರೊಳಗಿನ ಯಾವ ಪದಾರ್ಥವಾಗಲೀ ಅಸ್ತಿತ್ವದಲ್ಲೇ ಇರುತ್ತಿರಲಿಲ್ಲವೋ ಅಂತಹ ಇವನಲ್ಲಿ ವಿಶ್ವದ ಸಕಲ ಶಕ್ತಿ ಸಾಮರ್ಥ್ಯಗಳೂ ಸಮೃದ್ಧವಾಗಿದೆ. ಬ್ರಹ್ಮಾನಂದ ಸ್ವರೂಪವಾದ ಸೋಮವು ಇವನ ಜಠರದಲ್ಲಿ ತುಂಬಿದೆ. ಶರೀರದಲ್ಲಿ ತೇಜಸ್ಸನ್ನೂ, ಬಲವನ್ನೂ, ಕೈಯಲ್ಲಿ ವಜ್ರಾಯುಧವನ್ನೂ ಶಿರಸ್ಸಿನಲ್ಲಿ ವಿಜ್ಞಾನವನ್ನೂ ಧರಿಸಿರುವ ಈ ಇಂದ್ರನು (ಅಸಾಮಾನ್ಯನು)"

ಇಲ್ಲಿ ಭಗವಂತನ ವಿರಾಟ್‌ಸ್ವರೂಪದ ಚಿತ್ರವೇ ಇದೆ. ಮತ್ತೊಂದು ಕಡೆಯಲ್ಲಿಯೂ (ಋ. ಸಂ. IX–69–6) **"ನ ಇಂದ್ರಾದೃತೇ ಪವತೇ**

ಧಾಮ ಕಿಂಚ ನ" ಎಂಬ ಶ್ರುತಿಯಲ್ಲಿಯೂ ಇಂದ್ರನಿಲ್ಲದೇ ಯಾವ ಲೋಕಕ್ಕೂ ಸ್ಥಿತಿಗತಿಗಳಿಲ್ಲ ಎಂಬ ಸಿದ್ಧಾಂತವನ್ನು ಭಾಷ್ಯಕಾರರು ಇಲ್ಲಿ ಎತ್ತಿ ತೋರಿಸಿದ್ದಾರೆ. ಭಗವಂತನು ಸಗುಣನೂ, ಜ್ಞಾನ, ಶಕ್ತಿ, ಬಲ, ವೀರ್ಯ, ಐಶ್ವರ್ಯ ತೇಜಸ್ಸುಗಳೆಂಬ ಷಡ್ಗುಣೈಶ್ವರ್ಯ ಪರಿಪೂರ್ಣನೂ, ಎಂಬ ವಿಷಯ, ವೇದದ ಹೃದಯವಾಗಿರುವುದಕ್ಕೆ ಇಂತಹ ಲೆಕ್ಕವಿಲ್ಲದ ಸಂಖ್ಯೆಯ ಋಕ್ಕುಗಳೇ ಸಾಕ್ಷಿಗಳು. (ಸಗುಣ ತತ್ವವು ಇದ್ದಕ್ಕಿದ್ದಂತೆ, ಪುರಾಣಗಳಲ್ಲಿ ಕಲ್ಪಿತವಾಯಿತೆಂದೂ, ವೇದಗಳಲ್ಲಿ ಇದಕ್ಕೆ ಆಧಾರವಿಲ್ಲವೆಂದೂ ಅಪಪ್ರಚಾರ ನಡೆಸುವ ಮೂಢರು ಇಂತಹ ವಾಕ್ಯಗಳನ್ನು ಚೆನ್ನಾಗಿ ಗಮನಿಸಬೇಕು.) ಮುಂದಿನ ಮಂತ್ರಗಳಲ್ಲಿಯೂ ಭಗವಂತನ ಶಕ್ತಿಸಾಮರ್ಥ್ಯಗಳನ್ನೇ (ಮೇಲಿನ ಋಕ್ ಸೂಕ್ತದಲ್ಲಿ) ಕೊಂಡಾಡಲಾಗಿದೆ.

ಕುತ್ಸ ಆಂಗಿರಸ ಋಷಿದೃಷ್ಟವಾದ ಮತ್ತೊಂದು ಋಕ್‌ಸೂಕ್ತದಲ್ಲಿಯೂ ಇಂದ್ರನನ್ನು **"ತ್ವಾಂ ದೇವೇಷು ಪ್ರಥಮಂ ಹವಾಮಹೇ".** "ನಿನ್ನನ್ನು ದೇವತೆಗಳಲ್ಲೆಲ್ಲಾ ಶ್ರೇಷ್ಠನೆಂದೂ ಕುರಿತು ಯಜ್ಞಕ್ಕೆ ಕರೆಯುತ್ತೇವೆ." (ಋ. I-102-9) ಎಂಬುದಾಗಿ ಸ್ತೋತ್ರ ಮಾಡಲಾಗಿದೆ. ಇಂದ್ರನ ಕೀರ್ತಿಯನ್ನು ಸಪ್ತನದಿಗಳೂ ಲೋಕಕ್ಕೆ ಪ್ರಕಟಮಾಡುತ್ತಿವೆಯೆಂದೂ (**ಅಸ್ಯ ಶ್ರವೋ ನದ್ಯಃ ಸಪ್ತ ಬಿಭ್ರತಿ**), ದ್ಯಾವಾ ಪೃಥ್ವಿಗಳೂ ಅಂತರಿಕ್ಷವೂ, ಸಕಲರಿಗೂ, ತಿಳಿಯುವಂತೆ ಇವನ ದಿವ್ಯತೇಜೋಶರೀರವನ್ನು ಪ್ರಕಾಶಗೊಳಿಸುವುವೆಂದೂ (**ದ್ಯಾವಾ, ಕ್ಷಾಮಾ, ಪೃಥಿವೀ ದರ್ಶತಂ ವಪುಃ**), ಮಾನವರಿಗೆ ಭೂಮಿಯ ಸಕಲ ಪದಾರ್ಥಗಳೂ ಗೋಚರವಾಗುವುದಕ್ಕಾಗಿಯೂ ಸತ್ಯಾತ್ಮಕವಾದ ಈ ಜಗತ್ತಿನಲ್ಲಿಯೂ ಮತ್ತು ಜೀವನದಲ್ಲಿಯೂ ಶ್ರದ್ಧೆಯೂ ಉಂಟಾಗುವದಕ್ಕಾಗಿಯೂ, ಸೂರ್ಯ ಚಂದ್ರರನ್ನೂ ಅವರವರ ಶಾಶ್ವತಗತಿಯಲ್ಲಿ ನಿಲ್ಲಿಸಿರುವವನೇ ಇಂದ್ರನೆಂದೂ, (**ಅಸ್ಮೇ ಸೂರ್ಯಾ ಚಂದ್ರಮಸೌ ಅಭಿಚಕ್ಷು ಶ್ರದ್ಧೇಕ ಮಿಂದ್ರ ಚರತೋ ವಿತರ್ತುರಂ**)ಸ್ತುತಿಸಲಾಗಿದೆ. ಇಂದ್ರನು 'ಗೋ'ವುಗಳನ್ನು ಬಿಡಿಸಿ ಗೆದ್ದು ಸಂರಕ್ಷಿಸುವುದಕ್ಕಾಗಿಯೇ ಬಾಹುಗಳನ್ನು ಹೊಂದಿದ್ದಾನೆಂದೂ(**ಗೋಜಿತಾ ಬಾಹೂ**) ಅಪರಿಮಿತ ಜ್ಞಾನವುಳ್ಳವನೆಂದೂ (**ಅಮಿತಕ್ರತುಃ**), ಸರ್ವಶ್ರೇಷ್ಠನೆಂದೂ (**ಸಿಮಃ**) ಪ್ರತಿಯೊಂದು ಯಜ್ಞ ಕರ್ಮದಲ್ಲೂ ಬಹುವಿಧ ರಕ್ಷಣೆಗಳಿಂದ

ಕೂಡಿದವನೆಂದೂ (ಕರ್ಮಣ್ ಕರ್ಮಣ್ ಶತಮೂತಿಃ) ಸ್ವತಂತ್ರನಾಗಿದ್ದು ಇತರರ ಆಳಿಕೆಗೆ ಒಳಪಡದವನೆಂದೂ (ಅಕಲ್ಪಃ) ಇದರ ಮುಂದಿನ ಮಂತ್ರದಲ್ಲಿ ಕೊಂಡಾಡಲ್ಪಟ್ಟಿದ್ದಾನೆ. ಇವನು ಶತ್ರು ಭಯಂಕರನೆಂಬ ವಿಚಾರವಂತೂ ಸೂಚಿಸಲ್ಪಡದ ಸೂಕ್ತವೇ ಇಲ್ಲವೆಂದರೆ ಅತಿಶಯೋಕ್ತಿಯಲ್ಲ. ಇಂದ್ರನ ಬಲಕ್ಕೆ ಶ್ರುತಿಯು ಕೊಡುವ ಉಪಮಾನವು ಅದ್ಭುತವಾಗಿದೆ. **"ಮೂರು ಎಳೆಗಳಿಂದ ಹೊಸೆದು ಮಾಡಿದ ಹಗ್ಗವು ಬಲವಾಗಿರುವಂತೆ"** ಮೂರು ಲೋಕಗಳನ್ನೂ ಮೂರು ವಿಧವಾಗಿ ತೇಜಸ್ಸುಗಳನ್ನೂ (ಅಗ್ನಿ, ವಿದ್ಯುತ್, ಆದಿತ್ಯ) ಒಳಹೊಕ್ಕು ಧರಿಸಿ ಇಂದ್ರನು ಬಲಿಷ್ಠನಾಗಿದ್ದಾನೆ. ಮತ್ತು ಹುಟ್ಟಿನಿಂದಲೇ ಶತ್ರುರಹಿತನಾಗಿದ್ದಾನೆ ಎಂಬ ಸ್ತುತಿ ಮುಂದಿನ ಮಂತ್ರದಲ್ಲಿ (**ತ್ರಿವಿಷ್ಟಿ ಧಾತು ಪ್ರತಿಮಾನಂ ಓಜಸಃ ತಿಸ್ರೋ ಭೂಮೀಃ ನೃಪತೇ ತ್ರೀಣಿ ರೋಚನಾ** ಇತ್ಯಾದಿ, ಉಕ್ತವಾಗಿದೆ. ಇಲ್ಲಿ ಇಂದ್ರನನ್ನೇ ಸಕಲಾಂತರ್ಯಾಮಿ, ಸಕಲ ಲೋಕಧಾರಕ ಎಂದು ಕೊಂಡಾಡಿರುವುದು ಗಮನೀಯ. ಹೀಗೆ, "ಸರ್ವ ಕಾಲದಲ್ಲಿಯೂ ನಮಗೆ ಇಂದ್ರನು ಅನುಗ್ರಹ ವಾಕ್ಯಗಳನ್ನೇ ದಯಪಾಲಿಸುವವನಾಗಲಿ. ನಾವೂ ಕೂಡ ಋಜುಮಾರ್ಗದಲ್ಲಿ ಇದ್ದುಕೊಂಡೇ ಅವನ ಅನುಗ್ರಹದಿಂದ ಸುಖವಾಗಿರೋಣ," ಎಂಬ ಪ್ರಾರ್ಥನೆಯು ಈ ಸೂಕ್ತದ ಕೊನೆಯಲ್ಲಿ ಬಂದಿದೆ, ಇಲ್ಲೆಲ್ಲಾ ಕೊಂಡಾಡಲ್ಪಟ್ಟಿರುವ "ಇಂದ್ರನು" ಕೇವಲ ಒಬ್ಬ ದೇವತೆಯಲ್ಲದೆ ತದಂತರ್ಯಾಮಿಯಾದ ಭಗವಂತನೇ ಎಂಬುದು ಸ್ಪಷ್ಟ.

## ೬. ಇಂದ್ರನ ಪ್ರಧಾನ ವ್ಯಾಪಾರ

ಇಂತಹ ಇಂದ್ರನ ವಿಚಿತ್ರ ವ್ಯಾಪಾರಗಳಲ್ಲಿ ಬಹು ಮುಖ್ಯವಾದುದು, ಸೃಷ್ಟಿ ಪ್ರವಾಹಕ್ಕೆ ವಿರುದ್ಧವಾಗಿ ನಿಂತ ಶಕ್ತಿಗಳ ನಿಗ್ರಹ ಮತ್ತು ನಾಶ. ಇಂದ್ರ ವೈರಿಗಳಲ್ಲಿ ಕೆಲವರನ್ನು ಹಿಂದೆ ಸೂಚಿಸಲಾಗಿದೆ. ಇವರಲ್ಲಿ ವೃತ್ರನೇ ಪ್ರಧಾನ. **ವೇದ ದರ್ಶನದಲ್ಲಿ ವೃತ್ರವಧೆಗಿರುವಷ್ಟು ಪ್ರಾಶಸ್ತ್ಯ ಬೇರಾವ ಸಾಂಕೇತಿಕ ಕಥೆಗೂ ಇಲ್ಲ.** ವೃತ್ರವಧೆಯು ಪ್ರತಿಕ್ಷಣವೂ ನಡೆಯುತ್ತಿರುವ ವ್ಯಾಪಾರ. ಈ ಕಥೆಯ ಸಾಂಕೇತಿಕ ಅಂಶಗಳನ್ನು ವಿಸ್ತಾರವಾಗಿ ತಿಳಿಯುವುದು ಈಗ ಅತ್ಯವಶ್ಯಕ.

ಜೀವನವು ವೇದದರ್ಶನದಲ್ಲಿ ಸರ್ವದಾ ಒಂದು ಭಯಂಕರವಾದ ಸಂಗ್ರಾಮವಾಗಿ ಚಿತ್ರಿಸಲ್ಪಟ್ಟಿದೆ. ಈ ಸಂಗ್ರಾಮದಲ್ಲಿ ದೇವಾಸುರ ಶಕ್ತಿಗಳು ಸರ್ವದಾ ತೊಡಗಿವೆ; ಸೃಷ್ಟಿಯ ಪ್ರವಾಹದ ಮುನ್ನಡೆ, ಅಥವಾ ಹಿನ್ನಡೆ, ಈ ಯುದ್ಧದ ಕ್ಷಣಕ್ಷಣದ ಪರಿಣಾಮವನ್ನೇ ಅವಲಂಬಿಸಿದೆ. ಆಸುರೀ ಶಕ್ತಿಗಳಲ್ಲಿಯೂ ಬಹಳ ವೈವಿಧ್ಯವುಂಟು. ಇವರಲ್ಲಿ ಪ್ರಧಾನನಾದವನು ವೃತ್ರ. ವೃತ್ರ ಶಬ್ದದ ಅರ್ಥವನ್ನು ವಿವರಿಸುತ್ತಾ ಯಾಸ್ಕರು ಹೀಗೆ ಬರೆದಿದ್ದಾರೆ : **"ತತ್ಕೋವೃತ್ರಃ? ಮೇಘ ಇತಿ, ನೈರುಕ್ತಾಃ। ತ್ವಾಷ್ಟ್ರೋ ಅಸುರಃ ಇತಿ ಐತಿಹಾಸಿಕಾಃ। ಅಪಾಂಚ ಜ್ಯೋತಿಷಶ್ಚ ಮಿಶ್ರೀಭಾವ ಕರ್ಮಣೋ ವರ್ಷಕರ್ಮ ಜಾಯತೇ! ತತ್ರ ಉಪಮಾರ್ಥೇನ, ಯುದ್ಧವರ್ಣಾ ಭವತಿ"** (II–16) ಅಂದರೆ "ನೈರುಕ್ತರ ಪಕ್ಷದಲ್ಲಿ ನೀರಿನ ಮೋಡಕ್ಕೆ ವೃತ್ರನೆಂದು ವ್ಯವಹಾರ. ಐತಿಹಾಸಿಕರ ಪಕ್ಷದಲ್ಲಿ ತ್ವಷ್ಟೃ ಪ್ರಜಾಪತಿಯ ಮಗನಾದ ಅಸುರನೇ ವೃತ್ರ. ಆಕಾಶದಲ್ಲಿ ಮಳೆ ಉಂಟಾಗುವಾಗ ನೀರು ಮತ್ತು ವಿದ್ಯುತ್ತು ಇವುಗಳ ಮಿಶ್ರ ಕರ್ಮದಿಂದಲೇ ಮಳೆಯೆಂಬ ವ್ಯಾಪಾರವು ಆಗುವುದು. ಇದನ್ನು ಯುದ್ಧದ ಹೋಲಿಕೆಯಲ್ಲಿ ವರ್ಣಿಸಲಾಗಿದೆ" ಎಂದು ಭಾವ.

ಆದರೆ, ನೈರುಕ್ತ ಪಕ್ಷವು ಈ ಸಾಂಕೇತಿಕ ಅರ್ಥವನ್ನು ಎಲ್ಲ ಮಂತ್ರಗಳಲ್ಲಿಯೂ ವಿವರಿಸುವಲ್ಲಿ ಸಹಾಯಕವಾಗುವುದಿಲ್ಲ. ತೈತ್ತಿರೀಯ ಸಂಹಿತೆಯಲ್ಲಿಯೂ ಶತಪಥ ಬ್ರಾಹ್ಮಣದಲ್ಲಿಯೂ, ಇಂದ್ರ ವೃತ್ರರ ಘೋರ ಸಂಗ್ರಾಮದ ಕಾರಣ, ಪರಿಣಾಮ, ಮತ್ತು, ವಿವರವಾದ ವರ್ಣನೆಗಳು ಬಂದಿವೆ. **ಇದರಲ್ಲಿ ಒಂದು ದೊಡ್ಡ ತತ್ವವಿದೆ.** ಹೀಗೆ ವೇದಾರ್ಥಗಳನ್ನು ನಿರ್ಣಯಿಸುವಲ್ಲಿ ಇತಿಹಾಸ ಜ್ಞಾನವೇ ಪ್ರಧಾನವೆಂದೂ, ಯಾಸ್ಕರೂ ಸಹ **"ಮುಖ್ಯಂ ಕಾರಣತ್ವಂ ಇತಿಹಾಸ ಜ್ಞಾನಸ್ಯ ಏವ"** ಎಂದು ಒಪ್ಪಿದ್ದಾರೆ.

ಹಾಗೇ ನೋಡಿದರೆ, ಇಂದ್ರನಿಗೆ ವಸ್ತುತಃ ಶತ್ರುವೇ ಇಲ್ಲವೆಂದೂ. (ಎಂದರೆ ಇಂದ್ರನು ಯಾರನ್ನೂ ಶತ್ರು ಭಾವದಿಂದ ನೋಡುವುದಿಲ್ಲವೆಂದೂ) ಆದರೆ ಇಂದ್ರನನ್ನು ಶತ್ರುಭಾವದಿಂದ ನೋಡತಕ್ಕವರು ಇರಬಹುದೆಂದೂ ಶ್ರುತಿಯೇ ಅನೇಕ ಕಡೆಗಳಲ್ಲಿ ಹೇಳಿದೆ :"

"ನ ತ್ವಂ ಯುಯುತ್ಸೇ ಕತಮಚ್ಚ ನಾಹರ್ನತೇ ಽಮಿತ್ರೋ ಮಘವನ್ ಕಶ್ಚನಾಸ್ತಿ ।
ಮಾಯೇತ್ಸಾ ತೇ ಯಾನಿ ಯುದ್ಧಾನ್ಯಾಹುಃ ನಾದ್ಯ ಶತ್ರುಂ ನ ನು ಪುರಾಯುಯುತ್ಸಃ ॥

ಶತಪಥ ಬ್ರಾಹ್ಮಣ (XII-I-6-10)

ಈ ಮಂತ್ರದ ಎರಡನೇ ಪಾದವು ಋಕ್ ಸಂಹಿತೆ (XI-54-2) ರಲ್ಲೂ ಬಂದಿದೆ.

"ಹೇ ಇಂದ್ರ, ನೀನು ಯಾರೊಡನೆಯೂ ಯುದ್ಧ ಮಾಡುವುದಿಲ್ಲ. ನಿನಗೆ ಯಾವ ಶತ್ರುವಾದರೂ ಎಷ್ಟು ಮಾತ್ರದವನು! ನಿನಗೆ ಅಮಿತ್ರನೆಂಬುವನೇ ಒಬ್ಬನೂ ಇಲ್ಲ. ಈಗಾಗಲೀ, ಹಿಂದೆಯಾಗಲೀ, ನಿನ್ನೊಡನೆ ಯುದ್ಧ ಮಾಡಬಲ್ಲವನು ಯಾರು? ತಿಳಿದವರು ಈ ಯುದ್ಧವನ್ನು ಮಾಯಾಮಾತ್ರವೆಂದೂ, (ನಿನ್ನ ವಿಚಿತ್ರವಾದ ವ್ಯಾಪಾರಗಳಲ್ಲಿ ಒಂದೆಂದು) ಹೇಳುವರು !!

ಹೀಗೆ ವೃತ್ರನೆಂದರೆ, ನಮ್ಮ ದೇಶದಲ್ಲಿ 'ಆರ್ಯ' ಪೂರ್ವದಲ್ಲಿ ವಾಸಿಸುತ್ತಿದ್ದ ಜನಾಂಗವೊಂದರ ಮುಖಂಡನೆಂದೂ, ಇಂದ್ರನು ಆರ್ಯರ ಯುದ್ಧ ದೇವತೆಯೆಂದೂ ಅಥವಾ ಚಾರಿತ್ರಿಕ ವ್ಯಕ್ತಿಯೆಂದೂ, ಭ್ರಮಿಸಿ, ಇಂದ್ರವೃತ್ರ ಯುದ್ಧದಲ್ಲಿ ಕೇವಲ ಚಾರಿತ್ರಿಕಾಂಶವನ್ನೇ ಹುಡುಕಿ ತೆಗೆಯಲು ಪ್ರಯತ್ನ ಪಡುವವರೂ, ಮತ್ತು ಅಪಪ್ರಚಾರಕರೂ, ಇಂತಹ ಅನೇಕ ಮಂತ್ರಗಳನ್ನು ಗಮನಿಸಬೇಕು. ಇಂದ್ರನು ತನ್ನ ಆಶ್ಚರ್ಯಕರವಾದ ಶಕ್ತಿ ವೈವಿಧ್ಯದಿಂದ, ನಾನಾರೂಪಗಳನ್ನು ಧರಿಸಿ, ಲೋಕ ಕಲ್ಯಾಣವನ್ನೇ ಮಾಡುವನು, ಎಂಬುದನ್ನು ವೇದವು ಅನೇಕ ಕಡೆಗಳಲ್ಲಿ ಕೊಂಡಾಡಿದೆ. ("ಇಂದ್ರೋ ಮಾಯಾಭಿಃ ಪುರುರೂಪ ಈಯತೇ...." ಇತ್ಯಾದಿ). ಆದ್ದರಿಂದ ಇಂದ್ರ ವೃತ್ರರ ಯುದ್ಧವು ಸಾಂಕೇತಿಕವಾಗಿದ್ದು ಅದರಲ್ಲಿ ಗಮನಿಸಲೇ ಬೇಕಾದ ಅರ್ಥಗಳೇ ಬೇರೆ ಇವೆ.

## ೭. ತೈತ್ತಿರೀಯ ಸಂಹಿತೆಯಲ್ಲಿ 'ವೃತ್ರಾ'ಸುರ ವೃತ್ತಾಂತ

ತೈತ್ತಿರೀಯ ಸಂಹಿತೆಯಲ್ಲಿ (II-4-1) ಈ ಇತಿಹಾಸವು ಹೀಗೆ ಬಂದಿದೆ. ತ್ವಷ್ಟೃಪ್ರಜಾಪತಿಗೆ ವಿಶ್ವರೂಪನೆಂಬ ಮಗನಿದ್ದನು. ಒಮ್ಮೆ

ದೇವ ಪುರೋಹಿತನಾದ ಬೃಹಸ್ಪತಿಯು ಕೋಪದಿಂದ ಪೌರೋಹಿತ್ಯವನ್ನು ಬಿಟ್ಟು ಹೋಗಲಾಗಿ, ದೇವತೆಗಳು ಈ ವಿಶ್ವರೂಪನನ್ನು ತಮ್ಮ ಪುರೋಹಿತನನ್ನಾಗಿ ಮಾಡಿಕೊಂಡರು. ಇವನು ಅಸುರರಲ್ಲಿಯೂ ಪಕ್ಷಪಾತವುಳ್ಳವನಾಗಿ, ಆಗಾಗ ದೇವತೆಗಳಿಗೆ ಕಾಣದಂತೆ ಅಸುರರಿಗೂ, ಯಜ್ಞದಲ್ಲಿ ಹವಿರ್ಭಾಗವನ್ನು ಕೊಡಿಸುತ್ತಿದ್ದನು. ಇದನ್ನು ತಿಳಿದು ಇಂದ್ರನು ವಿಶ್ವರೂಪನನ್ನು ಕೊಂದನು. ಇದರಿಂದ ಕೋಪಗೊಂಡ ತ್ವಷ್ಟೃವು ಇಂದ್ರನನ್ನು ಕೊಲ್ಲುವುದಕ್ಕಾಗಿ, ಒಬ್ಬ ಮಗನನ್ನು ಪಡೆಯಲು ಒಂದು ಯಜ್ಞವನ್ನು ಮಾಡಿದನು.

ಆದರೆ, ಇಂದ್ರನಿಲ್ಲದೆ ಯಜ್ಞ ನಡೆಯುವುದು ಹೇಗೆ ? ತ್ವಷ್ಟೃವು ಇಂದ್ರನನ್ನು ಬಿಟ್ಟೇ ಯಜ್ಞ ಮಾಡಿದನು. ಅವನನ್ನು ಸೋಮಪಾನಕ್ಕಾಗಿ ಕರೆಯಲಿಲ್ಲ. ಇಂದ್ರನು ತನ್ನನ್ನು ಕರೆಯಬೇಕೆಂದು ತ್ವಷ್ಟೃವಿಗೆ ಹೇಳಲು: “ನನ್ನ ಮಗನನ್ನು ಕೊಂದೆಯಾದುದರಿಂದ ನಿನ್ನನ್ನು ಕರೆಯಲಾರೆ” ಎಂದು ಹೇಳಿ ಅವನನ್ನು ಬಿಟ್ಟೇ ಯಜ್ಞವನ್ನು ಮುಗಿಸಿದನು. ಆಗ ಇಂದ್ರನು ಬಲಾತ್ಕಾರವಾಗಿ, ತ್ವಷ್ಟೃವಿನ ಅನುಮತಿ ಇಲ್ಲದೆಯೇ ಯಜ್ಞಾಂತ್ಯದಲ್ಲಿ ಸೋಮಪಾನ ಮಾಡಿಬಿಟ್ಟನು. ಇದರಿಂದ ಕೋಪಗೊಂಡ ತ್ವಷ್ಟೃವು ಇನ್ನೂ ಉಳಿದಿದ್ದ ಸೋಮಶೇಷವನ್ನು ಅಹವನೀಯಾಗ್ನಿಯ ಬಳಿ ಕೊಂಡೊಯ್ದು ಅಗ್ನಿಯನ್ನು ಪ್ರಜ್ವಲಿಸಿ, ಅದರಲ್ಲಿ ಅದನ್ನು ಹೋಮ ಮಾಡುತ್ತ ““ಸ್ವಾಹೇಂದ್ರ ಶತ್ರುರ್ವರ್ಧಸ್ವ” ಎಂದು ಮಂತ್ರೋಚ್ಚಾರ ಮಾಡಿದನು.

ಆದರೆ ಈ ಮಂತ್ರೋಚ್ಚಾರಣ ಕಾಲದಲ್ಲಿ ಸ್ವರವ್ಯತ್ಯಾಸವಾದುದರಿಂದ ಅರ್ಥವ್ಯತಾಸವೂ ಉಂಟಾಗಿ, “ಇಂದ್ರನನ್ನು ಕೊಲ್ಲುವ ಮಗ” ಎನ್ನುವ ಬದಲು “ಇಂದ್ರನಿಂದ ಕೊಲ್ಲಲ್ಪಡುವ ಮಗ” ನನ್ನು ಪ್ರಾರ್ಥಿಸಿದಂತೆ ಪರಿಣಾಮವಾಯಿತು. ಆ ಕ್ಷಣವೇ ವೃತ್ರನೆಂಬ ಮಗನು ಉತ್ಪನ್ನನಾದನು. ಇಷ್ಟರಲ್ಲಿ ಯಜ್ಞ ವೇದಿಯಲ್ಲಿ ಇದ್ದ ಅಗ್ನಿಯು, ತಾನು ಅಲ್ಲೇ ಇದ್ದು ಯಜ್ಞ ಪೂರ್ತಿಮಾಡಿದರೆ ವೃತ್ರನಿಂದ ದೇವತೆಗಳ ಶಾಶ್ವತ ಪರಾಭವ ಆಗುವುದೆಂದು ತಿಳಿದು ಇದನ್ನು ಆಗಗೊಡಿಸದೆ ತಾನು ಅರಿಹೋಗಿ ಅಂತರ್ಧಾನನಾದನು.

ಇಷ್ಟರಲ್ಲಿ ವೃತ್ರನು ಕ್ಷಣ ಕ್ಷಣವೂ ಒಂದು ಧನುಸ್ಸಿನ ಪ್ರಮಾಣದಷ್ಟು (ಅಥವಾ ಧನುಸ್ಸಿನಿಂದ ಬಾಣವು ಹೋಗಿ ಬೀಳುವಷ್ಟು ದೂರ) ಬೆಳೆಯುತ್ತಾ ಜಗತ್ತೆಲ್ಲವನ್ನೂ **ಸುತ್ತುವರೆದು** ಬೆಳೆಯಲಾರಂಭಿಸಿದನು :—**"ಇಷು ಮಾತ್ರಮಿಷುಮಾತ್ರಂ ಅಪರ್ಧತ । ಸ ವಿಶ್ವಾಜ್ ಇಮಾನ್ ಲೋಕಾನ್ ಅವೃಣೋತ್। ಲೋಕಾನ್ ಯದಿಮಾನ್ ಅವೃಣೋತ್ ತದ್ವೃತ್ರಸ್ಯ ವೃತ್ರತ್ವಂ ।"**

ಅಂದರೆ ವೃತ್ರ ಶಬ್ದಕ್ಕೇ "ಸುತ್ತುವರೆದು ಬೆಳೆಯುವವನು" ಎಂಬ ಅರ್ಥ ವೇದದಲ್ಲಿಯೇ ಬಂದಿದೆ. ಮುಂದೆ ಇದನ್ನು ಕಂಡು ಇಂದ್ರನಿಗೆ ಭಯವಾಗಲು, ಇವನನ್ನು ನಿಗ್ರಹಿಸಲು ಉಪಾಯವನ್ನು ಹುಡುಕುತ್ತಿರುವಲ್ಲಿ, ಅಷ್ಟರೊಳಗೆ ವೃತ್ರನ ತಂದೆಯಾದ ತ್ವಷ್ಟೃವಿಗೂ ಪಶ್ಚಾತ್ತಾಪವೂ ಭಯವೂ ಆಗಿ, ವೃತ್ರವಧೆಗೆ ಸಹಾಯವಾಗುವಂತೆ, ದಿವ್ಯವಾದ ವಜ್ರಾಯುಧವನ್ನು ತಯಾರಿಸಿ, ಅದಕ್ಕೆ ಮಂತ್ರ ಶಕ್ತಿಯನ್ನು ಕೊಟ್ಟು ಅದನ್ನು ಇಂದ್ರನಿಗೆ ಕೊಡುತ್ತಾನೆ.

## ೮. ವೃತ್ರ ಪರಾಜಯ, 'ವಜ್ರಾಯುಧ'ದ ಮಹಿಮೆ

ವಜ್ರಾಯುಧವೆಂದರೇನು ? ಎಂಬ ಪ್ರಶ್ನೆಗೆ ವೇದವೇ ಹೀಗೆ ಉತ್ತರ ಹೇಳುತ್ತದೆ:– **"ತಪೋ ವೈ ಸ ವಜ್ರ ಆಸೀತ್" "ತಪಸ್ಸೇ ವಜ್ರಾಯುಧ."**

ಇದನ್ನು ಎತ್ತುವುದಕ್ಕೂ ಶಕ್ತಿಯಿಲ್ಲದ ಇಂದ್ರನು ವಿಷ್ಣುವನ್ನು ಪ್ರಾರ್ಥಿಸುತ್ತಾನೆ. ವಿಷ್ಣುವು ಅನುಗ್ರಹಿಸಿ, ತನ್ನನ್ನು ಮೂರು ಭಾಗವನ್ನಾಗಿ **(ವಿಷ್ಣುಃ ತ್ರೇಧಾ ಆತ್ಮಾನಂ)** ವಿಭಾಗಿಸಿ, (ಇಲ್ಲಿ ತ್ರಿವಿಕ್ರಮತ್ವ ಪ್ರಸ್ತಾಪವಿರುವಂತಿದೆ.) ಅದರಲ್ಲಿ ಒಂದನ್ನು ಭೂಮಿಯಲ್ಲಿಯೂ ಮತ್ತೊಂದನ್ನು ದೇವಲೋಕದಲ್ಲಿಯೂ, ಮತ್ತೊಂದನ್ನು ಅಂತರಿಕ್ಷದಲ್ಲಿಯೂ ಇಟ್ಟನು. ಇಂದ್ರನು ಪೃಥ್ವಿಯಲ್ಲಿ ಹೊಕ್ಕಿದ್ದ ವಿಷ್ಣುವಿನ ಅಂಶದೊಡನೆ ಕೂಡಿ, ವಜ್ರಾಯುಧವನ್ನು ಎತ್ತಿ, ವೃತ್ರನನ್ನು ಸಂಹರಿಸಲು ಬರುವಾಗ, ವೃತ್ರನು ಅದನ್ನು ಕಂಡು ಬೆದರಿ, ತಾನು ಪೃಥ್ವಿಯಿಂದ ಹೊರಗೆ ಹೋಗುವುದಾಗಿಯೂ, ಪೃಥ್ವಿಯಲ್ಲಿ ವ್ಯಾಪಿಸಿರುವ ತನ್ನ ಶಕ್ತಿ ಎಲ್ಲವನ್ನೂ ಇಂದ್ರನಿಗೇ

ಕೊಡುವುದಾಗಿಯೂ ಹೇಳಿ ಒಡಂಬಡಿಸುತ್ತಾನೆ. ಮುಂದೆ ಅಂತರಿಕ್ಷ, ದೇವ ಲೋಕಗಳಲ್ಲಿಯೂ ಯುದ್ಧ ನಡೆದು, ವೃತ್ರನನ್ನು ಸೋಲಿಸಿ ಇಂದ್ರನು ಇದೇ ರೀತಿ ವೃತ್ರನೊಡನೆ ಒಪ್ಪಂದಕ್ಕೆ ಬಂದು, ಅವನ ವೀರ್ಯವನ್ನು ಸ್ವೀಕರಿಸಿ. **ಅದನ್ನು ವಿಷ್ಣುವಿಗೆ ಕೊಡುತ್ತಾನೆ.** ಕೊನೆಯಲ್ಲಿ ವೃತ್ರನು ಇಂದ್ರನನ್ನು ಕುರಿತು ಸಂಧಿಯನ್ನು ಮಾಡಿಕೊಳ್ಳುವಾಗ, "ನಿನ್ನ ಶರೀರ ವನ್ನು ಪ್ರವೇಶಿಸಲು ನನಗೆ ಅನುಮತಿಯನ್ನು ಕೊಡು. **(ತ್ವಾಮೇವ ಪ್ರವಿಶಾನಿ)** ಎನ್ನಲು. ಇಂದ್ರನು "ನನ್ನನ್ನು ಏನು ಮಾಡುವೆ ? ನನ್ನನ್ನೇ ತಿನ್ನುವೆಯಲ್ಲವೆ ?" **(ಯನ್ಮಾಂ ಪ್ರವಿಶೇಃ ಕಿಂ ಮಾಂ ಭುಂಜ ಇತ್ಯ ಬ್ರವೀತ್)** ಎನ್ನಲು ಆಗ ವೃತ್ರನು "ಹಾಗಲ್ಲ, ನಿನ್ನ ಉದರದಲ್ಲಿ ಇಂಧನ ವಾಗಿದ್ದು (ಜಠರಾಗ್ನಿಯಾಗಿದ್ದು) ನಿನಗೆ ಅನುಕೂಲವಾಗಿ ನಿನ್ನ ಭೋಗ ಕ್ಕಾಗಿ ನಿನ್ನ ಅನ್ನಗಳನ್ನು ಜೀರ್ಣಿಸುತ್ತಾ ಸೇವೆ ಮಾಡುತ್ತಿರುರುವೆನು" **(ತ್ವಾ ಮೇವ ಇಂಧೀಯೆ ತವ ಭೋಗಾಯ ತ್ವಾಂ ಪ್ರವಿಶೇಯಂ ಇತ್ಯ ಬ್ರವೀತ್** ಎನ್ನುತ್ತಾನೆ.

## ೯. ಇಂದ್ರ ಶರೀರದಲ್ಲಿ ವೃತ್ರ !

ಹೀಗೆ ಇಂದ್ರ ಶರೀರದಲ್ಲಿ ವೃತ್ರನು ಹೊಕ್ಕಂದಿನಿಂದಲೂ ಪ್ರತಿ ಪ್ರಾಣಿಯ ಶರೀರದಲ್ಲಿಯೂ ಇದ್ದುಕೊಂಡು, **ಹಸಿವಿನ ರೂಪದಿಂದ ಸಕಲ ಪ್ರಾಣಿಗಳನ್ನೂ ತೊಂದರೆ ಪಡಿಸುತ್ತಲೇ ಇರುವನು.** ಹೀಗೆ ಮಾನವನ ಉದರದಲ್ಲಿಯೇ ಇರುವ ಹಸಿವೆಯೇ ವೃತ್ರನೆಂದೂ ಇವನು "ಭ್ರಾತೃವ್ಯ" ನೆಂದೂ. ಹೀಗೆ ತಿಳಿದವನು ಹಸಿವನ್ನು ಗೆಲ್ಲುವವನೆಂದೂ ವೇದವು ಫಲಶ್ರುತಿ ಹೇಳಿದೆ. **"ವೃತ್ರಃ ಪ್ರಾವಿಶತ್ ಉದರಂ ವೈ ವೃತ್ರಃ ಕ್ಷುತ್ ಖಲು ವೈ ಮನುಷ್ಯಸ್ಯ ಭ್ರಾತೃವ್ಯೋ ಯ ಯ ಏವಂ ವೇದ ಹಂತಿ ಕ್ಷುಧಂ ಭ್ರಾತೃವ್ಯಂ ।**

ಹೀಗೆ ಮೂರಾವರ್ತಿ ವೃತ್ರಪರಾಕ್ರಮವನ್ನು ಇಂದ್ರನ ದ್ವಾರಾ ಸ್ವೀಕಾರ ಮಾಡಿದುದರಿಂದ ವಿಷ್ಣುವಿಗೆ "ತ್ರಿಧಾತು" ಎಂದು ಪ್ರಸಿದ್ಧಿ ಯಾಯಿತೆಂದು ಶ್ರುತಿಯು ವರ್ಣಿಸಿದೆ: ಅಲ್ಲದೆ "ಇಂದ್ರ ವಿಷ್ಣು"ಗಳನ್ನು

ಕುರಿತು ಯಜ್ಞದಲ್ಲಿ ಅರ್ಪಿಸುವ ಪುರೋಡಾಶಕ್ಕೆ ತ್ರಿಧಾತುಯುಕ್ತವೆಂದು ಪ್ರಸಿದ್ಧಿಯಾಯಿತು.

ಈ ಪ್ರಸಂಗದಲ್ಲಿ ಇಂದ್ರನ ಪರಾಕ್ರಮಕ್ಕೆ ವಿಷ್ಣುವೇ ಪ್ರಧಾನ ಕಾರಣವೆಂದು ಕಂಠೋಕ್ತವಾಗಿಯೇ ಹೇಳಿರುವುದು ಗಮನೀಯ. (ಕೇನೋಪನಿಷತ್ತಿನಲ್ಲಿ ಸಕಲ ದೇವತೆಗಳ ಪರಾಕ್ರಮಕ್ಕೂ ಭಗವಂತನೇ ಕಾರಣ ಎಂದು ಉಪಾಖ್ಯಾನ ಪೂರ್ವಕವಾಗಿ ಸ್ಥಾಪಿಸಲ್ಪಟ್ಟಿರುವುದನ್ನೂ, ಸ್ಮರಿಸಬಹುದು. ಇಂದ್ರ ಜಯವನ್ನೂ, ಇಂದ್ರ ಪರಾಕ್ರಮವನ್ನೂ ಕೊಂಡಾಡುವ ಸೂಕ್ತಗಳೆಲ್ಲ ವಸ್ತುತಃ ಈ ಪ್ರಕಾರವಾಗಿ ಸಕಲ ದೇವತಾಂತರಾತ್ಮನಾದ ಭಗವಂತನಾದ ವಿಷ್ಣುವನ್ನೇ ಕೊಂಡಾಡುತ್ತವೆ ಎಂದು ಗ್ರಹಿಸಬೇಕು.) ಇಂದ್ರ ಶರೀರಾಂತರ್ವರ್ತಿಯಾದ ಭಗವಂತನನ್ನೇ ಪರಮಾರ್ಥದಲ್ಲಿ ವೇದಗಳು ಕೊಂಡಾಡಿವೆಯೆಂದೇ ಗ್ರಹಿಸಿ ಇಲ್ಲಿ ವಿವೇಚಿಸಲಾಗಿರುವುದು ಹೀಗೆ ಆಧಾರ ಪೂರ್ಣವಾಗಿದೆ. **"ಇಂದ್ರಸ್ಯಃ ಯುಜ್ಯಃ ಸಖಾ"** ಎಂಬ ವಿಷ್ಣು ಸೂಕ್ತದ ಭಾಗಕ್ಕೆ (ಋ. ಸಂ. I-22-19) ವ್ಯಾಖ್ಯಾನ ಬರೆಯುತ್ತಾ ಶ್ರೀ ಸಾಯಣಾಚಾರ್ಯರು ಮೇಲಿನ ತೈತ್ತಿರೀಯ ಸಂಹಿತಾ ಪ್ರಸಂಗವನ್ನು ನಿದರ್ಶನವನ್ನಾಗಿ ಉದಾಹರಿಸಿದ್ದಾರೆ.

## ೧೦. ಕೆಲವು ಮರ್ಮಗಳು

ಇಲ್ಲಿ ಗಮನಿಸಬೇಕಾದ ಅಂಶಗಳು ಇನ್ನೂ ಇವೆ. ವೃತ್ರನು ಇಲ್ಲಿ ಕೊಲ್ಲಲ್ಪಡಲಿಲ್ಲ, ಮತ್ತು ಪ್ರಾಣಿಗಳ ಹಸಿವಿನ ರೂಪದಲ್ಲಿ ಸರ್ವದಾ ಇರುತ್ತಾನೆ, ಎಂದು ಹೇಳಿರುವುದರಲ್ಲಿ ನಿತ್ಯ ಸತ್ಯದ ಒಂದು ಮರ್ಮವಿದೆ. ಅಂದಮೇಲೆ ಪ್ರಾಣಿಗಳ ಬಾಧೆ ಅವನಿಂದ ನಿರಂತರವಾಗಿ ನಡೆಯುತ್ತಿರುವ ವ್ಯಾಪಾರ. **ಸಾಂಕೇತಿಕವಾಗಿ, "ಹಸಿವೆ" ಎಂಬುದು ಅತೃಪ್ತಿಗೆ ಪರ್ಯಾಯ.** ಇದನ್ನೇ ಭಗವಂತನು ಗೀತೆಯಲ್ಲಿ :

**ಕಾಮ ಏಷ ಕ್ರೋಧ ಏಷಃ ರಜೋಗುಣ ಸಮುದ್ಭವಃ ।**
**ಮಹಾಶನೋ ಮಹಾಪಾಪ್ಮಾ ವಿದ್ಧಿ ಏನಂ ಇಹ ವೈರಿಣಂ ॥**

(III-37)

ಎಂದು ಹೇಳಿದ್ದಾನೆ. ಕಾಮಕ್ರೋಧ ರೂಪದಲ್ಲಿರುವ. ನೀಗಲಾರದ ಹಸಿವೆಯೇ ವೃತ್ರ: ಮತ್ತು ಹದಿನಾರಸೇ ಅಧ್ಯಾಯದಲ್ಲಿ "ಕಾಮಮಾಶ್ರಿತ್ಯ ದುಷ್ಪೂರಂ" ಎಂದೂ, ಮತ್ತೆ "ದುಷ್ಪೂರೇಣ ಅನಲೇನ ಚ" ಎಂದೂ ಪದೇ ಪದೇ ಹೇಳಿರುವಂತೆ ಕಾಮವೆಂಬುದು ತೃಪ್ತಿಯಿಲ್ಲದ ಅಗ್ನಿ ಎಂದೇ ಪದೇ ಪದೇ ವರ್ಣಿಸಲ್ಪಟ್ಟಿದೆ. "ಅತಿಯಾಗಿ ಹಸಿವೆಯಾದವನ ಹೊಟ್ಟೆಗೆ ಭೂತ ಹೊಕ್ಕಿದೆ" ಎಂದೂ ಬಂದಿರುವ ನಾಣ್ಣುಡಿಯಲ್ಲಿಯೂ ವೃತ್ರನನ್ನೇ ಭೂತವೆಂದು ವರ್ಣಿಸಲಾದೆ. ಇಂಥ ಭೂತವು. ಇಂದ್ರನಿಗೇ ಮೊದಲು ಹೊಕ್ಕಿತೆಂದೂ ಶ್ರೀಮದ್ರಾಮಾಯಣವೂ ಹೇಳುತ್ತಿದೆ: "ಕ್ಷುಧಾಚೈವ ಸಹಸ್ರಾಕ್ಷಂ ಬ್ರಹ್ಮಹತ್ಯಾ ಸಮಾವಿಶತ್" (ಬಾ. 14–18)

ಮೇಲಿನ ತೈತ್ತಿರೀಯ ಪ್ರಸಂಗದಲ್ಲಿ ಅಂದಿನಿಂದ ಸಕಲ ಪ್ರಾಣಿಗಳ ಉದರದಲ್ಲೂ ವೃತ್ರಪ್ರವೇಶವಾಯಿತೆಂದು ಹೇಳಿರುವುದರಿಂದ ಸಕಲ ಮಾನವರಲ್ಲೂ ದೇವತೆಗಳ ಸಾಂನ್ನಿಧ್ಯವಿದೆಯೆಂದೂ, ದೇವತೆಗಳಿಗಾದ ಕೇಡು ಮಾನವರಿಗೇ ಎಂದು, ಅವರ ಶ್ರೇಯಸ್ಸೇ ಇವರದೆಂದೂ ಪರೋಕ್ಷವಾಗಿ ಹೇಳಿದಂತಾಯಿ.

ಹೀಗೆ ವೃತ್ರ ಶಬ್ದಕ್ಕೆ "ವೃಣೋತೇರ್ವಾ, ವರ್ತತೇರ್ವಾ, ವರ್ಧತೇರ್ವಾ" ಎಂಬಂತೆ "ಸುತ್ತುವರಿದು ತಡೆಯುವವನು, ಸರ್ವದಾ ಇರುವವನು ಸರ್ವದಾ ಬೆಳೆಯುತ್ತಿರುವವನು" ಎಂಬ ಅರ್ಥದಲ್ಲಿ ಮಾನವನ ನಿತ್ಯ ಶತ್ರುವಾದ ಕಾಮಕ್ರೋಧ ಶಕ್ತಿಯನ್ನೆ, ಪಾಪಸ್ವರೂಪವನ್ನೇ, ರೂಪಕವಾಗಿ ವೇದವು ತಿಳಿಸಿಕೊಡುತ್ತಿದೆ. ಈ ವಿಷಯದಲ್ಲಿ ಇನ್ನೂ ಸಂದೇಹಪಡುವ ಮೂಢರು ಈ ಕೆಳಗಿನ ಶ್ರೀಭಾಗವತದ ಸೂಕ್ತಿಯನ್ನು ಗಮನಿಸತಕ್ಕದ್ದು. (VI–9–18)

**ಯೇನಾವೃತಾ ಇಮೇ ಲೋಕಾಃ ತಮಸಾ ತ್ವಾಷ್ಟ್ರಮೂರ್ತಿನಾ।**
**ಸ ವೈ ವೃತ್ರ ಇತಿ ಪ್ರೋಕ್ತಃ ಪಾಪಃ ಪರಮದಾರುಣಃ ॥**

"ಕತ್ತಲೆಯ ರೂಪದಲ್ಲಿರುವ ಯಾವ ಈ ತ್ವಾಷ್ಟ್ರಮೂರ್ತಿಯಿಂದ ಮೂರು ಲೋಕಗಳೂ ಆವರಿಸಲ್ಪಟ್ಟಿವೆಯೊ, ಪಾಪಸ್ವರೂಪನಾದ, ಈ ಪರಮ ದಾರುಣ ಶಕ್ತಿಯನೇ ವೃತ್ರನೆಂದು ಕರೆಯುತ್ತಾರೆ."

# ೧೧. 'ವೃತ್ರ'ನ ಮಾರ್ಮಿಕ ವರ್ಣನೆ

ವೇದದಲ್ಲಿಯೇ ಈ ಕೆಳಗಿನ ವೃತ್ರ ವರ್ಣನೆಯಿದೆ—

**ಅತೃಪ್ಣುವಂತಂ ವಿಯತಮಬುಧ್ಯಮಬುಧ್ಯಮಾನಂ**
**ಸುಷುಪಾಣಮಿಂದ್ರ ।**
**ಸಪ್ತಪ್ರತಿ ಪ್ರವತ ಶಯಾನಮಹಿಂ ವಜ್ರೇಣವಿರಿಣಾ**
**ಅಪರ್ವನ್ ॥**

(ಋ. ಸಂ. IV-19-೦)

ವೃತ್ರನು ಸ್ಥೂಲಕಾಯನೆಂದೂ, ಶಿಥಿಲಾಂಗನೆಂದೂ, ಅತೃಪ್ತಿಯ ಸ್ವರೂಪದವನೆಂದೂ ಪ್ರಜ್ಞಾಶೂನ್ಯನೆಂದೂ, ತಾನು ಪ್ರಜ್ಞಾಶೂನ್ಯನೆಂಬುದನ್ನೂ ತಿಳಿಯದವನೆಂದೂ, ಸಪ್ತಸಿಂಧುಗಳು ಪ್ರವಹಿಸದಂತೆ ಅಡ್ಡಲಾಗಿ ಮಲಗಿದವನೆಂದೂ, ದೊಡ್ಡ ಹಾವಿನ ಆಕೃತಿಯವನೆಂದೂ, ಇಂತಹ ವೃತ್ರನನ್ನು ಹುಣ್ಣಿಮೆಯ ದಿನ ವಜ್ರಾಯುಧದಿಂದ ಇಂದ್ರನು ವಿಶೇಷವಾಗಿ ಕೊಂದನೆಂದೂ ಹೇಳಿದೆ.

ಹೀಗೆ ವೃತ್ರವಧೆಯನ್ನು ಅನೇಕ ಕಡೆಗಳಲ್ಲಿ ವೇದವು ಹೇಳಿರುವುದರ ಭಾವ ಏನೆಂದರೆ, ವೃತ್ರೋತ್ಪತ್ತಿಯೂ ವೃತ್ರವಧೆಯೂ ನಿರಂತರವಾಗಿ ನಡೆಯುತ್ತಿರುವ ವ್ಯಾಪಾರಗಳೇ ಎಂದು ವಿಶೇಷವಾಗಿ ತಿಳಿಸಲು ವೃತ್ರನು **"ಅಹಿಂ ಪರಿಶಯಾನಮರ್ಣಃ"** ಎಂಬಂತೆ ನೀರಿಗಡ್ಡಲಾಗಿ ಮಲಗಿರುವವನೆಂದೇ ವರ್ಣಿಸಲ್ಪಟ್ಟಿದ್ದಾನೆ. ಇದರ ಭಾವವೇನು ?

ಜೀವನವು ನಿರಂತರ ಪ್ರವಾಹ. ಇದು ಯಾರಿಂದಲೂ ತಡೆಹಿಡಿಯಲ್ಪಡತಕ್ಕದ್ದಲ್ಲ. ಸಾಮೂಹಿಕ ಜೀವನವು ಒಂದು ದೃಷ್ಟಿಯಿಂದ, ಒಂದು ರೀತಿಯ ಪ್ರವಾಹವಾದರೆ ವೈಯ್ಯಕ್ತಿಕ ಜೀವನವೂ ಮತ್ತೊಂದು ರೀತಿಯ ಪ್ರವಾಹವೇ. "ಭೂಃ, ಭುವಃ, ಸುವಃ" ಇತ್ಯಾದಿ ಸಪ್ತವ್ಯಾಹೃತಿಗಳೂ ಮಾನವನ ಅಂತರಂಗ ಪ್ರಜ್ಞೆಯ ಉನ್ನತಿಯ ಬೇರೆ ಬೇರೆ ಮಟ್ಟಗಳನ್ನು ಕ್ರಮ ಕ್ರಮವಾಗಿ ಸಂಕೇತಿಸುವಂತೆ, ಸಪ್ತಸಿಂಧುಗಳೂ, ಮಾನವ ಪ್ರಜ್ಞೆಯ ಈ ಸಪ್ತ 'ಲೋಕ'ಗಳನ್ನೇ ಪ್ರತಿನಿಧಿಸುತ್ತಾ ಈ ವಿಧವಾದ ಪ್ರಜ್ಞಾ ಪ್ರವಾಹವನ್ನೇ ಮಾನವನ ವ್ಯಕ್ತಿತ್ವದಲ್ಲಿ ಸೂಚಿಸುವುವು. (ಇದನ್ನು ಒಂದು

ಪ್ರತ್ಯೇಕ ಲೇಖನದಲ್ಲಿ ಮುಂದಿನ ಸಂಪುಟದಲ್ಲಿ ವಿವರಿಸಲಾಗುವುದು.) ನೀರು ಜೀವನವನ್ನು ಹಸಿರಾಗಿಡುವ ಪದಾರ್ಥ. ನೀರಿಲ್ಲದಿದ್ದರೆ ಬರಗಾಲವು ಬರುವಂತೆ, ಮಾನವನ ವ್ಯಕ್ತಿತ್ವದಲ್ಲೂ, 'ಸಪ್ತಸಿಂಧು'ಗಳ ಪ್ರವಾಹವು ನಿಂತು ಹೋದರೆ, ಹೇಳ ತೀರದ ರೀತಿಯ ಆಧ್ಯಾತ್ಮಿಕ ಬರಗಾಲವು, ಮಾನವ ಜೀವನದ ಎಲ್ಲ ಮುಖಗಳಲ್ಲೂ— ಭಾವನೆ, ವಿಚಾರಪರತೆ, ಸ್ನೇಹ, ಧ್ಯೇಯವಾದ, ಮಾನವ–ಮಾನವನ ಸಂಬಂಧ ಇತ್ಯಾದಿ ಎಲ್ಲ ಬಗೆಯಲ್ಲೂ–ಕ್ಷಾಮ ಉಂಟಾಗುತ್ತದೆ. ಒಟ್ಟಿನಲ್ಲಿ ಋತಪ್ರವಾಹವು ತಡೆಹಿಡಿಯಲ್ಪಡಬಾರದ ಸೃಷ್ಟಿಯ ಗತಿ. ಇದು ಭಗವತ್ಸಂಕಲ್ಪದಂತೆ **"ಋತಂ ಋತಾಯ ಪವತೇ"** ಎಂಬಂತೆ ಋಜುಮಾರ್ಗದಲ್ಲಿರುವವನಿಗೆ ಹಿತಕರವಾಗಿ, ಪ್ರವಹಿಸುವುದು. ಈಗ ಇದನ್ನು ತಡೆಹಿಡಿದು, ಇದಕ್ಕೆ ಅಡ್ಡಲಾಗಿ ಮಲಗುವುದೇ ವೃತ್ರಾಸುರನ ಪ್ರಧಾನ ಕಾರ್ಯ.

ಹಿಂದೆ ವಿವರಿಸಿದಂತೆ, ಪಣಿಗಳು ಭಗವದ್‌ಜ್ಞಾನದ ಅಪಹಾರಕರು ಮಾತ್ರವಾದರೆ ವೃತ್ರನು ಜೀವನಗತಿಯನ್ನೇ ತಡೆಹಿಡಿಯುವ ದುಷ್ಟಶಕ್ತಿ. ಮಾನವನು. ಮಹೋನ್ನತ ಧ್ಯೇಯದ ಕಡೆಗೆ ಹೋಗದಂತೆ ಮಾಡುವುದೇ ಇವನಿಗೆ ಸಂತೋಷದ ಕೆಲಸ. 'ನೀರಿ'ನಲ್ಲಿ ಸ್ವರ್ಲೋಕದ ತತ್ವವು ಅಡಗಿದೆಯೆಂದೂ ಅಗ್ನಿದೇವನು ದಸ್ಯುಗಳನ್ನು ಕೊಂದು ಈ ಲೋಕವನ್ನು ಬಿಡಿಸಿದನೆಂದೂ, ಹೀಗೆ 'ನೀರಿ'ಗೂ ಪರಮಪದವೆಂಬ ಲೋಕಕ್ಕೂ ಬಹು ವಿಚಿತ್ರವಾದ ಒಂದು ಸಾಂಕೇತಿಕ ಸಂಬಂಧವನ್ನು ವೇದವೇ ಹೇಳುತ್ತದೆ :

**ಅಗ್ನಿರ್ಜಾತೋ ಅರೋಚತ ಘ್ನನ್ ದಸ್ಯೂನ್**
**ಜ್ಯೋತಿಷಾ ತಮಃ ।**
**ಅವಿಂದತ್ ಗಾ ಅಪಃ ಸ್ವಃ ॥** (ಋ.ಸಂ. V-14-4)

ಇದಲ್ಲದೆ, ಇನ್ನೂ ಲೆಕ್ಕವಿಲ್ಲದಷ್ಟು ಕಡೆಗಳಲ್ಲಿ ಇಂಥದೇ ಸಂಬಂಧವನ್ನು **"ಅಪ್ಸು ಸೂರ್ಯೇ ಮಹದ್ಧನಂ"** 'ನೀರಿ'ನಲ್ಲಿರುವ ಸೂರ್ಯನಲ್ಲಿ ದೇವತೆಗಳ ಬಹು ದೊಡ್ಡ ಧನವಿದೆ, (VIII-68-9) ಇತ್ಯಾದಿ ಹೇಳಿದೆ. ವಸಿಷ್ಠ ಋಷಿದೃಷ್ಟವಾದ ಒಂದು ಆಪೋಸೂಕ್ತವಲ್ಲಿ ದಿವ್ಯವಾದ 'ನೀರಿನ' ಬಗೆಗೆ ಈ ಪ್ರಾರ್ಥನೆ ಇದೆ—

ಸಮುದ್ರ ಜ್ಯೇಷ್ಠಾಃ ಸಲಿಲಸ್ಯ ಮಧ್ಯಾತ್ಪುನಾನಾ ಯಂತ್ಯ-
ನಿವಿಶಮಾನಾಃ ।
ಇಂದ್ರೋ ಯಾ ವಜ್ರೀ ವೃಷಭೋ ರರಾದ ತಾ ಆಪೋ
ದೇವೀರಿಹಮಾಮವಂತು
(ಋ. ಸಂ. VII-49-1)

"ಕ್ಷಣಮಾತ್ರವೂ ನಿಂತಲ್ಲಿ ನಿಲ್ಲದೆ ಪ್ರವಹಿಸುವುವೂ ಸಮುದ್ರವನ್ನೇ ಉತ್ತಮವಾದ ಆಶ್ರಯಸ್ಥಾನವನ್ನಾಗಿ ಉಳ್ಳವೂ ಆದ ನೀರುಗಳು ಸಮುದ್ರವೆಂಬ ಅಂತರಿಕ್ಷದ ಮಧ್ಯದಿಂದ ಪ್ರವಹಿಸಿ ಬಂದು ಜಗತ್ತನ್ನು ಪಾವನಗೊಳಿಸುತ್ತವೆ. ಯಾವ ಈ ದಿವ್ಯವಾದ ನೀರುಗಳನ್ನು ವಜ್ರಿಯಾದ ಇಂದ್ರನು ನಮ್ಮ ಇಷ್ಟಾರ್ಥಗಳನ್ನು ಸುರಿಸುವಂತೆ (ವೃತ್ರ ಬಂಧನದಿಂದ) ಬಿಡಿಸಿ ಪ್ರವಹಿಸುವಂತೆ ಮಾಡಿದನೋ ಅಂಥ ಈ ನೀರಿನ ಪ್ರವಾಹಗಳು ನನ್ನನ್ನು ಸರ್ವದಾ ಕಾಪಾಡಲಿ. (ಮತ್ತು ಅವು ಸರ್ವದಾ ಪ್ರವಹಿಸಲಿ.)"

## ೧೨. 'ಸಮುದ್ರ'ದ ಕಡೆಯಿಂದ ಹರಿಯುವ ನದಿಗಳು!

ಇಲ್ಲಿ ಒಂದು ವಿಚಿತ್ರವಿದೆ. ಭೂಮಿಯ ಮೇಲಿನ ನದಿಗಳು ಸಮುದ್ರದ ಕಡೆಗೆ ಪ್ರವಹಿಸುವುವಾದರೆ, ಇಲ್ಲಿ ಹೇಳಲ್ಪಟ್ಟಿರುವ ನದಿಗಳು ಸಮುದ್ರವನ್ನೇ ಉಗಮಸ್ಥಾನವನ್ನಾಗಿ ಹೊಂದಿವೆ. ("ಸಮುದ್ರ ಜ್ಯೇಷ್ಠ ವಾದುದು ಮಾತ್ರವಲ್ಲದೆ ಸಲಿಲಸ್ಯಮಧ್ಯಾತ್ ಎಂಬುದರಿಂದ ಇದು ಸ್ಪಷ್ಟ). ಹೀಗೆ ಇವು ಸಾಂಕೇತಿಕವೆಂಬ ವಿಷಯದಲ್ಲಿ ಸಂದೇಹಕ್ಕೆ ಅವಕಾಶವೇ ಇಲ್ಲ. ಏಕೆಂದರೆ, ಕೇವಲ ವಾಚ್ಯಾರ್ಥವನ್ನು ಗಮನಿಸಿದರೆ ಇಂತಹ ಸೂಕ್ತಗಳಿಗೆ ಅರ್ಥವೇ ಕಾಣುವುದಿಲ್ಲ. ಮಾನವನ ವ್ಯಕ್ತಿತ್ವದಲ್ಲಿ ಹೃದಯಾಕಾಶದಲ್ಲಿ ಗುಪ್ತವಾಗಿರುವ ಘನಪ್ರಜ್ಞೆಯೇ ಜಾಗೃತ ಮೊದಲಾದ ಅವಸ್ಥೆಗಳಲ್ಲಿ ಹೊರಮುಖವಾಗಿ ಪ್ರವಹಿಸಿ, ಜೀವನ ವ್ಯಾಪಾರವನ್ನು ನಡೆಸುತ್ತದೆ. ಇದು ಅಂತರಿಕ್ಷದಿಂದ ಬೀಳುವ ಮಳೆಯ ರೂಪಕದಲ್ಲಿ ಸಂಕೇತಿಸಲ್ಪಟ್ಟು ವರ್ಣಿಸಲ್ಪಟ್ಟಿದೆ.

ಇದೇ ಸೂಕ್ತದ ಮುಂದಿನ ಕೆಲವು ಮಂತ್ರಗಳಲ್ಲಿಯೂ ದಿವ್ಯವಾದ ಈ ನದಿಗಳನ್ನು ದೇವಲೋಕೋತ್ಪನ್ನವೆಂದೂ ಅಡೆತಡೆಯಿಲ್ಲದೆ ಹರಿಯುವ

ವೆಂದೂ ಮತ್ತು ಸ್ವಯಂ ಉದ್ಭವಿಸಿದುವೆಂದೂ, (ಸ್ವಯಂ ಜಾಃ) ಸಮು ದ್ರಾರ್ಥವಾಗಿಯೇ ಇರುವುವೆಂದೂ, ವರುಣನೇ ಇವುಗಳಿಗೆ ಒಡೆಯನಾಗಿದ್ದು ಮಾನವರ ಸತ್ಯ ಅನೃತಗಳನ್ನು ಗಮನಿಸುತ್ತಿರುವನೆಂದೂ, ಇತ್ಯಾದಿ ದೈವೀ ವರ್ಣನೆ ಬಂದಿದೆ. "ಸಮುದ್ರ" ಶಬ್ದಕ್ಕೆ ಅರ್ಥ ಮಾಡುತ್ತ ಯಾಸ್ಕರು (ನಿರುಕ್ತ II–10) ಇದು ಅಂತರಿಕ್ಷದ ಹದಿನಾರು ಪರ್ಯಾಯ ನಾಮಗಳಲ್ಲಿ ಒಂದೆಂದೂ "ಸಮುದ್ರವಂತಿ ಅಸ್ಮಾತ್ ಆಪಃ, ಸಮಭಿದ್ರವಂತಿ ಏನಂ ಆಪಃ, ಸಂಮೋದಂತೇ ಅಸ್ಮಿನ್ ಭೂತಾನಿ, ಸಮುದಕೋಭವತಿ, ಸಮನುತ್ತೀ ತಿವಾ" ಎಂಬಂತೆ, "ಇದರಲ್ಲಿ ನೀರು ಉದ್ಭವಿಸುತ್ತದೆ, ಇದರ ಕಡೆಗೆ ನೀರು ಹರಿಯುತ್ತಿದೆ. ಇದರಲ್ಲಿ ಸಕಲ ಪ್ರಾಣಿಗಳೂ ಆನಂದಪಡುತ್ತವೆ. ಇದ ರಲ್ಲಿ ನೀರು ಒಂದಾಗಿ ಸೇರುತ್ತದೆ ಮತ್ತು ಇದರ ನೀರು ಎಲ್ಲವನ್ನೂ ನೆನೆಯಿ ಸುತ್ತದೆ" ಎಂಬಂತೆ, ಅರ್ಥವನ್ನು ವಿವರಿಸಿ, ಸಮುದ್ರ ಶಬ್ದವು ಪಾರ್ಥಿವ ಸಮುದ್ರಕ್ಕಿಂತಲೂ ಭಿನ್ನವಾದ ಅಂತರಿಕ್ಷವನ್ನೇ ವಿವರಿಸುತ್ತದೆ ಎಂದು ಹೇಳಿದ್ದಾರೆ.

ಹೀಗೆ ಜೀವನಕ್ಕೆ ಅತ್ಯವಶ್ಯವಾದ "ನೀರ"ನ್ನು ತಡೆ ಹಿಡಿದು ಜೀವನದ ಗತಿಯನ್ನು ನಿಲ್ಲಿಸುವುದೇ ವೃತ್ರನ ಪ್ರಧಾನ ಕಾರ್ಯವೆಂಬುದರಲ್ಲಿ ಸಾಂಕೇತಿಕ ಅರ್ಥಸ್ಪಷ್ಟ. ಇವನನ್ನು ನಿಗ್ರಹಿಸುವುದು ಇಂದ್ರನ ಪ್ರಧಾನ ಕರ್ತವ್ಯ. ಈ ಕೆಲಸದಲ್ಲಿ ಪ್ರಧಾನವಾಗಿ ಮರುತ್ ದೇವತೆಗಳು ಇಂದ್ರನಿಗೆ ಸಹಾಯ ಮಾಡಿದರೆಂಬ ವಿಷಯವನ್ನು (ಐ.ಬ್ರಾ. III–20 ಇತ್ಯಾದಿ ಅನೇಕ ಕಡೆ ಗಳಲ್ಲಿ ವೇದದಲ್ಲಿ ಸ್ತುತಿಸಿದೆ. ವಿಷ್ಣುವಿನ ಸಹಾಯವಂತೂ ಹಿಂದೆಯೇ ವಿವರಿಸಲ್ಪಟ್ಟಿದೆ. ಸಕಲ ದೇವತೆಗಳೂ ತಮ್ಮ ಶಕ್ತಿಯನ್ನೂ ಇಂದ್ರನಲ್ಲಿ ಅರ್ಪಿಸಿದರೆಂದೂ ಅಲ್ಲಲ್ಲಿ ಹೇಳಲಾಗಿದೆ.

## ೧೩. 'ವೃತ್ರಮುಖ'ದಲ್ಲಿ ಇಂದ್ರ ಮತ್ತು ಸೋಮರು

ವೃತ್ರವಧೆಯ ಪ್ರಕಾರವನ್ನು ಈಗ ಮತ್ತಷ್ಟು ವಿವರವಾಗಿ ನೋಡೋಣ (ತೈ.ಸಂ. II–5–2.) ತ್ವಷ್ಟೃ ಪ್ರಜಾಪತಿಯು ಇಂದ್ರನನ್ನು ಕೊಲ್ಲುವ ಸಾಮರ್ಥ್ಯವುಳ್ಳ ಮಗನನ್ನು ಪಡೆಯಲು ಇಚ್ಛಿಸಿ ಮಾಡಿದ ಯಜ್ಞದಲ್ಲಿ ಸ್ವರ ವ್ಯತ್ಯಾಸದಿಂದ ವೃತ್ರನು ಇಂದ್ರನಿಂದಲೇ ಕೊಲ್ಲಲ್ಪಡುವವ

ನಾಗಿ ಜನಿಸಿದುದನ್ನು ಈ ಹಿಂದೆ ವಿವರಿಸಿದೆಯಷ್ಟೇ ! ಆಗ ಕ್ಷಣಕ್ಷಣವೂ ಒಂದು ಧನುಸ್ಸಿನಷ್ಟು ಪ್ರಮಾಣದಲ್ಲಿ ಬೆಳೆಯುತ್ತಿದ್ದ ಇವನನ್ನು ಸಂಹರಿಸಲು ತ್ವಷ್ಟೃವೇ ಇಂದ್ರನಿಗೆ ಸಹಾಯ ಮಾಡಿದನೆಂದೂ ಹೇಳಿದೆ. ಇಂದ್ರನು ಪ್ರಜಾಪತಿಯಲ್ಲಿ ಶರಣನಾಗಿ ಅವನಿಂದಲೂ ಆಶೀರ್ವಾದವನ್ನು ಪಡೆದು ವಜ್ರಾಯುಧವನ್ನು ಶಕ್ತಿಯುತವನ್ನಾಗಿ ಪಡೆದು ವೃತ್ರನೊಡನೆ ಯುದ್ಧಕ್ಕಾಗಿ ಬರುತ್ತಾನೆ. ಆಗ ವೃತ್ರಾಸುರನ ಮುಖದಲ್ಲಿ ವಾಸ ಮಾಡುತ್ತಿದ್ದ ಅಗ್ನಿ ಮತ್ತು ಸೋಮನು "ಅಯ್ಯಾ ಇಂದ್ರ, ಈಗ ಇವನನ್ನು ಹೊಡೆಯ ಬೇಡ. ಏಕೆಂದರೆ, ಇದು ಈಗ ನಮಗೆ ವಾಸಸ್ಥಾನ" ಎನ್ನಲು ಆಗ ಇಂದ್ರನು "ನೀವು ಎಷ್ಟಾದರೂ ನಮ್ಮವರು. ನೀವು ಇವನ ಮುಖವನ್ನು ಬಿಟ್ಟು ನನ್ನ ಕಡೆಗೆ ಬನ್ನಿ. ನಾನು ಬಳಿಕ ಇವನನ್ನು ಕೊಲ್ಲುವೆನು." ಎನ್ನಲು. ಆಗ, ಅವರು ಈ ಉಪಕಾರಕ್ಕೆ ಬದಲು ತಮಗೂ ಯಜ್ಞದಲ್ಲಿ ಹವಿರ್ಭಾಗ ವನ್ನು ಅಪೇಕ್ಷಿಸಿದರು. ಇಂದ್ರನು ಏಕಾದಶಕಪಾಲವೆಂಬ ಹವಿರ್ಭಾಗ ವನ್ನೂ ಪೌರ್ಣಮಾಸವೆಂಬ ಯಾಗದಲ್ಲಿ ಕಲ್ಪಿಸಿಕೊಟ್ಟ ಮೇಲೂ ವೃತ್ರನ ದವಡೆಯಿಂದ ಹೊರ ಬರಲಾಗದೆ. "ಅಯ್ಯಾ ಇಂದ್ರನೇ, ನಾವು ಈ ವೃತ್ರಾ ಸುರನ ಹಲ್ಲುಗಳ ಸಂದಿಯಲ್ಲಿ ಬಲವಾಗಿ ಕಚ್ಚಿ ಹಿಡಿಯಲ್ಪಟ್ಟಿದ್ದೇವೆ. ನಾವಾಗಿಯೇ ಇಲ್ಲಿಂದ ಬಿಡಿಸಿಕೊಂಡು ಬರಲಾರೆವು" ಎಂದು ಹೇಳುತ್ತಾರೆ.

ಆಗ ಇಂದ್ರನು, ತನ್ನ ಸಂಕಲ್ಪದಿಂದ ವಿಷಮಶೀತಜ್ವರವೆಂಬ ರೋಗ ವನ್ನು ಸೃಷ್ಟಿ ಮಾಡಲು ವೃತ್ರನು ತನ್ನೊಳಹೊಕ್ಕ ಈ ಛಳಿಜ್ವರದಿಂದ ಬಳಲಿ ಆಯಾಸದಿಂದ ಬಾಯನ್ನು ಅಗಲವಾಗಿ ತೆರೆದು ದೊಡ್ಡದಾಗಿ ಉಸಿರು ಬಿಡುತ್ತಾನೆ. ಆ ಕ್ಷಣವೇ ಅಗ್ನಿಸೋಮರು ಆ ಬಾಯಿಂದ ಹೊರಬೀಳಲು ವೃತ್ರನ ಪ್ರಾಣಾಪಾನಗಳು ಅವನನ್ನು ತ್ಯಾಗ ಮಾಡಿ ಹೊರಡುತ್ತವೆ: ಶ್ರುತಿಯು ಇಲ್ಲಿ ವೃತ್ರನ ಪ್ರಾಣವನ್ನೇ "ಪ್ರಾಣೋ ವೈ ದಕ್ಷೋಽಪಾನಃ ಕ್ರತುಃ" ಎಂಬಂತೆ 'ದಕ್ಷ'ವೆಂದೂ, ಅಪಾನವನ್ನೇ 'ಕ್ರತು'ವೆಂದೂ ಕರೆದಿದೆ. ದಕ್ಷ' ಎಂದರೆ ಕಾರ್ಯಕೌಶಲ್ಯ, 'ಕ್ರತು', ದೇಹ ಸಾಮರ್ಥ್ಯ. ಇದಕ್ಕಾಗಿಯೇ ಕಾರ್ಯಕೌಶಲ್ಯವೂ ದೇಹ ಶಕ್ತಿಯೂ ಪೋದವನನ್ನು (ವೃತ್ರಸಂತೆ) ಸತ್ತವನೆಂದು ಹೇಳುವರು.

ಯಜ್ಞವನ್ನು ಮಾಡುವಾಗ ಯಾವ ವಿಧವಾದ, ಅಂಗಚೇಷ್ಟೆ ಸಂಭವಿಸಿದರೂ, ಅಥವಾ ಆಕಳಿಕೆಯುಂಟಾದರೂ, "ಮಯಿ ದಕ್ಷ ಕ್ರತೂ" ಎಂಬ ಮಂತ್ರವನ್ನು ಉಚ್ಚರಿಸಬೇಕೆಂದು ಶ್ರುತಿಯೇ ಹೇಳುತ್ತಿದೆ. ಅಲ್ಲದೆ, ಈ ರಹಸ್ಯವನ್ನು ತಿಳಿದವನಿಗೆ ಶೀತ ಜ್ವರಬಾಧೆಯಿಲ್ಲವೆಂದೂ ಹೇಳಿದೆ. ಹೀಗೆ ಅಗ್ನೀಷೋಮಾದಿ ದೇವತೆಗಳೆಲ್ಲರೂ ವೃತ್ರನ ಬಾಯಿಂದ ಹೊರಬಂದ ಮೇಲೆಯೂ ವೃತ್ರನು ಇನ್ನೂ (ಪ್ರಾಣಾಪಾನಗಳು ಹೋದನಂತರವೂ,) ಸಾಯದೆ, ಇಂದ್ರನು ಮತ್ತೆ ವಜ್ರದಿಂದ ಕೊಲ್ಲಲು ಬಂದನು.

## ೧೪. ವೃತ್ರವಶದಲ್ಲಿ ದ್ಯಾವಾ ಪೃಥ್ವಿಗಳು

ದ್ಯಾವಾ ಪೃಥಿವಿಗಳು ಅವನನ್ನು ತಡೆದು, "ಅಯ್ಯಾ ಈಗ ಇವನನ್ನು ಕೊಲ್ಲಬೇಡ. ಏಕೆಂದರೆ, ಭೂಮಿಯಿಂದ, ದ್ಯುಲೋಕದ ವರೆಗೆ ಇರುವ ಪ್ರದೇಶವನ್ನೆಲ್ಲ ಇವನು ಆಕ್ರಮಿಸಿದ್ದಾನೆ. ನಮ್ಮನ್ನೇ ಆಶ್ರಯಿಸಿರುವ ಇವನನ್ನು ಕೊಂದರೆ ನಮ್ಮನ್ನೇ ಕೊಂದಂತೆ" ಎನ್ನುತ್ತವೆ. ಇಂದ್ರನು ಇದಕ್ಕೆ ಒಪ್ಪದಿರಲು ಆಗ ದ್ಯಾವಾ ಪೃಥಿವಿಗಳು ಇಂದ್ರನಿಂದ ವರಗಳನ್ನು ಕೇಳುತ್ತವೆ; ದ್ಯುಲೋಕವು ತಾನು ನಕ್ಷತ್ರ ಸಮೇತವಾಗಿರಬೇಕೆಂದೂ, ಭೂಮಿಯೂ ತಾನು ಪಶು, ಪಕ್ಷಿ, ಲತಾಗುಲ್ಮ ನದೀ ಪರ್ವತಾದಿ ಚಿತ್ರ ವಿಚಿತ್ರ ಪದಾರ್ಥಗಳಿಂದ ತುಂಬಿರಬೇಕೆಂದೂ ವರ ಕೇಳಿದುವಂತೆ. ನಂತರ ಇವನ್ನು ಅನುಗ್ರಹಿಸಿ, ಇಂದ್ರನು ವೃತ್ರನನ್ನು ಕೊಲ್ಲುತ್ತಾನೆ. ಮುಂದೆ, ವೃತ್ರವಧೆಯು ಹುಣ್ಣಿಮೆಯ ದಿನ ನಡೆಯುತ್ತದೆ. ಅದಕ್ಕಾಗಿಯೇ ಹುಣ್ಣಿಮೆಗೆ 'ವಾರ್ತ್ರಘ್ನೀ' ಎಂದು ಹೆಸರಾಯಿತು. ಆವರಿಸಿದ ಕತ್ತಲೆ ಎಂಬ ಶತ್ರುರೂಪ ವೃತ್ರನನ್ನು ಕೊಲ್ಲತಕ್ಕದ್ದು" ಎಂದು ಅರ್ಥ.

## ೧೫. 'ವೃತ್ರ' ಶರೀರದಿಂದ ದೇವತೆಗಳ ತೇಜಸ್ಸನ್ನು ತಂದುಕೊಟ್ಟ 'ಗೋವು'!

ಆನಂತರ ಇಂದ್ರನು ಅಗ್ನಿ, ಸೋಮ ಮುಂತಾದ ದೇವತೆಗಳನ್ನು ಕುರಿತು; ನೀವು ಇನ್ನು ಮೇಲೆ (ಹಿಂದಿನಂತೆ) ನಮಗಾಗಿ ಹವ್ಯವನ್ನು

ಯಜ್ಞದಲ್ಲಿ ತಂದುಕೊಡಿ." ಎನ್ನುತ್ತಾನೆ. ಅದಕ್ಕೆ ಅವರು "ನಾವು ಅನೇಕ ಕಾಲದಿಂದ ವೃತ್ರನ ದವಡೆಯಲ್ಲಿದ್ದು, ನಮ್ಮ ತೇಜಸ್ಸನ್ನೇ ಕಳೆದು ಕೊಂಡಿದ್ದೇವೆ. ಆ ತೇಜಸ್ಸು ನಮಗೆ ಪುನಃ ಬಂದ ಹೊರತು ನಿನಗೆ ಹವಿಸ್ಸನ್ನು ತಂದು ಕೊಡುವ ಶಕ್ತಿ ನಮಗಿಲ್ಲ." ಎನ್ನಲು, ಆಗ ದೇವತೆಗಳು ಯೋಚಿಸಿ ವೃತ್ರನ ಶರೀರದಲ್ಲಿ ಉಳಿದಿದ್ದ ತೇಜಸ್ಸನ್ನು ಹಿಂದಕ್ಕೆ ತರುವುದಕ್ಕಾಗಿ, 'ಗೋ'ಮಾತೆಯನ್ನು ಕಳುಹಿಸುತ್ತಾರೆ. ಏಕೆಂದರೆ, "ಗೌರ್ವಾವ ಸರ್ವಸ್ಯ ಮಿತ್ರಮಿತಿ" ಎಂಬಂತೆ ಇದು ಸಕಲರಿಗೂ ಮಿತ್ರ ಸ್ವಭಾವವುಳ್ಳದ್ದು. ಆಗ ಗೋವು ಇದಕ್ಕೆ ಒಪ್ಪಿ ತಾನೂ ಒಂದು ವರವನ್ನು ಕೇಳುತ್ತದೆ. ವೃತ್ರನಲ್ಲಿ ಅಡಗಿಕೊಂಡಿರುವ ಶಕ್ತಿಯನ್ನು ತಾನು ತಂದುದಾದರೆ, ತನ್ನಿಂದ ಉಂಟಾದ ಗವ್ಯಗಳಲ್ಲಿಯೇ (ಹಾಲು, ತುಪ್ಪ ಇತ್ಯಾದಿ) ಆ ದೇವತೆಗಳ ತೇಜಸ್ಸು ಸರ್ವದಾ ಅಡಗಿರಬೇಕು ಎಂದು. ಇಂದ್ರನು ಇದಕ್ಕೆ ಒಪ್ಪಿದನು. ಹೀಗೆ ಅಗ್ನಿಯ ತೇಜಸ್ಸು ತುಪ್ಪದಲ್ಲಿಯೂ, ಸೋಮನ ತೇಜಸ್ಸು ಹಾಲಿನಲ್ಲಿಯೂ ಮತ್ತು ಇತರ ಗವ್ಯಗಳಲ್ಲಿಯೂ ಅಡಗಿದೆ ಎಂಬ ಐತಿಹ್ಯವನ್ನು ಶ್ರುತಿಯು ಮಾರ್ಮಿಕವಾಗಿ ವಿವರಿಸಿದೆ.

## ೧೬. ಕೆಲವು ವಿವರಣೆಗಳು

ಈ ಮೇಲಿನ ವೃತ್ರವಧೆಯ ವರ್ಣನೆಯಲ್ಲಿ ಕೆಲವು ಸುಂದರವಾದ ಮಾರ್ಮಿಕ ಅಂಶಗಳು ಇರುವುದನ್ನು ಮನಗಾಣಬೇಕು. ದೇವತೆಗಳೆಲ್ಲರೂ ಸಹ ವೃತ್ರಾಸುರನ ದವಡೆಯಲ್ಲಿ ಸಿಕ್ಕುವಂತೆ ಆಯಿತು, ಎಂಬುದರಲ್ಲಿ ಎಚ್ಚರಿಕೆಯು ಮಾತಿದೆ. ವೃತ್ರನನ್ನು ಬೆಳೆಯಗೊಟ್ಟರೆ, ಅದರ ಪರಿಣಾಮವು ಆಗುವುದೇ ಹೀಗೆ,

ಎರಡನೆಯದಾಗಿ ವೃತ್ರನ ವೈಶಿಷ್ಟ್ಯವೇನೆಂದರೆ, ಲೋಕವನ್ನು ಬೆಳಗುವ ಶಕ್ತಿಗಳನ್ನು ತೇಜೋರಹಿತರನ್ನಾಗಿ ಮಾಡಿಬಿಡುವುದು. ನಮ್ಮಲ್ಲಿ ಆತ್ಮವಿಶ್ವಾಸ, ಶ್ರದ್ಧೆ, ದೈವಭಕ್ತಿ, ಇಂದ್ರಿಯ ದಾರ್ಢ್ಯ, ಸನ್ಮಾರ್ಗಪ್ರೇಮ ಮತ್ತು ಗಮನ· ಮೇಧಾಶಕ್ತಿ ಇತ್ಯಾದಿ ಉಜ್ವಲವಾದ ಏನೆಲ್ಲ ಅಂಶಗಳುಂಟೋ ಅವುಗಳನ್ನೆಲ್ಲ ಹಾಳು ಮಾಡುವುದೇ ವೃತ್ರನ ಗುರಿ.

ವೃತ್ರನು ಸತ್ತಮೇಲೂ ಈ ಪರಿಣಾಮವು ಅಗ್ನೀಷೋಮರನ್ನು ಬಿಡ ಲಿಲ್ಲವೆಂದರೆ, ಅವರ ಮೇಲೆ ಅವನ ಪ್ರಭಾವ ಎಷ್ಟಿರಬೇಕು ? 'ಗೋ' ಒಂದೇ ಇದನ್ನು (ದೇವತೆಗಳ ಕಳೆದು ಹೋಗಿದ್ದ ಶಕ್ತಿಯನ್ನು) ಹಿಂದಕ್ಕೆ ತರಲು ಸಾಮರ್ಥ್ಯವುಳ್ಳದ್ದಾಯಿತೆಂದೂ ಹಾಗೆ ತಂದ ದೇವತೆಗಳ ಶಕ್ತಿಯೇ ಆದರ ಗವ್ಯಗಳಲ್ಲಿ ಅಡಗಿದೆ ಎಂದೂ ಹೇಳಿದರೆ ಗವ್ಯಗಳ ಮಹಿಮೆಯನ್ನು ಏನೆಂದು ಹೇಳೋಣ? ವಾಚ್ಯಾರ್ಥದಲ್ಲಿಯೂ ಸೂಚ್ಯಾರ್ಥದಲ್ಲಿಯೂ ಈ ಹಿಂದೆ ಗೋವಿನ ಮಹತಿಯನ್ನು ವಿವರಿಸಿರುವ ಹಿನ್ನೆಲೆಯಲ್ಲಿ ಇದನ್ನು ಮತ್ತಷ್ಟು ಆಳವಾಗಿ ತಿಳಿಯಬೇಕು.

ಇಂದ್ರನು ವೃತ್ರನ ಹಿಡಿತದಿಂದ ಅಗ್ನೀಷೋಮರನ್ನು ಬಿಡಿಸಲು ಆ ಶರೀರದಲ್ಲಿ ಛಳಿಜ್ವರವನ್ನು ಸೃಷ್ಟಿಸಿದನೆಂಬುದರಲ್ಲಿಯೂ ಮರ್ಮವಿದೆ. ಇಂಥ ರೋಗಗಳು ಬರುವುದೇ ನಮ್ಮಲ್ಲಿರುವ ಆಸುರೀ ಶಕ್ತಿಗಳನ್ನು ಕುಗ್ಗಿಸು ವುದಕ್ಕಾಗಿ ಎಂಬ ನೀತಿ ಇದರಲ್ಲಿ ಅಡಗಿರುವಂತಿದೆ. ಸಕಲ ದೇವತೆಗಳ ಪ್ರಯತ್ನದಿಂದ ಮತ್ತು ಮಿಗಿಲಾಗಿ, ವಿಷ್ಣು ಸಹಾಯದಿಂದ ಇಂದ್ರನು ವೃತ್ರ ನನ್ನು ಕೊಲ್ಲಬಲ್ಲವನಾದನು.

ಕೆಲವು ಕಡೆ ವೃತ್ರನು ಕೊಲ್ಲಲ್ಪಟ್ಟನೆಂದೂ ಕೆಲವು ಕಡೆ ಇಂದ್ರನೊಡನೆ ಒಪ್ಪಂದ ಮಾಡಿಕೊಂಡು ಮೂರು ಲೋಕಗಳಿಂದಲೂ ಕಾಲ್ದೆಗೆದು ಇಂದ್ರನ ಹೊಟ್ಟೆಯಲ್ಲಿಯೇ ಹಸಿವಿನ ರೂಪದಿಂದ ಅಡಗಿದನೆಂದೂ ಹೇಳಿರುವುದರಲ್ಲಿ ಅರ್ಥ ವಿರೋಧವೇನೂ ಇಲ್ಲ. ಏಕೆಂದರೆ ಒಂದು ದೃಷ್ಟಿಯಿಂದ ಇಂದ್ರ ವೃತ್ರ ಯುದ್ಧವು ನಿರಂತರವೇ ಆದುದರಿಂದ ವೃತ್ರನು ಪೂರ್ಣವಾಗಿ ಸಾಯ ಲಿಲ್ಲ. ಇವಕ್ಕಾಗಿಯೇ ಇಂದ್ರನ ಒಳಹೊಕ್ಕಂತೆ ಹೇಳಿದೆ. ಅಲ್ಲದೆ, ಇವನ ನೂರು ಕೋಟೆಗಳಲ್ಲಿ ಇಂದ್ರನು ೯೯ನ್ನು ನಾಶಮಾಡಿದನೆಂದೂ ಆದರೆ ಒಂದನ್ನು ಮಾತ್ರ ಉಳಿಯಬಿಟ್ಟನೆಂದೂ ವೇದವೇ (ಋ.ಸಂ. VII-19-5) ಹೇಳಿದೆ. ಇದರರ್ಥವೂ ಅದೇ.

ಮತ್ತೆ ವೃತ್ರನನ್ನೇ ಬಹುವಚನದಲ್ಲಿ ವರ್ಣಿಸಿ, ಇಂತಹ ನೂರು ವೃತ್ರ ರಲ್ಲಿ ೯೯ ವೃತ್ರರನ್ನು ಕೊಂದು ಒಬ್ಬನನ್ನು ಮಾತ್ರ ಉಳಿಸಿರುವುದಾಗಿಯೂ ಒಂದು ಕಡೆಯಲ್ಲಿ (I-83-14) ವರ್ಣಿಸಿದೆ. ಇಲ್ಲೂ ವೃತ್ರನ ಅಂಶ, ಲೋಕದಲ್ಲಿ ಉಳಿದೇ ಇದೆ ಎಂದೇ ಅರ್ಥ.

ಸ್ತ್ರೀ ಲಿಂಗದಲ್ಲಿಯೂ 'ವೃತ್ರಾ' ಎಂದೂ 'ವೃತ್ರೆ' ಎಂಬ ರಾಕ್ಷಸಿಯನ್ನಾಗಿ ವರ್ಣಿಸಿರುವುದೂ ಸಹ ಈ ಪಾಪ ಶಕ್ತಿಯು ಯಾವ ಲಿಂಗವನ್ನಾದರೂ ಧರಿಸಬಹುದು ಎಂಬ ಅರ್ಥದಲ್ಲಿ ಬಳಸಲ್ಪಟ್ಟಂತೆ ಕಾಣುತ್ತದೆ. ಮತ್ತೊಂದು ದೃಷ್ಟಿಯಿಂದ ನೋಡಿದಾಗ ದೈವಕೃಪೆಯುಳ್ಳ ಹಲವು ಮಹಾ ತಪಸ್ವಿಗಳು ತಮ್ಮ ತಮ್ಮ ವ್ಯಕ್ತಿತ್ವದಲ್ಲಿ ಅಡಗಿರುವ ವೃತ್ರನನ್ನು ತಮ್ಮ ಕಾಲ, ದೇಶ, ವರ್ತಮಾನ ಪರಿಸರಗಳಲ್ಲಿಯಾದರೂ ನಿಗ್ರಹಿಸಿಕೊಂಡಿರುವರೆಂದೂ ಹೇಳಲ್ಪಟ್ಟಿದೆ.

ಒಟ್ಟಿನಲ್ಲಿ ವೃತ್ರನ ವಧೆ ಕೆಲವೊಂದು ನಿಬಂಧನೆಗಳ ಮಿತಿಯಲ್ಲಿ ಆಗತಕ್ಕದ್ದು. ಎಲ್ಲರ ಪಾಲಿಗೂ ಅವನು ಸತ್ತೇ ಇಲ್ಲ. ಒಬ್ಬನ ಪಾಲಿಗೆ ಸತ್ತಿದ್ದರೆ, ಮತ್ತೊಬ್ಬನ ಪಾಲಿಗೆ ಅವನು ಇನ್ನೂ ಬದುಕಿಯೇ ಇದ್ದಾನೆ. ಹೀಗೆ ಈ ವೃತ್ತಾಂತದಲ್ಲಿ ಮಾರ್ಮಿಕ ಅರ್ಥಗಳು ತುಂಬಿಕೊಂಡಿವೆ.

## ೧೭. ವಜ್ರಾಯುಧದ ವೃತ್ತಾಂತ, ಮಹಿಮೆ

ಈಗ ಇಂದ್ರನು ವೃತ್ರನನ್ನು ಯಾವ ಆಯುಧದಿಂದ, ಕೊಂದನು ಎಂದು ಕೇಳಿದರೆ, ಸುಪ್ರಸಿದ್ಧವಾದ ವಜ್ರಾಯುಧದಿಂದ ಎಂದು, ವೇದ ಇತಿಹಾಸ ಪುರಾಣಗಳಲ್ಲಿ ಕೇಳುತ್ತೇವೆಯಷ್ಟೇ! ಈಗ ಈ ವಜ್ರಾಯುಧದ ಕೆಲವು ಮಾರ್ಮಿಕ ವಿವರಣೆಗಳು ಅಗತ್ಯ. ಈ ಸಂದರ್ಭದಲ್ಲಿ ಆಂಗಿರಸ ಗೋತ್ರದ ಅಥರ್ವಪುತ್ರನಾದ ದಧೀಚ (ಚಿ) ಋಷಿಯ ವೃತ್ತಾಂತವೂ ಹೆಣೆದುಕೊಂಡಿದೆ :—

ಇಂದ್ರೋ ದಧೀಚೋ ಅಸ್ಥಭಿಃ ವೃತ್ರಾಣ್ಯಪ್ರತಿಷ್ಕುತಃ।
ಜಘಾನ ನವತೀರ್ನವ ॥ (I–84–13)

ಇತ್ಯಾದಿ ಅನೇಕ ಸೂಕ್ತಗಳಲ್ಲಿಯೂ, ತೈತ್ತಿರೀಯ ಸಂಹಿತೆಯ ಅನೇಕ ಭಾಗಗಳಲ್ಲಿಯೂ, ಹೆಚ್ಚೇನು, ವೇದವಾಙ್ಮಯದ ಎಲ್ಲ ಶಾಖೆಗಳಲ್ಲಿಯೂ ಇಂದ್ರನು ದಧೀಚಿ ಋಷಿಯ "ಮೂಳೆ"ಯನ್ನೇ "ವಜ್ರಾಯುಧ"ವನ್ನಾಗಿ ಮಾಡಿಕೊಂಡು ವೃತ್ರನನ್ನು "ನವತೀರ್ನವ" ಎಂಬಂತೆ, ಎಂಟನೂರ

ಹತ್ತಾವರ್ತಿ, ಅಥವಾ ಮತ್ತೆ ಕೆಲವರು ವಿವರಿಸುವಂತೆ ೯೯ ಬಾರಿ ವೃತ್ರ ನನ್ನು ಕೊಂದನು ಎಂದು ಉಕ್ತವಾಗಿ, ಇಂಥ ಅನೇಕ ಕಡೆಗಳಲ್ಲಿ ಭಾಷ್ಯ ಕಾರರು ಒಂದು ಕಥೆಯನ್ನು ವಿವರಿಸಿದ್ದಾರೆ:—

## ೧೮. ದಧೀಚ ಋಷಿಯ ಕಥೆ

ಪೂರ್ವದಲ್ಲಿ ಅಥರ್ವ ಪುತ್ರನಾದ ದಧೀಚನು ಬದುಕಿರುವ ಕಾಲದಲ್ಲಿ ಇವನನ್ನು ನೋಡಿದ ಮಾತ್ರದಿಂದಲೇ ಅಸುತರು ಸೋತು ಹೋದರು. (ಜೀವಶೋ ದರ್ಶನೇನ.) ಆಗ ಅವನು ಕಾಲಾನುಕಾಲದಲ್ಲಿ ಸ್ವರ್ಗಸ್ಥ ನಾಗಲು, ಭೂಮಿಯೆಲ್ಲವೂ ಅಸುರರಿಂದ ತುಂಬಿ ಹೋಯಿತು. ಇಂದ್ರನು ಪರಾಜಿತನಾಗಿ, ಅಸುರರೊಡನೆ ಯುದ್ಧ ಮಾಡಲಾಗದೆ, ಆ ಋಷಿಯನ್ನು ಹುಡುಕುತ್ತ ಬರಲು, ಸ್ವರ್ಗಂಗತನಾದನೆಂದು ತಿಳಿಯಿತು. ಆಗ ಆ ಋಷಿಯ ಬಳಿ ವಾಸಮಾಡಿದ್ದವರನ್ನು ಕುರಿತು ಹೀಗೆ ಕೇಳುತ್ತಾನೆ. "ದಧೀಚಿ ಋಷಿಗೆ ಸಂಬಂಧಪಟ್ಟ ಯಾವುದಾದರೊಂದು ಅಂಗವು ಪರಿಶಿಷ್ಟವಾಗಿ ಉಳಿದಿದೆಯೋ ಹೇಗೆ"? ಎಂದು.

ಇದರರ್ಥ, ದಧೀಚಿ ಮಹರ್ಷಿಯ ತಪಸ್ಸಾಮರ್ಥ್ಯವು ಅವನ ಸಕಲ ಅಂಗೋಪಾಂಗಗಳಲ್ಲಿಯೂ ಘನೀಭೂತವಾಗಿ ಇಳಿದು ಬಂದದ್ದರಿಂದ, ತತ್ಸಂಬಂಧವಾದ ಯಾವುದೇ ಅಂಶಕ್ಕೆ ಅಸುರ ನಿಗ್ರಹ ಶಕ್ತಿ ಇದೆ ಎಂದು ಇಂದ್ರನ ಗ್ರಹಿಕೆ. ಆಗ ಆ ಋಷಿಯನ್ನು ಹಿಂದೆ ಸೇವೆ ಮಾಡಿದ್ದವರು ಇಂದ್ರನಿಗೆ ಮತ್ತೊಂದು ವೃತ್ತಾಂತವನ್ನು ತಿಳಿಸಿ ಹೀಗೆ ಸಹಾಯ ಮಾಡು ತ್ತಾರೆ. "ಹಿಂದೆ ಇಂದ್ರನಿಂದಲೇ ಮಧುವಿದ್ಯೆಯನ್ನು ಪಡೆದುಕೊಂಡಿದ್ದ ದಧೀಚನು ಆ ವಿದ್ಯೆಗಾಗಿ ಅಶ್ವಿನೀ ದೇವತೆಗಳಿಂದ ಆಶ್ರಯಿಸಲ್ಪಟ್ಟಿದ್ದನು. ಆದರೆ ದಧೀಚನಿಗೆ ಒಂದು ನಿರ್ಬಂಧವಿದ್ದಿತು. ಅದನ್ನು ಯಾರಿಗಾದರೂ ಹೊರಗೆಡಹಿದರೆ, ಅವನ ತಲೆ ಕತ್ತರಿಸಿ ಬೀಳುವುದು ಎಂದು. ಆಗ ಅಶ್ವಿನೀ ಕುಮಾರರು ಒಂದು ಉಪಾಯವನ್ನು ಕಂಡುಹಿಡಿದರು. ದಧ್ಯಂಚನ ತಲೆ ಯನ್ನು ತಾವೇ ಮೊದಲು ತೆಗೆದು ಅಲ್ಲಿ ಒಂದು ಕುದುರೆಯ ತಲೆಯನ್ನು (ಹಯಗ್ರೀವನನ್ನು !) ಇಟ್ಟು ಮಧುವಿದ್ಯೆಯನ್ನು ಅವನಿಂದ ಪಡೆದು ಕೊಂಡರು. ನಂತರ ಆ ತಲೆಯು ಬಿದ್ದು ಹೋಗಲಾಗಿ, ಪುನಃ ದಧೀಚನ

ಹಿಂದಿನ ತಲೆಯನ್ನೇ ಅಲ್ಲಿ ಜೋಡಿಸಿದರು. ಈಗ ಕುದುರೆಯ ತಲೆಯ ಬುರುಡೆಯು ಮಟ್ಟಿಗೆ ಎಲ್ಲಿದೆಯೋ ನಮಗೆ ಗೊತ್ತಿಲ್ಲ" ಎಂದು ಹೇಳಿದರು.

ಇಂದ್ರನು ಪುನಃ ಅದನ್ನು ಹುಡುಕುವಂತೆ ಅವರಿಗೆ ಅಪ್ಪಣೆ ಮಾಡಲು ಅದು ಕುರುಕ್ಷೇತ್ರದ ಬಳಿ ಶರ್ಯಣಾವತ ಎಂಬ ಸರೋವರದಲ್ಲಿ ಬಿದ್ದುದನ್ನು ಅವರು ಹುಡುಕಿ ತಂದರು. ಈ ಕುದುರೆಯ ತಲೆ ಬುರುಡೆಯನ್ನೇ ಇಂದ್ರನು ವಜ್ರಾಯುಧವನ್ನಾಗಿ ಬಳಸಿದನು, ಎಂದು ಸಾಯಣಾಚಾರ್ಯರು ಹಲವಾರು ಕಡೆ ವಿವರಿಸಿದ್ದಾರೆ.

## ೧೯. ಸ್ಕಂದಸ್ವಾಮಿಗಳ ವಿವರಣೆ

ಇದೇ ಸಂದರ್ಭದಲ್ಲಿ ಸ್ಕಂದಸ್ವಾಮಿಗಳು ತಮ್ಮ ಭಾಷ್ಯದಲ್ಲಿ ಈ ಕಥೆಯನ್ನು ಮತ್ತೊಂದು ರೀತಿಯಿಂದ ಸಂಗ್ರಹಿಸಿದ್ದಾರೆ. ಹಿಂದೆ ಕಾಲಕಂಜರೆಂಬ (ಕಾಲಕೇಯ) ಅಸುರರು ದೇವತೆಗಳನ್ನು ಯುದ್ಧದಲ್ಲಿ ಸೋಲಿಸಿದಾಗ ಅವರು ಬ್ರಹ್ಮದೇವನಲ್ಲಿ ಶರಣಾಗುತ್ತಾರೆ. ಬ್ರಹ್ಮನು ದೇವತೆಗಳನ್ನು ದಧೀಚನ ಬಳಿಗೆ ಕಳುಹಿ, ಅಸುರನನ್ನು ಗೆಲ್ಲುವ ಉಪಾಯವನ್ನು ತಿಳಿಯುವಂತೆ ಆದೇಶ ನೀಡುತ್ತಾನೆ. ದೇವತೆಗಳು ಹಾಗೆಯೇ ದಧೀಚಿಯ ಆಶ್ರಮಕ್ಕೆ ಬರಲು ದಧೀಚಿಯು ಯೋಗ ಸಾಮರ್ಥ್ಯದಿಂದ ದೇವತೆಗಳ ಕ್ಷೇಮಾರ್ಥವಾಗಿ ಶರೀರ ತ್ಯಾಗ ಮಾಡಲು, ಮುಂದೆ ಇಂದ್ರನು ಈ ಮೂಳೆಗಳಿಂದಲೇ ಅಸುರರನ್ನು ಕೊಂದನು, ಎಂಬುದೇ ಈ ವಿವರಣೆ.

ದಧೀಚಿಗೆ ಕುದುರೆಯ ತಲೆ ಬಂದ ವೃತ್ತಾಂತ (ಋ. ಸಂ.I–117–22) ದಲ್ಲಿ ವರ್ಣಿತವಾಗಿದೆ. ಈ ತಲೆ ಬುರುಡೆಯು ಶರ್ಯಣಾವತಿಯಲ್ಲಿ ಸಿಕ್ಕಿತೆಂಬ ವೃತ್ತಾಂತ, (ಋ. ಸಂ. I–84–13) ದಲ್ಲಿ ವರ್ಣಿತವಾಗಿದೆ. ಬೃಹದ್ದೇವತೆಯಲ್ಲಿ ಶೌನಕರು ಸಹ (III–19–24) ರಲ್ಲಿ ಇದನ್ನು ಸೂಚಿಸಿದ್ದಾರೆ.

ಇಲ್ಲಿ ಇನ್ನೊಂದು ವಿಶೇಷವೇನೆಂದರೆ, ಅಶ್ವಿನೀ ದೇವತೆಗಳಿಗೆ ಯಾವ ತಲೆಯಿಂದ ದಧೀಚನು ಬ್ರಹ್ಮಸ್ವರೂಪವನ್ನು ವಿವರಿಸಿದನೋ ಆ ಹಯಶಿರಸ್ಸು ಶರ್ಯಣಾವತಿಯಲ್ಲಿ ಬಿದ್ದಿದ್ದು ಮಾತ್ರವಲ್ಲದೆ, ಆಗಾಗ ಮೇಲಕ್ಕೆ ಬಂದು ಸಕಲ ಭೂತರಾಶಿಗಳಿಗೂ ವಿವಿಧ ವರವನ್ನು ಅನುಗ್ರಹಿಸುತ್ತಿದ್ದಿ

ತೆಂದೂ, ಮತ್ತೆ ಮತ್ತೆ ಅಲ್ಲೇ ಮುಳುಗುತ್ತಿದ್ದಿತೆಂದೂ ಯುಗ ಪರ್ಯಂತ ಇದು ನಡೆದು ಬರುತ್ತಿರುವುದೆಂದೂ ಹೇಳಿದೆ.

ತದಪ್ಯಸ್ತು ಸಮುತ್ಥಾಯ ಭೂತೇಭ್ಯೋ ವಿವಿಧಾಸ್ಸುರಾನ್ ।
ಪ್ರಾದಾಯ ಯುಗ ಪರ್ಯಂತಂ ತಾಸ್ವೇವಾಪ್ಸು ನಿಮಜ್ಜತಿ ॥
(ಅದೇ ೨೪)

## ೨೦. ಶ್ರೀ ಮದ್ಭಾಗವತದಲ್ಲಿ ವೃತ್ರ ಕಥೆ

ಶ್ರೀ ಮದ್ಭಾಗವತದಲ್ಲಿಯೂ ಈ ವೃತ್ತಾಂತ ಹೀಗೆ ಬಂದಿದೆ. (VI-9)

ಇಂದ್ರನು ವಿಶ್ವರೂಪನ ತಲೆಯನ್ನು ಕತ್ತರಿಸಿದನೆಂದು ಹೇಳಿದೆಯಷ್ಟೆ. (ಈ ತಲೆಗಳು ಸೋಮಪೀಥ, ಸುರಾಪೀಥ, ಅನ್ನಾದ ಎಂಬುದಾಗಿ ಪ್ರಸಿದ್ಧಿ ಪಡೆದಿದ್ದವು. ಇವೇ ಮುಂದೆ ಕಪಿಂಜಲ, ಕಲವಿಂಕ, ಮತ್ತು ತಿತ್ತಿರಿ, ಎಂಬ ಪಕ್ಷಿಗಳಾದವು ಎಂದು ಭಾಗವತದಲ್ಲಿ ಹೇಳಿದೆ.) ಇಂದ್ರನ ಈ ಬ್ರಹ್ಮ ಹತ್ಯಾ ದೋಷವನ್ನು ಭೂಮಿ, ನೀರು, ಮರಗಳು, ಮತ್ತು ಸ್ತ್ರೀಯರು ನಾಲ್ಕು ಭಾಗಗಳನ್ನಾಗಿ ಹಂಚಿಕೊಂಡರೆಂದೂ, ಅವು ವ್ಯಕ್ತಪಡುವ ಪ್ರಕಾರವನ್ನೂ ಸಹ ಶ್ರೀಭಾಗವತ ವರ್ಣಿಸಿದೆ.

ಇಷ್ಟರಲ್ಲಿ ತ್ವಷ್ಟೃವಿನ ಕೋಪದ ಫಲವಾಗಿ ನಡೆದ ಯಜ್ಞದಲ್ಲಿ "ಇಂದ್ರಶತ್ರುವಾಗಿ" ಹುಟ್ಟಿದ ವೃತ್ರನು ಮೂರು ಲೋಕಗಳನ್ನೂ ಆವರಿಸಿ, ಪರಮ ಪಾಪ ಸ್ವರೂಪನಾಗಿ, ಅನ್ವರ್ಥವಾಗಿಯೇ ವೃತ್ರನೆನಿಸುತ್ತಾನೆ. ದೇವತೆಗಳೆಲ್ಲರೂ ಒಟ್ಟುಗೂಡಿ. ಭಗವಂತನಾದ ವಾಸುದೇವನನ್ನು ಶರಣು ಹೊಂದಲು ಆಗ ಭಗವಂತನು ಇಂದ್ರನಿಗೆ ಈ ಸಂದೇಶವನ್ನು ನೀಡುತ್ತಾನೆ: "ಅಯ್ಯಾ ಇಂದ್ರ, ಋಷಿಶ್ರೇಷ್ಠನಾದ ದಧ್ಯಂಚನನ್ನು ಸಂದರ್ಶಿಸಿ, ವಿದ್ಯಾವ್ರತ-ತಪಸ್ಸುಗಳ ಸಾರಭೂತವಾದ ಅವನ ಶರೀರವನ್ನೇ (ವಿದ್ಯಾವ್ರತ ತಪಸ್ಸಾರಂ ಗಾತ್ರಂ) ನೀವು ಯಾಚಿಸಿರಿ. ಬೇಗ ಹೋಗಿ. ಅವನು ಬ್ರಹ್ಮ ಸ್ವರೂಪವನ್ನು ಅರಿತವನು. ಅವನ ಶರೀರವು ಅಭೇದ್ಯವೂ, ನನ್ನನ್ನೇ ಅಂತರಾತ್ಮನನ್ನಾಗಿ ಹೊಂದಿದ್ದೂ ಆಗಿದೆ. ನೀವು ಕೇಳಿದರೆ, ಇಲ್ಲವೆನ್ನಲಾರನು. ನಂತರ ಅವನ ಮೂಳೆಯಿಂದ ವಿಶ್ವಕರ್ಮನ ಮೂಲಕ ಒಂದು ಆಯುಧ ಶ್ರೇಷ್ಠವನ್ನು ನಿರ್ಮಿಸಿಕೊಳ್ಳಿ. ಒಳ್ಳೆಯದಾಗುವುದು."

ಇಲ್ಲಿ ದಧೀಚ ಶರೀರದ ವರ್ಣನೆ ಬಹಳ ಮಾರ್ಮಿಕವಾಗಿದೆ. ದೇವತೆಗಳು ದಧೀಚಿನಲ್ಲಿಗೆ ಬಂದಾಗ, ತ್ಯಾಗವೆಂಬ ದೊಡ್ಡ ತತ್ವದ ಬಗೆಗೆ ಅತ್ಯಾಶ್ಚರ್ಯಕರವಾದ ಒಂದು ಸಂವಾದವೇ ಏರ್ಪಡುತ್ತದೆ. ಕೊನೆಯಲ್ಲಿ ದಧೀಚಿಯು ಸಂತುಷ್ಟನಾಗಿ ಶರೀರ ತ್ಯಾಗಮಾಡಲು, ಇಂದ್ರನು "ಮುನೇಃ ಶಕ್ತಿಭಿಃ ಉತ್ಸಿಕ್ತಃ ಭಗವತ್ ತೇಜಸಾನ್ವಿತಃ" ಎಂಬಂತೆ ಮುನಿ ಶಕ್ತಿಯಿಂದ ಮತ್ತು ಭಗವಂತನ ತೇಜಸ್ಸಿನಿಂದ ಒಡಗೂಡಿ, ಆ ವಜ್ರಾಯುಧದಿಂದಲೇ ವೃತ್ರನನ್ನು ಕೊಲ್ಲುತ್ತಾನೆ. ಅವನ ಅನುಯಾಯಿಗಳಾದ ನಮುಚಿ, ಶಂಬರ, ದ್ವಿಮೂರ್ಧಾ, ಅನರ್ವಾ, ಪುಲೋಮಾ,ಹಯಗ್ರೀವ, ಶಂಕುಶಿರ, ವಿಪ್ರಚಿತ್ತಿ, ಅಯೋಮುಖ, ಎಂಬ ಸಹಸ್ರಾರು ದಾನವರನ್ನೂ ಸಂಹರಿಸುತ್ತಾನೆ.

ವಜ್ರಾಯುಧವನ್ನೂ ತ್ವಷ್ಟೃವೇ ಕೊಟ್ಟನೆಂದೂ ವೇದದಲ್ಲಿ ಹೇಳಿರುವುದನ್ನು ಹಿಂದೆಯೇ ಹೇಳಲಾಗಿದೆ. ಇದಕ್ಕೂ ಈ ಮೇಲಿನ ವಿವರಣೆಗಳಿಗೂ ವಿರೋಧವಿಲ್ಲ. ತ್ವಷ್ಟೃವೇ ದೇವಶಿಲ್ಪಿಯಾದ ವಿಶ್ವಕರ್ಮ. ಇವನು ದಧೀಚಿಯ ಮೂಳೆಯಿಂದ ವಜ್ರವನ್ನು ನಿರ್ಮಿಸಿಕೊಟ್ಟನೆಂದು ಭಾವ. ಹಿಂದೆ ವಿವರಿಸಿದ ತೈತ್ತಿರೀಯ ಸಂಹಿತೆಯ ಪ್ರಸಂಗದಲ್ಲಿ ದಧೀಚಿಯ ಪ್ರಸ್ತಾಪವು ಹೆಚ್ಚಾಗಿ ಬಂದಿಲ್ಲವಾದುದರಿಂದ ಬಹು ಸಂಗ್ರಹವಾಗಿ, ತ್ವಷ್ಟೃವೇ ಕೊಟ್ಟನೆಂದು ಹೇಳಿದುದಾಗಿ ತಿಳಿಯಬೇಕು.

ದಧೀಚನ ಮೂಳೆ, ತಲೆಬುರುಡೆಯದಾಗಿರಲಿ, ಬೆನ್ನು ಮೂಳೆಯದಾಗಿರಲಿ, ಸಾಂಕೇತಿಕಾರ್ಥದಲ್ಲಿ ಏನೂ ಬಾಧಕವಿಲ್ಲ. ದಧೀಚನು ಋಷಿಮಂಡಲದಲ್ಲಿ ಅತ್ಯಂತ ಉಜ್ವಲ ಚಾರಿತ್ರನಾದ ಋಷಿ. ಇಡೀ ಅಥರ್ವವೇದವೇ ಅನೇಕ ಉಪಶಾಸ್ತ್ರಗಳನ್ನೊಳಗೊಂಡು ಅವನ ದೊಡ್ಡ ಕೊಡುಗೆ. ಅವನ ಜೀವಿತವೆಲ್ಲ ತ್ಯಾಗಮಯ. ಅವನಿಂದ ಉಪದಿಷ್ಟವಾದ ಮಧುವಿದ್ಯೆಯೇ ಲೋಕಕ್ಕೆ ಬ್ರಹ್ಮಸ್ವರೂಪವನ್ನು ಮೊದ ಮೊದಲಾಗಿ ಹೊರಗೆಡಹಿತು. ಪರಮಾತ್ಮ ತತ್ತ್ವವು ಇದರಲ್ಲಿಯೇ ಪ್ರತಿಷ್ಠಿತವಾಗಿದೆಯೆಂದೂ, ಭಗವಂತನನ್ನು ಒಂದು ಪಕ್ಷಿಗೆ ಹೋಲಿಸಿರುವ ತೈತ್ತಿರೀಯ ಶ್ರುತಿಯು "ಅಥರ್ವಾಂಗಿರಸಃ ಪುಚ್ಛಂ ಪ್ರತಿಷ್ಠಾ" ಎಂಬಲ್ಲಿ ಹೇಳಿದೆ. ಲೋಕವ್ಯಾಪಕನಾದ ವೃತ್ರನನ್ನು ಸಂಹರಿಸಲು ದಧೀಚಿಯ ಮೂಳೆಗಳಲ್ಲಿ

ಇಳಿದು ಬಂದಿರುವ ತ್ಯಾಗ ಶಕ್ತಿಯು ಒಂದು ಮಾತ್ರ ವಜ್ರಾಯುಧ ವಾಗ ಬಲ್ಲುದು ಎಂಬುದೇ ಈ ಇತಿಹಾಸದ ಮರ್ಮ.

ಇಂದ್ರನು ವೃತ್ರನನ್ನು ಕೊಲ್ಲಲು ಸಿದ್ಧನಿರಬಹುದು. ನಮ್ಮಲ್ಲಿ ಬೆಳೆದು ನಿಂತ ಪಾಪ ಶಕ್ತಿಯನ್ನು ನಿಗ್ರಹಿಸಲು ದೇವರು ಸರ್ವದಾ ಸಿದ್ಧ ನಾಗಿಯೇ ಇದ್ದಾನಲ್ಲವೆ ? ಆದರೆ ಎಲ್ಲರಲ್ಲಿಯೂ ಅವನು ಇದನ್ನು ಏತ ಕ್ಕಾಗಿ ಮಾಡಿಯೇ ಬಿಡಲಿಲ್ಲ ? ಎಂದು ಕೇಳಿದರೆ, ಎಲ್ಲೆಲ್ಲಿ ದಧೀಚಿ ಋಷಿಗೆ ಸಾಂಕೇತಿಕಾರ್ಥ ಸಮಾನತೆಯನ್ನು ಹೊಂದಿದಂತೆ, ತ್ಯಾಗತತ್ವವಿದೆಯೋ ಅಲ್ಲೆಲ್ಲ ಇಂದ್ರನ ಕೈಗೆ ವಜ್ರಾಯುಧವು ಸಿಕ್ಕಿ ವೃತ್ರವಧೆ ನಡೆದೇ ಇದೆ. ಯಾರಲ್ಲಿಯಾದರೂ ವೃತ್ರವಧೆಯು ಇನ್ನೂ ನಡೆಯದೇ ಇದ್ದರೆ, ಅದು ಇಂದ್ರನ ದೋಷವಲ್ಲ. ಅಲ್ಲಿ ದಧೀಚಿ ಸಾಂನ್ನಿಧ್ಯ. (ತ್ಯಾಗದ ಅವಿಷ್ಕರಣ) ಆಗದಿರುವುದೇ ಕಾರಣವಾಗಿರಬೇಕು. ಹೀಗೆ ವೃತ್ರವಧೆಗೆ ನಿತ್ಯ ಸತ್ಯವೊಂದರ ಮಾರ್ಮಿಕಾರ್ಥ ವ್ಯಾಪಕವಾಗಿದೆ.

## ೨೧. ಆಂಗ್ಲ ಕವಿಯೊಬ್ಬನ ಮನೋಹರ ವಿವರಣೆ

ಈ ಕಥೆಯ ಮಾರ್ಮಿಕ ಅರ್ಥವನ್ನು ಇತ್ತೀಚೆಗೆ ಆಂಗ್ಲ ಕವಿಗಳಲ್ಲಿ ಸುಪ್ರಸಿದ್ಧನಾದ ಟಿ. ಎಸ್. ಎಲಿಯಟ್ ಎಂಬ ಮಹಾನುಭಾವನು ಯಥಾ ವತ್ತಾಗಿ ಗ್ರಹಿಸಿ ''The Waste Land'' ಎಂಬ ತನ್ನ ಅಭೂತಪೂರ್ವ ಕವನವೊಂದರಲ್ಲಿ ಬಳಸಿಕೊಂಡಿದ್ದಾನೆ. ಇದರ ವಸ್ತು ವೃತ್ರವಧೆಯ ಕಥೆಯ ವಸ್ತುವೇ ಆಗಿದೆ. ಮಾನವಜೀವನವು ಮರಳುಗಾಡಾಗಿ, ಬಂಜರುಭೂಮಿ ಯಾಗಿದೆ. ಇದನ್ನು ಫಲವತ್ತನ್ನಾಗಿ ಮಾಡಲು. ಇಲ್ಲಿ ಮಳೆಯನ್ನು ತರಿಸಿ, ಸುರಿಸುವುದೆಂತು ?ನೈರುಕ್ತಕಾರರು "ತತ್ಕೋ ವೃತ್ರಃ? ಮೇಘ ಇತಿ" ಎಂದು ವೃತ್ರನನ್ನು ಮಳೆ ಸುರಿಸದ ಮೋಡಕ್ಕೆ ಸರಿಯೆಂದು ಭಾವಿಸಿ ವಿವರಿಸಿ ರುವಂತೆ, ಈ ಆಂಗ್ಲ ಕವಿಯೂ ಗ್ರಹಿಸಿದ್ದಾನೆ. ನಮ್ಮ ವೈದಿಕ ಗ್ರಂಥಗಳ ಬಗೆಗೆ ಸಾಕಷ್ಟು ಅಪಪ್ರಚಾರ ನಡೆಸಿರುವ ಮಹನೀಯರಲ್ಲಿ ಒಬ್ಬನಾದ ಗ್ರೈಸವಾಲ್ಡ ಎಂಬುವನೂ ಸಹ ತನ್ನ **The Religion of the Rigveda** ಎಂಬ ಗ್ರಂಥದಲ್ಲಿ ಇದರ ವಿಷಯಕ್ಕೆ (ವೇದ ಸಂಸ್ಕೃತಿಯ ಪರಿ ಚಯ ಸಂಪುಟ ೧ ಪು. 9-10 ನ್ನೂ ನೋಡಿ,) ಹೀಗೆ ಬರೆದಿದ್ದಾನೆ :

"Vritra manipulates lightning, thunder, mist, darkness and hail.. His mother is Danu, ('drip'), a name of the rain-cloud which sprinkles only a few drops. 'She of the drip' is the mother of a demon-brood, of which Vritra means a false thunderstorm with little or no rain. while Indra means a thunderstorm followed by abundant rain." (p. 183.)

ಇದರಲ್ಲಿ ಅನೇಕ ಅಂಶಗಳು ನಮಗೂ ಸಂಮ್ಮತವೇ. ಆದರೆ ವೃತ್ರನು ಮಳೆ ಸುರಿಸದ ಮೇಘವೆಂಬುದು ವಾಚ್ಯಾರ್ಥದಲ್ಲಿ ಮಾತ್ರವಲ್ಲದೇ ಸಾಂಕೇತಿಕವೂ ಆಗಿದೆ ಎನ್ನುವುದನ್ನು ಮನಗಂಡ ಹೊರತು ವೇದದ ಆದ್ಯಂತವಾಗಿ, ಎಲ್ಲ ಕಡೆಯಲ್ಲಿಯೂ ಪ್ರಸ್ತಾಪಿಸಲ್ಪಟ್ಟಿರುವ ಈ ವೃತ್ತಾಂತದ ಪರಿಪೂರ್ಣವಾದ ತಿಳಿವಳಿಕೆ ಆಗಲಾರದು. ಭಾರತೀಯರು ಇಂಥ ದುರ್ವಾದಗಳನ್ನು ಮಾಡುತ್ತ ಕ್ರೈಸ್ತರು ತೋಡಿದ ಹಳ್ಳದಲ್ಲಿ ಬಿದ್ದಿರುವಾಗ, ಆಂಗ್ಲ ಕವಿಯೊಬ್ಬನು ನಮಗಿಂತ ಚೆನ್ನಾಗಿ ಇದರ ಅರ್ಥವನ್ನು ಗ್ರಹಿಸಿ, ಅದನ್ನು ಈ ಕೆಳಕಂಡಂತೆ ತನ್ನ ಕಾವ್ಯಮಯ ಭಾಷೆಯಲ್ಲಿ ಚಿತ್ರಿಸಿರುವುದನ್ನು ಕಂಡು, ನಾವೇ ನಾಚಿಕೆಪಡಬೇಕಾಗಿದೆ !

Ganga was sunken, and the limp leaves
Waited for rain, while the black clouds
Gathered for distant, over Himavant
The jungle crouched, humped in silence.
Then spoke the thunder.

ಇದರ ಭಾವ ಹೀಗಿದೆ : "ಗಂಗೆಯು ಬತ್ತಿ ಹೋಗಿದ್ದಿತು. ಹಿಮವತ್ ಪರ್ವತದ ತಪ್ಪಲಿನ ಸಕಲ ಅರಣ್ಯಗಳ ಎಲೆಗಳೂ ಒಣಗಿ ಹೋಗಿ, ಮಳೆಗಾಗಿ ತಪಿಸುತ್ತಿದ್ದುವು. ಕಪ್ಪು ಮೋಡಗಳೂ ಸಹ ಆಗ ಕಾಣಿಸಿಕೊಂಡವು; ಆದರೆ ದೂರದಲ್ಲಿ ಮಾತ್ರ, ಬಹುದೂರದ ಹಿಮವಂತನ ಮೇಲೆ ಆಕಾಶದಲ್ಲಿ. ಆಗ ಅರಣ್ಯವು ತನ್ನನ್ನು ನಿಶ್ಶಬ್ದವಾಗಿ, ನಿಶ್ಚೇತನವಾಗಿ ಮುದುಡಿಕೊಂಡು ಆಶಾಭಾವದಿಂದ ಮೇಲೆ ನೋಡುತ್ತ ಆ ಮೇಘವು

ಎಂದಿಗೆ ಮಳೆಸುರಿಸುವುದೋ ಎಂದು ಕಣ್ಣೆತ್ತಿ ನೋಡುತ್ತ ಬಿದ್ದು ಕೊಂಡಿತ್ತು.

## ೨೨. ಮೋಡವು ನೀಡಿದ ಸಂದೇಶ! — 'ದ'

ಆದರೆ ಮೇಘವು ಆಗ ಮಳೆಯನ್ನು ಸುರಿಸಲೇ ಇಲ್ಲ! ಅದಕ್ಕೆ ಬದಲಾಗಿ ದೊಡ್ಡದಾಗಿ ಗುಡುಗಿ ಮೂರೇ ಮೂರು ಶಬ್ದಗಳನ್ನು ಆಡಿ ಅರ್ಭಟಿಸಿ, ನಿಶ್ಶಬ್ದವಾಯಿತು. ಆ ಮೂರು ಶಬ್ದಗಳೇ "ದಾ, – ದತ್ತ, ದಯಧ್ವಂ, ದಾಮ್ಯತ" ಎಂಬವು.

ಇಲ್ಲಿಯೂ ಈ ಆಂಗ್ಲಕವಿಯು ವೇದವಾಙ್ಮಯದ ಇನ್ನೊಂದು ಕಥೆಯನ್ನು ಬಳಸಿಕೊಂಡು ಸಮಯೋಚಿತವಾಗಿ, ಹೆಣೆದಿದ್ದಾನೆ. ಇದೇ ಬೃಹದಾರಣ್ಯಕೋಪನಿಷತ್ತಿನ (V–3) ಸುಪ್ರಸಿದ್ಧವಾದ ಪ್ರಜಾಪತಿಯ ಉಪದೇಶದ ಭಾಗ.

ಒಮ್ಮೆ ದೇವಮನುಷ್ಯ ಅಸುರರು ಪ್ರಜಾಪತಿಯಲ್ಲಿ ಗುರುಕುಲವಾಸ ಮಾಡಿ ಜ್ಞಾನಸಂಪಾದನೆಗೆಂದು ಬ್ರಹ್ಮಚರ್ಯವನ್ನು ನಡೆಸಿದರು. ವಿದ್ಯಾಭ್ಯಾಸ ಮುಗಿದು ತಮ್ಮ ತಮ್ಮ ಸ್ಥಾನಗಳಿಗೆ ಹೊರಡುವ ಮುನ್ನ ಪ್ರಜಾಪತಿಯನ್ನು ರಹಸ್ಯೋಪದೇಶಕ್ಕಾಗಿ ಪ್ರಾರ್ಥಿಸಲು, ಆವನು 'ದ' ಎಂಬ ಒಂದೇ ಅಕ್ಷರವನ್ನು ಅವರಿಗೆಲ್ಲ ಉಪದೇಶಿಸಲು, ಅದನ್ನು ಈ ಮೂವರೂ ಮೂರು ಬಗೆಯಾಗಿ ತಿಳಿದುಕೊಂಡರು. ಮೊದಲು ದೇವತೆಗಳು ಇದರಿಂದ 'ದಾಮ್ಯತ' ಎಂದು ಎಂದರೆ "ಇಂದ್ರಿಯ ದಮನ ಶೀಲರಾಗಿರಿ" ಎಂಬ ಸಂದೇಶವನ್ನು ಗ್ರಹಿಸಿದರು. ಮಾನವರು ಅದೇ ಶಬ್ದದಿಂದ 'ದತ್ತ' ಎಂದರೆ "ದಾನ ಮಾಡಿರಿ" ಎಂಬ ಸಂದೇಶವನ್ನು ಗ್ರಹಿಸಿದರು. ಹಾಗೆಯೇ ಅಸುರರು (ದಯಧ್ವಂ), ಎಂದರೆ "ದಯಾಶೀಲರಾಗಿರಿ" ಎಂದು ಗ್ರಹಿಸಿದರು. (ಇಂದ್ರಿಯ ಅಭಿಮಾನಿಗಳಾದ ದೇವತೆಗಳಿಗೆ ದಮೆಯೂ, ಸ್ವಭಾವ ಸಹಜವಾಗಿ ಸ್ವಾರ್ಥಪರರಾದ ಮಾನವರಿಗೆ ದಾನವೂ. ಹಾಗೆಯೇ ಸಹಜವಾಗಿ ಕ್ರೂರರಾದ ಅಸುರರಿಗೆ ದಯೆಯೂ ಅತ್ಯವಶ್ಯ ಗುಣಗಳು, ಎಂಬುದನ್ನೇ ಈ ಕಥೆ ತಿಳಿಸುತ್ತಿದೆ. ಯಾರಲ್ಲಿ ಯಾವ ಗುಣವಿಲ್ಲವೋ, ಅದನ್ನೇ ಉಪದೇಶ ಕೊಟ್ಟದ್ದಾಗಿ ಅವರವರು ಗ್ರಹಿಸಿರುವುದು ಮನಶ್ಶಾಸ್ತ್ರದ ಪ್ರಕ್ರಿಯೆಗೂ

ಅನುಗುಣವಾಗಿದೆ.) ಹೀಗೆ ಸಂದೇಶದ ಸರಿಯಾದ ಗ್ರಹಿಕೆ ಆದ ಬಳಿಕ ಪ್ರಜಾಪತಿಯು ಅವರನ್ನು ಆಶೀರ್ವದಿಸಿ ಕಳುಹಿಸಿದನೆಂದೂ ಆ ದಿನದಿಂದ ಮೊದಲುಗೊಂಡು ಈ ವರೆಗೂ ಎಂದೆಂದಿಗೂ ಇದೇ ಸಂದೇಶವನ್ನೇ ಮಳೆ ಗಾಲದಲ್ಲಿ ನೀರಿನಿಂದ ಕೂಡಿದ ಮೇಘವೂ ದೈವೀ ವಾಕ್ಕಿನ ರೂಪದಲ್ಲಿ 'ದ ದ ದ' ಎಂಬುದಾಗಿ ಅನುವದಿಸುತ್ತಾ ದಮೆ – ದಾನ – ದಯಾ ಲಕ್ಷಣ ರೂಪವಾದ ಸಂದೇಶವನ್ನೇ ಬೋಧಿಸುತ್ತಿದೆ ಎಂದು ಉಪನಿಷತ್ತು ತಿಳಿಸುತ್ತದೆ :

ತದೇತದೇವ ಏಷಾ ದೈವೀ ವಾಕ್ ಅನುವದತಿ
ಸ್ತನಯಿತ್ನುಃ ।
ದ ದ ದ ಇತಿ ದಾಮ್ಯತ ದತ್ತ ದಯಧ್ವಮಿತಿ ॥

ಹೀಗೆ ಮೇಘವು ಮಳೆಯನ್ನು ಕೊಡಬೇಕಾದರೆ ಭೂಮಿಯಲ್ಲಿ ಮಾನವ ರಲ್ಲಿ ದಾನ–ದಯೆ–ದಮೆ, ಎಂಬ ಗುಣಗಳು ಮೂಡಬೇಕು. ಇಲ್ಲದಿದ್ದರೆ 'ಬರಗಾಲ' ತಪ್ಪಿದ್ದಲ್ಲ, ಎಂಬ ಸಂದೇಶವನ್ನು ವೃತ್ರನ ಕಥೆಗೆ ಈ ಆಂಗ್ಲ ಕವಿಯು ಅನ್ವಯಿಸಿರುವುದು ಬಹು ಸಮಂಜಸವಾಗಿದೆ ಹೇಗೆಂದರೆ, ದಧೀಚಿ ಮಹರ್ಷಿಯ ತಲೆಬುರುಡೆ, ಅಥವಾ ಬೆನ್ನುಮೂಳೆ, ತ್ಯಾಗದ ಸಂಕೇತವೇ. ಇದರಿಂದಲೇ ವಜ್ರಾಯುಧವನ್ನು ಮಾಡಿಕೊಂಡು ಇಂದ್ರನು ಮಳೆ ಸುರಿಸುತ್ತಾನೆ; ವೃತ್ರನನ್ನು ಕೊಲ್ಲುತ್ತಾನೆ, ಎಂಬ ಮಾತಿನಲ್ಲಿಯೂ ಲೋಕೋಪಕಾರಕವಾದ ತ್ಯಾಗ ತತ್ತ್ವದ ಸಂದೇಶವೇ ಅಡಗಿದೆ. ಈ ಆಂಗ್ಲ ಕವಿಯು ತನ್ನ ಕವನವನ್ನು 'ದತ್ತ ದಯಧ್ವಂ ದಾಮ್ಯತ, ಶಾಂತಿಃ, ಶಾಂತಿಃ, ಶಾಂತಿಃ' ಎಂಬ ಶಬ್ದಗಳೊಂದಿಗೇ ಮುಕ್ತಾಯ ಮಾಡಿದ್ದಾನೆ. ಮಳೆ ಬಿದ್ದಿತೆಂದು ಹೇಳಿಲ್ಲ. ಆದರೆ ಶಾಂತಿಪಾಠವೇ ಮಳೆ ಬಂದ ಅನುಭವ ವನ್ನು ಮನಮುಟ್ಟಿಸುತ್ತದೆ, ಎಲ್ಲಿ ಈ ಗುಣಗಳಿವೆಯೋ ಅಲ್ಲಿ ಮಳೆ, ಎಂಬ ನಿಬಂಧನೆಯ ಚೌಕಟ್ಟನ್ನು ಕವಿಯು ಮರೆತಿಲ್ಲ.

ಹೀಗೆ ಇಂದ್ರ ವೃತ್ರ ವೃತ್ತಾಂತದಲ್ಲಿ ವೇದದ ಅತಿ ಮುಖ್ಯವಾದ ವಿಚಾರಧಾರೆಯೊಂದು ಅಡಗಿರುವುದು ವಿಶ್ವಮಾನ್ಯವಾಗಿ ಸುಪ್ರಸಿದ್ಧವಾಗಿರು ವುದನ್ನು ಭಾರತೀಯರಾದ ನಾವು ಈಗಲಾದರೂ ತಿಳಿಯಬೇಕಾಗಿದೆ.

## ೨೩. ಇತರ 'ಇಂದ್ರ'ವೈರಿಗಳು

ವೃತ್ರನಲ್ಲದೆ ನಮುಚಿ ಮುಂತಾದ ಇತರ ಅಸುರರೂ ಇಂದ್ರ ವೈರಿಗಳೆಂದು ಹಿಂದೆ ಹೇಳಿದೆಯಷ್ಟೆ ? ನಮುಚಿ ಶಬ್ದಕ್ಕೆ "ಇಂದ್ರೇಣ ಸಹ ಯುದ್ಧಂ ನಮುಂಚತೀತಿ ನಮುಚಿಃ" ಎಂಬ ನಿರುಕ್ತದಂತೆ "ಇಂದ್ರನ ಕೂಡ ಯಾವಾಗಲೂ ಯುದ್ಧವನ್ನು ಬಿಡದವನು" ಎಂಬ ಅರ್ಥದಲ್ಲಿ ಇವನೂ ಸಾಂಕೇತಿಕವಾದ ಪಾಪ ಶಕ್ತಿಯೇ. ಇವನ ವಿಷಯವು ಋಗ್ವೇದದಲ್ಲಿ ಮಾತ್ರವಲ್ಲದೆ, ತೈತ್ತಿರೀಯ ಬ್ರಾಹ್ಮಣದಲ್ಲಿಯೂ (I–1–7) ಬಂದಿದೆ. ಇಂದ್ರನು ವೃತ್ರನನ್ನು ಕೊಂದ ಮೇಲೂ ನಮುಚಿಯು ಕೈಗೆ ಸಿಕ್ಕಲಿಲ್ಲ. ಶಚಿಯನ್ನು ಅಪಹರಿಸಲು ಅವನು ಯತ್ನಿಸುತ್ತಿದ್ದನು. ಇಂದ್ರ ಶಚಿಯರನ್ನು ಒಟ್ಟಾಗಿ ನಮುಚಿಯು ಬಂಧಿಸಲು, ಅವರನ್ನು ಬಿಡಬೇಕಾದರೆ ತಾನು ಇಂದ್ರನ ಕೂಡ ಒಂದು ಒಪ್ಪಂದಕ್ಕೆ ಬಂದನು. "ನ ಮಾ ಶುಷ್ಕೇನ ನಾರ್ದ್ರೇಣ ಹನಃ ನ ದಿವಾ ನ ನಕ್ತಮಿತಿ." "ನನ್ನನ್ನು ಒಣಗಿದ ಪದಾರ್ಥದಿಂದಲಾಗಲಿ, ಹಸಿಯ ಪದಾರ್ಥದಿಂದಲಾಗಲಿ, ರಾತ್ರಿಯಲ್ಲಿ ಅಥವಾ ಹಗಲಿನಲ್ಲಾಗಲಿ, ಕೊಲ್ಲತಕ್ಕದ್ದಲ್ಲ" ಎಂದು. ಇಂದ್ರನು "ಸಮುದ್ರದ ನೊರೆ"ಯಿಂದ ಸಮಯ ನೋಡಿ ಸಂಧ್ಯಾಕಾಲದಲ್ಲಿ ಅವನನ್ನು ಕೊಲ್ಲಲು ಬಂದರೆ, "ಮಿತ್ರದ್ರೋಹಿ" ಎಂದು ಕೂಗಿಕೊಂಡನಂತೆ. ಆದರೂ ಇಂದ್ರನು ಒಂದು ಯಜ್ಞ ವಿಶೇಷವನ್ನು ಆಚರಿಸಿ ಅವನನ್ನು ಕೊಂದನಂತೆ.

ಸಂಧ್ಯಾಕಾಲವೇ ರಾಕ್ಷಸರ ಪ್ರಬಲಕಾಲ ಎಂಬುದನ್ನು ಹಿಂದಿನ ಲೇಖನದಲ್ಲಿ ವಿವರಿಸಲಾಗಿದೆ. 'ನೀರೂ' ಮತ್ತು 'ಸಮುದ್ರ'ವೆಂಬುದೂ ಅನುಭವ ಮತ್ತು ಜ್ಞಾನಗಳ ದಿವ್ಯ ಸಂಕೇತ. ಇದರ ನೊರೆ ಎಂದರೆ, ಬ್ರಹ್ಮಾನುಭೂತಿಯ ದಿವ್ಯಸಾರ, ಎಂಬ ಅರ್ಥವಾಗುತ್ತದೆ. ಇದು ಶುಷ್ಕ ಜ್ಞಾನವೂ ಅಲ್ಲ ಅಥವಾ ಹಸಿಯದಾಗಿ ಕೇವಲ ಐಹಿಕ ಭೋಗವರ್ಧಕವೂ ಅಲ್ಲ. ಅಂದ ಮೇಲೆ ನಮುಚಿಯನ್ನು ಕೊಲ್ಲಲು ಇದೇ ಉತ್ತಮಸಾಧನ,

## ೨೪. ಸ್ತ್ರೀಯರೂ 'ಆಯುಧ'

ಈ ನಮುಚಿಯೂ ಸಹ ವಕ್ರಮಾರ್ಗದಲ್ಲಿ ಇಂದ್ರನನ್ನು ಮೋಸಗೊಳಿಸಲು ಅನೇಕ ಸ್ತ್ರೀಯರನ್ನೂ ಆಯುಧಗಳನ್ನಾಗಿ ಬಳಸಿ, ಇಂದ್ರನಲ್ಲಿಗೆ ಕಳುಹಿಸಿಕೊಟ್ಟನು ಎಂಬ ಮಾತು ವೇದದಲ್ಲೇ ಬರುತ್ತದೆ : "ಸ್ತ್ರಿಯೋ ಹಿ ದಾಸ ಅಯುಧಾನಿ ಚಕ್ರೇ" (ಋ. ಸಂ, V–30–9 ). ಇಂದ್ರನು

ಇದಕ್ಕೆ ವಶವಾಗದೆ, "ಕಿಂ ಮಾ ಕರನ್ ಅಬಲಾ ಅಸ್ಯ ಸೇನಾಃ." "ಏನಿದು ಅಬಲೆಯರಾದ ಸ್ತ್ರೀಯರನ್ನು ಸಸೈನ್ಯವನ್ನಾಗಿ ನನ್ನಲ್ಲಿ ಕಳುಹಿದನೇ?" ಎಂದು ಕೋಪಗೊಂಡು ಆ ಸ್ತ್ರೀಯರನ್ನು ಬಂಧಿಸಿ ಯುದ್ಧ ಮಾಡಿದನಂತೆ. ಇಂದಿಗೂ ಐಹಿಕ ಭೋಗಾರ್ಥ ಲಾಭಗಳಿಗಾಗಿ ಸ್ತ್ರೀಯರನ್ನು ಮುಂದೆ ಒಡ್ಡಿ, ತಾವು ಹಿಂದೆ ನಿಲ್ಲುವ (ಪುರುಷರು) ಇರುವರಷ್ಟೇ ! ಇವರೆಲ್ಲ ಸಾಂಕೇತಿಕ ವಾಗಿ "ನಮುಚಿ"ಯ ಪ್ರತೀಕಗಳು. ಎಲ್ಲೆಲ್ಲಿ ಇಂತಹ ವಕ್ರವಿಧಾನ ಗಳುಂಟೋ ಅಲ್ಲೆಲ್ಲಾ ಇಂದ್ರ ಭಯ ಇದ್ದೇ ಇದೆ. ಶಂಬರನೇ ಮುಂತಾದ ಅಸುರರು ಹೀಗೆಯೇ ೯೦, ೯೯, ಮತ್ತು ನೂರು ಕೋಟೆಗಳನ್ನು ಹೊಂದಿದ್ದ ವರೆಂದೂ ಇಂದ್ರನಿಂದ ಪರಾಜಿತರಾದರೆಂದೂ, ಇವರೆಲ್ಲರೂ ಅಯಜ್ವಾನಃ ಎಂಬಂತೆ ಯಜ್ಞ ವಿರೋಧಿಗಳಾಗಿದ್ದರೆಂದೂ, ಶಿಶ್ನದೇವಾಃ ಎಂಬಂತೆ ಕಾಮಭೋಗ ಒಂದರಲ್ಲೇ ಆಸಕ್ತರಾಗಿದ್ದರೆಂದೂ "ಮೃಧ್ರವಾಚಃ" ಎಂಬಂತೆ ಅನೃತವಾದಿಗಳೆಂದೂ, "ಅನಾಸಾಃ" ಎಂಬಂತೆ, ವೇದ ಶಬ್ದ ಜ್ಞಾನವಿಲ್ಲದ ಮೂಕರೆಂದೂ, ಪರಮಾರ್ಥ ಗಂಧವೇ ಇಲ್ಲದವರೆಂದೂ, ವೇದದಲ್ಲಿ ವರ್ಣಿತವಾಗಿರುವುದು ಸಾಂಕೇತಿಕ ಅರ್ಥದಲ್ಲಿ. ಇಂದ್ರನು ಹೀಗೆ ಭಗವಂತನ ಕ್ಷಾತ್ರ ಶಕ್ತಿಯನ್ನು, ಶತ್ರು ನಿರೋಧಕ ಸ್ವರೂಪವನ್ನು ಪ್ರತಿ ಬಿಂಬಿಸುತ್ತಾ ಲೋಕಕ್ಕೆ ಅನುಗ್ರಹಮಯನಾಗಿ ವರ್ಣಿಸಲ್ಪಟ್ಟಿದ್ದಾನೆ.

## ೨೫. ಉಪಸಂಹಾರ

ಇಂದಿನ ನಮ್ಮ ಸಮಾಜದಲ್ಲಿ ವೃತ್ರರೂ, ನಮುಚಿಗಳೂ, ಶಂಬರರೂ ತುಂಬಿ ಹೋಗಿದ್ದಾರೆ. ಪ್ರವಹಿಸಬೇಕಾದ ಜೀವನಗತಿ ತಡೆ ಹಿಡಿಯಲ್ಪಟ್ಟು ಅಶಾಂತಿ, ಅವ್ಯವಸ್ಥೆಗಳು ಎಲ್ಲೆಲ್ಲೂ ಇವೆ. ವಕ್ರಮಾರ್ಗದಿಂದ ಕ್ಷಿಪ್ರ ಯಶಸ್ಸನ್ನು ಬಯಸುವ ಈ ದೇವಶತ್ರುಗಳನ್ನು ಭಗವಂತನಾದ ಇಂದ್ರನೇ ನಿಗ್ರಹಿಸಿ ದಾರಿ ತೋರಿಸಲಿ ಎಂಬುದೇ ವೈದಿಕರ ಪ್ರಾರ್ಥನೆ. ಸ್ವಾರ್ಥವೇ ವೃತ್ರ. ಪರಾರ್ಥವೇ ಇಂದ್ರ. ಇಂದ್ರವಿಜಯದಲ್ಲಿ ನೆರವಾಗುವುದು ಎಲ್ಲ ಆಸ್ತಿಕರ ಇಂದಿನ ಆದ್ಯ ಕರ್ತವ್ಯ.

ಯದಕ್ಷರ ಪದಭ್ರಷ್ಟಂ ಮಾತ್ರಾ ಹೀನಂ ತು ಯದ್ಭವೇತ್ ।
ತತ್ಸರ್ವಂ ಕ್ಷಮ್ಯತಾಂ ದೇವ ನಾರಾಯಣ ನಮೋಸ್ತುತೇ ॥

॥ ಶ್ರೀ ಕೃಷ್ಣಾರ್ಪಣಮಸ್ತು ॥

## ‘ವೇದ ಸಂಸ್ಕೃತಿಯ ಪರಿಚಯ’ ಸಂ-೨ರ ಬಗೆಗೆ

### ‘ಪ್ರಜಾವಾಣಿ’ಯ ವಿಮರ್ಶೆ

“ವೇದ ಜಾಹ್ನವಿಯು ಸಜ್ಜನರನ್ನು ಶುದ್ಧರನ್ನಾಗಿ ಮಾಡಿ, ಅಜ್ಞಾನದಿಂದ ಜ್ಞಾನಜ್ಯೋತಿಯ ಕಡೆಗೆ, ಕತ್ತಲೆ ಯಿಂದ ಬೆಳಕಿನತ್ತ ಕರೆದೊಯ್ಯಲೆಂಬ ಸದಭಿಲಾಷೆಯಿಂದ, ಗ್ರಂಥಕರ್ತರು ಕಾಠಕೋಪನಿಷತ್ತಿನ ಅಂತರಾರ್ಥವನ್ನು ಹೊರ-ಗೆಡವಲು ಈ ಗ್ರಂಥದಲ್ಲಿ ಪ್ರಯತ್ನ ಪಟ್ಟಿರುತ್ತಾರೆ; ಸಾಕಷ್ಟು ಯಶಸ್ವಿಗಳಾಗಿರುತ್ತಾರೆ. ಪಾಶ್ಚಾತ್ಯ ವಿಚಾರಧಾರೆಯ ಗುಲಾಮ ರಾಗಿ ಜ್ಞಾನಿಗಳೆಂದು ಕರೆದುಕೊಳ್ಳುವವರನ್ನು ಹೊಡೆದೆಬ್ಬಿ-ಸಿರುತ್ತಾರೆ. ಇವರ ವಿಚಾರಧಾರೆ ಹರಿತವಾದ ಅಲುಗಿನಂತೆ ಪರಿಣಾಮಕಾರಿಯಾಗಿರುತ್ತದೆ; ಇವರ ಬರೆಹದಲ್ಲಿ ಪಾಂಡಿತ್ಯದ ಓಜಸ್ಸು ಪ್ರತಿಬಿಂಬಿತವಾಗಿರುತ್ತದೆ. ಆಳವಾದ ಅಧ್ಯಯನ ಪ್ರಕಟಿತವಾಗಿದೆ.

ಒಟ್ಟಿನಸಲ್ಲಿ, ಏಳ ಅಧ್ಯಾಯಗಳಿಂದ ಕೂಡಿದ ಈ ಗ್ರಂಥವು ಆಸ್ತಿಕರಿಗೆ ಮನೋಜ್ಞವಾಗಿ, ವಿಚಾರಪೂರಿತವಾಗಿ, ಸಂಪ್ರದಾಯ ಬದ್ಧವಾಗಿ, ಲೇಖಕರ ವಿಷಯ ವಿವೇಚನೆಯ ಕೈದೀವಿಗೆಯಾಗಿದೆ.”

——